ಅರೆಕನ್ನಡ ಕಾದಂಬರಿ

# ಇರುದರವೆಲ್ಲ ಬುಟ್ಟೊ



ಮೂಲ: ಡಾ। ಪ್ರಭಾಕರ ಶಿಶಿಲ

ಅನುವಾದ : ಕುಯಿಂತೋಡು ದಾಮೋದರ

# ಇರುದರನೆಲ್ಲ ಬುಟ್ಟ್

- ಕುಯಿಂತೋಡು ದಾಮೋದರ

"ಹಸಿರು"
ಚೆಂಬು ಗ್ರಾಮ, ಅಂಚೆ: ಬಾಲಂಬಿ –574234
ಮಡಿಕೇರಿ ತಾಲೂಕು, ಕೊಡಗು.
ದೂರವಾಣಿ: ಸ್ಥಿರ: 08257–266176
ಚರ: 9901315963

ಇರುದರನೆಲ್ಲ ಬುಟ್ಟ್

ಕುಯಿಂತೋಡು ದಾಮೋದರ
"ಹಸಿರು"
ಚೆಂಬು ಗ್ರಾಮ, ಅಂಚೆ: ಬಾಲಂಬಿ –574234
ಮಡಿಕೇರಿ ತಾಲೂಕು, ಕೊಡಗು.
ದೂರವಾಣಿ: ಸ್ಥಿರ: 08257–266176
ಚರ: 9901315963

ಪ್ರಥಮ ಮುದ್ರಣ : 2014

ಬೆಲೆ : ರೂ. 100/–
ಮುಖಪುಟ : ಬಾಸುಮ ಕೊಡಗು
ಮೂಲ : ಡಾ। ಪ್ರಭಾಕರ ಶಿಶಿಲ
ಪ್ರಕಾಶಕರು : ಅಮ್ಮ ಪ್ರಕಾಶನ ಕಟಪಾಡಿ, ಉಡುಪಿ
ಮುದ್ರಣ : ಶ್ರೀ ವಿನಾಯಕ ಪ್ರೆಸ್
ಅಂಚೆ : ಸಂಪಾಜೆ 574234
ದೂರವಾಣಿ : 08257–266287
Email : shreevinayakapress@gmail.com

# ಮುನ್ನುಡಿ

ಇದ್ ಸುಳ್ಯ ತಾಲೂಕ್ನ ಸುಪ್ರಸಿದ್ದ ಸಾಹಿತಿ ಪ್ರೊ. ಪ್ರಭಾಕರ್ ಶಿಶಿಲರ ಕಾದಂಬರಿನ ಅನುವಾದ. ಇದರ್ಲಿ ಗೌಡ ಜನಾಂಗದ ಸಂಪ್ರದಾಯಗ, ಸಾವು ಬೊಜ್ಜ, ಮದುವೆ, ಕೊಲೆ ಮದ್ವೆ ಹೀಂಗೆ ಗೌಡ ಕುಟುಂಬದ ಒಂದು ಬಡ ಮಧ್ಯಮ ವರ್ಗದ ಮೂರು ತಲೆಮಾರ್ನ ಕತೆ ಉಟ್ಟು. ಇದರ ದೃಶ್ಯಗ ಕಣ್ಣ್‌ಗೆಕಟ್ಟಿದಾಂಗೆ ಕಾಣ್ಸಿಕಂಡದೆ. ಇದರ್ನ ಒಂದು ಸಿನೇಮ ಅಲ್ಲರೆ ದಾರವಾಹಿ ಮಾಡಕ್. ಶಿಶಿಲರ ಕಾದಂಬರಿ ಓದಿದರೂನೂ ನಂಗೆ ಈ ಯೋಚ್ನೆ ಬಂದಿತ್ತಿಲ್ಲೆ. ಅರೆಬಾಷೇಲಿ ಇದ್ ದಾಮೋದರನವುಕೆ ಸಿಕ್ಕುವ ಹೆಗ್ಗಳಿಕೆ.

ಕೋಟಿಚೆನ್ನಯ್ಯ ತುಳು ಯಕ್ಷಗಾನ ಸಿನೇಮ ಆದ ಮೇಲೆ ಪ್ರಖ್ಯಾತಿಗೆ ಬಾತ್. ಅದ್ ಕನ್ನಡಲಿ ಇರ್ಕನ ಅದರಲ್ಲಿರುವ ಪಾತ್ರಗಳ್ಗೆ ಜೀವಂತಿಕೆ ಸಿಕ್ಕಿತ್ಲೆ. ಯಾಗ ಆಯಾಯ ಪಾತ್ರಗ ಅವರ್ದೇ ಬಾಷೆಲಿ ಮಾತಾಡ್ವೇನೊ ಆಗ ಜೀವ ತುಂಬಿಕಂಡದೆ. ಈ ವಿಶ್ಯ ನಾಟ್ಕ ಮಾಡ್ಸಕನ ಆಗಾಗ ನಾ ಹೇಳ್ತಿದ್ದೆ. ದ.ಕ. ಮತ್ತೆ ಕೊಡ್ಗು ಜಿಲ್ಲೆಗಳ್ಲಿ ಹೆಚ್ಚಿನವು ಮನೆಗಳ್ಲಿ ಕನ್ನಡ ಮಾತಾಡ್ದುಲೆ. ನಾಟಕಕಾರ್ರ್ ಮತ್ತೆ ಕಾದಂಬರಿಕಾರ್ರ್ ಇಲ್ಲಿನ ಪಾತ್ರಗಳ್ಗೆ ಜೀವ ತುಂಬ್ಸಿಕೆ ಸೋತವೆ. ಶಿಶಿಲ್ರೇ ಆದರೂ ಸಂಬಾಷಣೆನ ಪೂರ್ತಿ ಅರೆಬಾಷೆಲೆ ಬರ್ರ್ಯೊಕಿತ್ತ್.

'ಕುಸುಮಬಾಲೆ' ದೇವನೂರುಮಾದೇವನೌರ್ನ ಎಷ್ಟೊಂದು ಎತ್ರಕ್ಕೆ ಏರ್‌ಸ್ತಿಂತ ಎಲ್ಲೌಕು ಗೊತ್ತಿರ್ಪ ವಿಶ್ಯ. 'ಕುಸುಮಬಾಲೆ'ನ ಬಾಷಾಂತರ ಮಾಡೊಕುಂತಲು ಗೇಲಿ ಮಾಡಿದ್ದೊ. ಅರೆಬಾಷೆನೂ ಬರ್ರ್ಯೊಕು ಕಷ್ಟ ಓದಿಕೊ ಕಷ್ಟ. ಈಗಿನ ಕಂಪ್ಯೂಟರ್ ಅವಲಂಬಿತ ಪ್ರೆಸ್‌ಗಳ್ಲಿ ಮುದ್ರಿಸಿಕೇ ಆದ್ಲೆಂತ ಪ್ರೊ.ಕೋಡಿ ಕುಶಾಲಪ್ಪ ಗೌಡ್ರು ಹೇಳ್ವೆ, 1970ಲ್ರಿ ಅವು ಬರ್ದ 'ಗೌಡಕನ್ನಡ' ಪುಸ್ತಕ ಇರ್ದು ಇಂಗ್ಲೀಷ್‌ಲಿ ಅದರ್ನ ಕನ್ನಡಕ್ಕೆ ಬಾಷಾಂತರ ಮಾಡ್ಕೆ ಪ್ರಯತ್ನ ಮಾಡ್ಕನ ಈ ಕಸ್ಟ ಗೊತ್ತಾತ್. ಅರೆಬಾಷೆ ಉಚ್ಚಾರಣೆಗಳ್ಗೆ ಕೆಲವು ಸಂಕೇತಗಳ ತಯಾರಿಸಿದ್ದೊ! ಅದೆಲ್ಲ ಈಗಿನ ಕಂಪ್ಯೂಟರ್‌ಲಿ ಇಲ್ಲೆ. ಹಾಂಗಾಗಿ ಹಳೆ ಮೊಳೆ ಜೋಡಣೆ ಪ್ರೆಸ್‌ಗಳ ವಿಚಾರ್ಸಿಕನ ಈಗ ಯಾವುದೂ ಚಾಲ್ತಿಲಿ ಇಲ್ಲೆಂತ ತಿಳ್ದ್‌ಬಾತ್.

ಯುನೆಸ್ಕೊದ ವರದಿ ಪ್ರಕಾರ ಅಪಾಯದಂಚಿಲಿ ಇರುವ ಬಾಷೆಗಳ ಬಗ್ಗೆ ನನ್ನ ಬಾಷಣಗಳ್ಲಿ ಹೇಳ್ತಿದ್ದೆ. ಅದರ್ಲಿ ನಾಕ್ ಹಂತಗಳ್ಲಿ ಅಪಾಯ ಗುರ್ತು ಮಾಡಿದ್ದೊ. ಕೊನೆ ಹಂತಲಿ ಸಾಯುತ್ತಿರ್ಪ ಬಾಷೆನ ಕೇವಲ ಕೆಲ್ವು ಅಜ್ಜ ಅಜ್ಜಿಗ ಮಾತ್ರ ಮಾತಾಡ್ವವು ಉಳ್ಕಂಡ್ ಇದ್ದವೆ. ಸದ್ಯ ನಾವ್ ಈಗಳೂ ಆ ಸ್ಥಿತಿಗೆ ಬಾತ್ಲೆ. ನಾವ್ಗೆ ಈಗ್ಲು ಅರೆಬಾಷೆಲಿ ಅಭಿಮಾನ ಉಟ್ಟು. ನಮ್ಮ್‌ಕ್ಳಿಗೆ ಅರೆಭಾಷೆ ಕಲ್ಸಿಕಂಡ್ ಬೆಳ್ಸಿಕಂಡ್ ಒಳೊ. ಆದ್ರೆ ನಾವೆಲ್ಲ ಇನ್ನೊಂದು ರೀತಿಲಿ ಅರೆಬಾಷೆನ ಕೊಲ್ತ ಒಳೊ. ಐವತ್ ವರ್ಷಕ್ಕೆ ಹಿಂದೆ ನಾವ್ ಮಾತಾಡಿಕಂಡ್ ಇದ್ದ ಅರೆಬಾಷೆ ಈಗ ಎಷ್ಟೋ ಬದ್ಲಾಗುಟು. ವಸಿ, ಹನಿ, ಹನೀಸ್, ಹಂಞದ ಬದ್ಲಿಗೆ "ಸ್ವಲ್ಪ" ಆಗುಟು. ಕೊಂಬರೆ ಕೋಣೆ

ಆಗುಟು. ಇಸುದರ ಬದ್ಲಿಗೆ ಇಡುದು ಸುರಾಗುಟು. ಕರ್ಯಕನ 'ಓಂಕಂಕಿಲ್ಲೆ' ಅಂತ ಹೇಳ್ಳು. ಹಳ್ಳಿಲಿ ಮೂಲೆಗುಂಪಾಗಿ ಇರ್ವ ಮುದ್ಕಿ ಮುದ್ಕರ್‌ನ ಅಸಡ್ಡೆ ಮಾಡ್ದೆ ಅವ್ರಂದ ಅರೆಬಾಷೆ ಶಬ್ದ ಬಂಡಾರನ ದೊಡ್ಡದ್ ಮಾಡೊಮೊ.

ಈಗ ಅರೆಬಾಷೆ ವಾರ್ತೆ ಮಡಿಕೇರಿ ಆಕಾಶವಾಣಿಲಿ ಬಿತ್ತರಿಸುವೆ. ಒಮ್ಮೊಮ್ಮೆ ಅದರ್ಲಿ ಕನ್ನಡ ಪದಗಳೇ ತುಂಬಿಕೊಂಡ್ ಅರೆಬಾಷೆ ಕಾಂಬೊದೇಲೆ. ಈಗ 'ಇರ್ದುದೆಲ್ಲ' ಸಾಕಾದುಲೆ ಉಳ್ದದರ್‌ನ ಹುಡ್ಕೊಕಾದೆ. ನಮ್ಮ ಮಕ್ಕಳಿಗೆ ಅರೆಬಾಷೆ ಕಲ್ಸಿರೆ ಮಾತ್ರ ಸಾಲ್ದ್. ನಮ್ಮ ನಮ್ಮ ಅರೆಬಾಷೆಗೆ ಬುಟ್ಟ್ ಹೋದ ಹಳೆ ಶಬ್ದಗಳ್ನ ಹುಡ್ಕಿ ಅವುಗಳ್ನ ಜೋಡ್ಸಿ ಮಾತಾಡಿಕೆ ಶುರು ಮಾಡೊಮೊ.

ದಾಮೋದರನವು ಬಾಗಮಂಡಲಲಿ ಮಾಸ್ಟ್ರ ಆಗಿದ್ದ್ ಸಂಪಾಜೆ ಮತ್ತು ಅಲ್ಲ ಸುಳ್ಯ ರೋಟರಿ ಜೂ. ಕಾಲೇಜಿಲಿ ಪ್ರಿನ್ಸಿಪಾಲ್ ಆಗಿದ್ದೊ. ಅರೆಬಾಷೆಲಿ ಬರೆಯಕೆ ಸಾದ್ಯ ಇರ್ವ ಸಾವಿರಾರ್ ಶಿಷ್ಯರ್ನ ಹೊಂದಿರುವವು. ಗುರುಗಳಾಗಿ ಇವು ಅರೆಬಾಷೆನ ಬಲಪಡ್ಸಿಕೆ ನಾವು ಇವ್ರಂದ, ಇನ್ನಷ್ಟ್ ನಿರೀಕ್ಷೆ ಇಸಿಕಂಕ್. ಇವರ ಮಕ್ಳು ಮೊಮ್ಮಕ್ಕಳೆಲ್ಲಾ ಕಲಾವಿದರೆ. ಇವರ ಸೊಸೆ ಸ್ಮಿತಾ ಅಮೃತರಾಜ್. ಇವರ ಶ್ರೀಮತಿ ಶಾಂತಿಯವರೊಟ್ಟಿಗೆ ಇಡೀ ದೇಶದ ಬೇರೆ, ಬೇರೆ ಭಾಗಗಳಿಗೆ ಪ್ರತಿವರ್ಷ ಪ್ರವಾಸ ಹೋಗ್ತಾ ಒಳೊ. ಇದರ ಅನುಬವಗಳ್ನ ಇವ್ರಂದ ತಿಳ್ಕಂಬಕೆ ನಾವೆಲ್ಲ ಆಸೆ ಪಟ್ಟವೆ.

ಸ್ವತಂತ್ರ ಕೃತಿ ಬರ್ಯಕೆ ಮುಂದೆ ಈ ಬಾಷಾಂತರ ಮಾಡ್ತ್ರಂದ ಅವುಕೆ ಅಪ್ಪಟ ಅರೆಬಾಷೆಲಿ ಬರಿಯಕೆ ಹೆಚ್ಚಿನ ಅನುಬವ ಸಿಕ್ಕಿರ್ದು. ಬರ್ಯೊದು ಮಾತಾಡ್ದಷ್ಟ್ ಸುಲ್ಬ ಅಲ್ಲ. ಒಂದ್ ಸಾಲ್ ಬರ್ದ ಮೇಲೆ ಬದ್ಲಿಸಕೊಂತ ಕಂಡ್ ಬಂದದೆ. ಕೊಳಂಬೆ ಪುಟ್ಟಣ್ಣ ಗೌಡ್ರ ಶುದ್ದ ಕನ್ನಡ 'ಕಾಲೂರ ಚೆಲುವೆ'ನ ಹಾಂಗೆ ಇವರ ಬಾಷಾಂತರ ಅಪ್ಪಟ ಅರೆಬಾಷೆಲಿ ಉಟ್ಟು, ಇದ್ಕೆ ಲೇಖಕರ್ ಇರ್ವ ಪರಿಸರ, ಪರಿವಾರ, ಸಹವಾಸಗಳ್‌ಂದ ಇದರ್ನ ಸಿದ್ದಿಸಿಕೊಂಡೊಳೊ.

ಅರೆಬಾಷೆ ಸರಿಯಾಗಿ ಮಾತಾಡಿಕೆ ಕಲ್ಯೋಕೂಂತ ಆಸೆ ಇರುವವೌಕೆ ಒಂದ್ ಕಿವಿಮಾತ್, ಗಟ್ಟಿಯಾಗಿ ಓದಿರೆ ನಿಮ್ಮ ಅರೆಬಾಷೆ ಗಟ್ಟಿಯಾದೆ. ಹೊಸದಾಗಿ ತುಳು ಬಾಷೆಯವರ್ನ ಮದುವೆ ಸಂಬಂದ ಆದ ಮನೆಯವುಕೆ ಅರೆಬಾಷೆ ಕಲಿಯಕೆ ಕಲ್ಸಿಕೆ ಪ್ರಯೋಜನ ಆದೆ.

ಇದರ್ನ ಮಡಿಕೇರಿ ಆಕಾಶವಾಣಿ ಪ್ರಸಾರ ಆಗ್ವಾಂಗೆ ಮಾಡ್ರೆ ಹಾಂಗೂ ಇದರ ನಾಟ್ಕ ರೂಪಾಂತರ ಮಾಡ್ಸಿರೆ ರಂಗಬೂಮಿ ಇದರ್ನ ಮಿಂಚುವ ಹಾಂಗೆ ಮಾಡುದು. ಒಳ್ಳೆದ್, ಮುಂದೆನ ಎಲ್ಲಾ ವಿಶ್ಯಕ್ಕೂ ನನ್ನ ಸಾಕಾರ ಉಟ್ಟು..

**– ಎನ್.ಎಸ್. ದೇವಿಪ್ರಸಾದ್**

ಮಾಜಿ ಅಧ್ಯಕ್ಷರು,
ಕರ್ನಾಟಕ ಅರೆಭಾಷೆ ಸಂಸ್ಕೃತಿ
ಮತ್ತು ಸಾಹಿತ್ಯ ಅಕಾಡೆಮಿ
ಸಂಪಾಜೆ–ಕೊಡಗು

# ಅನುವಾದಕರ ಮಾತ್ (ನನ್ನ ಮಾತ್)

'ಇರುದರನೆಲ್ಲ ಬುಟ್ಟ್' ಎಂಬ ಈ ಕಿರು ಕಾದಂಬರಿ ಮೂಲತ ಡಾ. ಪ್ರಭಾಕರ ಶಿಶಿಲರ್ ಕನ್ನಡ ಬಾಸೆಲಿ ಬರ್ದ 'ಇರುವುದೆಲ್ಲವ ಬಿಟ್ಟು' ಎಂಬ ಕಾದಂಬರಿನ ಅರೆಕನ್ನಡ ರೂಪಾಂತರ. ಡಾ. ಶಿಶಿಲರ್ ನಾನಾ ರಂಗಗಳ್ಲಿ ಕೈಯಾಡ್ಸಿದ ವ್ಯಕ್ತಿ. ಸಾಹಿತ್ಯ, ಯಕ್ಷಗಾನ, ಪ್ರವಾಸ, ಚಾರಣ, ಸಾಮಾಜಿಕ ಚಟುವಟಿಕೆಗಳ್ಲಿ ತನ್ನನ್ನ್ ತಾನ್ ತೊಡ್ಗಿಸಿಕೊಂಡದಲ್ಲದೆ ತನ್ನ ವಿದ್ಯಾರ್ಥಿಗಳ್ನೂ ತೊಡ್ಗಿಸಿಕಂಡ್ ಅವರಲ್ಲೂ ಸ್ಫೂರ್ತಿ ತುಂಬಿದ ಜನಪ್ರಿಯ ಶಿಕ್ಷಕ.

ಅವು ಅವರ 'ಇರುವುದೆಲ್ಲವ ಬಿಟ್ಟು' ಎಂಬ ಕನ್ನಡ ಕಾದಂಬರಿನ ಅರೆಕನ್ನಡಲಿ ಬರೆನಿಂತ ನನ್ನಲ್ಲಿ ಹೇಳಿಕಾಕನ ಆ ಬಗ್ಗೆ ನಾನೇನೂ ಉತ್ಸಾಹ ತೋರಿಸಿತ್ಲೆ. ಕನ್ನಡಲಿ ಇರುದರ್ನ ಅರೆಕನ್ನಡಲಿ ಬರಿದು ಏನ್ ದೊಡ್ಡಸ್ತಿಕೆಂತೇಳಿ ಸುಮ್ಮನಿದ್ದೆ. ಅನ್ಯ ಬಾಸೆಗಳಲಿರುವ ಮಹಾನ್ ಕೃತಿಗಳ್ನ ಬಾಸಾಂತರ ಮಾಡಿರೆ ಅದೊಂದು ಸಾದನೆಂತೇಳಕಲ್ಲದೆ ಇದರ್ಲಿ ಏನುಟ್ಟುಂತೇಳಿ ಸುಮ್ಮನಿದ್ದರೂ ಅವು ಒತ್ತಾಯ ಮಾಡ್ತಲೇ ಇದ್ದೊ. ಹಾಂಗೆ ಯೋಚನೆ ಮಾಡಿಕಾಕನ ಇದರ ಕತಾವಸ್ತು ಸುಳ್ಯ ಪರಿಸರಕ್ಕೆ ಅದರ್ಲೂ ಗೌಡ ಜನಾಂಗಕ್ಕೆ ತೀರ ಹತ್ರ ಇರುದರ್ಂದ ಒಂದು ಪ್ರಯೋಗ ಮಾಡ್ವಂಗೆ ಆತ್ಂತೇಳಿ ಬರೆಕೆ ಸುರುಮಾಡ್ದೆ.

ಬರೆತಾ ಹೋಕಾಕನ ಕೆಲವು ಸಮಸ್ಯೆಗ ಎದ್ರಾತ್. ಮುಖ್ಯ ಸಮಸ್ಯೆಂತೇಳಿರೆ ಕನ್ನಡಕ್ಕೆ ಸಮನಾದ ಅರೆಕನ್ನಡ ಪದಗಳೇ ನೆನ್ಪಿಗೆ ಬರ್ತಿತ್ಲೆ. ನೆನ್ಪಿಗೆ ಬಂದ ಪದಗಳ ಬಾಯಿಲಿ ಹೇಳುವಾಂಗೆ ಅಕ್ಷರಲಿ ಬರಿದು ಹೇಂಗೆಂತೇಳ್ವ ಸಮಸ್ಯೆ ಇನ್ನೊಂದು. ನಮ್ಮ ಅರೆಕನ್ನಡ ನಮ್ಮ ಅಜ್ಜನ ಕಾಲಂದ ಅಲ್ಲದಿದ್ರೂನು ಅಪ್ಪನ ಕಾಲಂದಲೇ ಕನ್ನಡೀಕರಣ ಆಗ್ತಾ ಬಂದುಟು. ನಾವ್ ಇಂದ್ ಅರೆಕನ್ನಡ ಮಾತಾಡಿರೂ ಮಾತ್ನ ನಡುಲಿ ಕನ್ನಡನೋ ಇತರ ಬಾಸೆಗಳ ಪದಗಳ್ನೊ ಬಳ್ಸುವೆ. ಪೇಟೆಂದ ದೂರ ಇರುವ ಹಳ್ಳಿ ಮೂಲೆಗೆ ಹೋದರೆ ಅಲ್ಲಿ ಎಲ್ಲಾದರ್ ಅಜ್ಜ, ಅಜ್ಜಿಗ ಇದ್ದರೆ ಒಂದಿಷ್ಟ್ ಸುದ್ದ ಅರೆಕನ್ನಡ ಬಾಸೆ ಕೇಳೊಕೋ ಏನೊ. ಈ ರೂಪಾಂತರನ ಅಂತ ಕಡೆಗೆ ಹೋಗಿ ಇನ್ನೊಮ್ಮೆ ತಿದ್ದಿ ಬರ್ದರೆ ಇದರ ನಿಜ ರೂಪಾಂತರ ಬಾದೂಂತ ಈಗಳೂ ನಂಗೆ ಅನ್ಸಿದೆ. ಇನ್ನೊಂದು ವಿಷಯಂತೇಳಿರೆ ಕನ್ನಡಲಿ ಇರುದರ್ನ ಓದಿಕಂಡ್ ಹೋಕಾಕನ ನೆನ್ಪಿಗೆ ಬಾರದ ಅರೆಕನ್ನಡ ಪದಗ ಅರೆಕನ್ನಡಲಿ ಬರ್ದ್ ಓದಿಕಾಕನ

ನೆನ್ಪಾದುಟ್ಟು. ಅಂತೂ ಹೇಂಗೋ ಬರ್ದ್ ಮುಗ್ಸಿ ಈಗ ಈ ರೂಪಕ್ಕೆ ಇಳ್ಸಿ ಒಮ್ಮೆ ಮುಚ್ಚಿ ಇಸಿದರ ಶಿಶಿಲರ್ ಮತ್ತೆ ಎಚ್ಚರಿಸಿದರ್‌ಂದ ನಿಮ್ಮ ಮುಂದೆ ತಂದೊಳೆ.

ಇದಕ್ಕೆ ಮುನ್ನಡಿ ಬರ್ಸುವ ಬಗ್ಗೆ ಯೋಚನೆ ಬಾಕಾಕನ ಮನ್ಸಿಗೆ ಹೊಳ್ದ ಹೆಸ್ರ್‌ಂದರೆ ಶ್ರೀ ಎನ್.ಎಸ್.ದೇವಿಪ್ರಸಾದರ್. ಅವು ಹೇಂಗೂ ಗೌಡ ಅರೆಬಾಸೆ ಅಕಾಡಮೀನ ಅದ್ಯಕ್ಷರಾಗಿದ್ದವು. ನಮ್ಮ ಗೌಡ ಜನಾಂಗದ ಬಗ್ಗೆ ಬಾಸೆ, ಸಂಸ್ಕೃತಿ ಬಗ್ಗೆ ಚಿಂತನೆ ನಡ್ಸಿದವು. ಅವರ್ನ ವಿನಂತಿಸಿಕಾಕನ ಒಪ್ಪಿ ಮುನ್ನುಡಿ ಬರ್ದ್‌ಕೊಟ್ಟೊಳೊ. ಅವ್ಕೆ ನನ್ನ ಕೃತಜ್ಞತೆ ಸಲ್ಲಿಸಿನೆ.

ಇದರ ಬರೆಕಾಕನ ಅಲ್ಲಲ್ಲಿ ಅರೆಬಾಸೆ ಪದಗಳ ನೆನ್ಪಿಸಿದ ಶ್ರೀಮತಿ ಸರಸ್ವತಿಯವುಕೂ ಹಾಂಗೆನೆ ಅರೆಬಾಸೆ ಪದಗಳ ತಿಳ್ಸಿದಲ್ಲದೆ ಕೈ ಬರಹದ ಪ್ರತಿ ತಯಾರಿ ಮಾಡಿಕೆ ಉಪಕರಿಸಿದ ಸೊಸೆ ಸ್ಮಿತಾ ಅಮೃತರಾಜ ಅವುಕೂ, ನಾನಾ ರೀತಿಲಿ ಸಹಕರಿಸಿದ ಎಲ್ಲವುಕೂ ನಾನ್ ಕೃತಜ್ಞ.

ಈ ಕಾದಂಬರಿನ ಲಿಪಿಜೋಡನೆ ಕಾರ್ಯನಿರ್ವಹಿಸಿ ಮುದ್ರಿಸಿಕೊಟ್ಟ ಸಂಪಾಜೆ, ಕಲ್ಲುಗುಂಡಿ ಶ್ರೀ ವಿನಾಯಕ ಪ್ರೆಸ್ಸಿನ ಯಜಮಾನರಾದ ಶ್ರೀ ಗಂಗಾಧರ ಅವರಿಗೂ ಅವರ ಸಹಾಯಕ ವರ್ಗಕ್ಕೂ ನನ್ನ ಅನಂತ ಧನ್ಯವಾದಗ ಉಟ್ಟು.. ಈ ಪುಸ್ತಕದ ಮುಖಪುಟ ವಿನ್ಯಾಸಗೊಳಿಸಿದ ಬಾಸುಮ ಕೊಡಗು, ಈ ಪುಸ್ತಕನ ಪ್ರಕಟಿಸಿ ಹೊರತಂದ ಅಮ್ಮ ಪ್ರಕಾಶನ ಕಟಪಾಡಿ ಉಡುಪಿ ಇವುಕೆ ನನ್ನ ದನ್ಯವಾದ ಸಂದದೆ.

**ಕುಯಿಂತೋಡು ದಾಮೋದರ**
"ಹಸಿರು"
ಚೆಂಬು ಗ್ರಾಮ, ಅಂಚೆ: ಬಾಲಂಬಿ –574234
ಮಡಿಕೇರಿ ತಾಲೂಕು, ಕೊಡಗು.
ದೂರವಾಣಿ: ಸ್ಥಿರ: 08257–266176
ಚರ: 9901315963

# ೧. ಹರ್ದ್ ಹೋದ್

ತಪಸ್ವಿನಿನ ಬಲ ದಂಡೆಲಿ ಅವ್ಳ ಮನೆ. ಮನೆ ಎದ್‌ರಿಗೆ ದೊಡ್ಡ ಜಾಲ್. ಹಿಂದ್‌ಗಡೆ ಉದ್ದಕ್ಕೆ ಅಡ್ಕೆ ತೋಟ. ಬಲಕಡೆಗೆ ಸಣ್ಣ ಗುಡ್ಡೆ. ಅದರ ಹಿಂದೆಗೆ ದೂರಲಿ ಬೆಟ್ಟದ ಸಾಲ್‌ಗ.

ತಪಸ್ವಿನಿನ ಎಡ ಪಕ್ಕಲಿ ರಾಜರಸ್ತೆ ಹಾದ್ ಹೋದೆ. ಅವ್ಳ ಮನೆ ಪಕ್ಕಲಿ ಹರಿವ ತಪಸ್ವಿನಿ ಒಂದು ಸಣ್ಣ ಹಳ್ಳ. ದೊಡ್ಡ ಗುಂಡಿನೂ ಇಲ್ಲೆ ಅಗಲನೂ ಇಲ್ಲೆ. ಬೇಸಿಗೆ ಕಾಲಲೂ ಇದರ್ಲಿ ಹರಿವ ನೀರ್ ತಣ್ಣಂಗೆ ಇದ್ದದೆ. ಆಗ ಅದರ ದಾಟುದಂದರೆ ಬಾರೀ ಕುಸಿ. ನೀರ್ ಕೂಡಾ ಅಷ್ಟ್ ಮಡಿ. ಆದರೆ ಮಳೆಗಾಲಲಿ ಅದೇ ತಪಸ್ವಿನಿ ಹದ್ನಾರರ ಜವ್ವನ್ತಿ ಆದೆ. ಆಗ ಅದರ್ದ್ ಒಮ್ಮೊಮ್ಮೆ ಉಗ್ರರೂಪ. ಸುತ್ತು ಮುತ್ತ ಇರುವ ಗುಡ್ಡೆ, ಬೆಟ್ಟ, ಕಣಿವೆಗಳಲಿ ಬಿದ್ದ ಮಳೆ ನೀರ್ ಅದರ್ಲೇ ಹರ್ದ್ ಬಾದು. ಆಗ ಹಳ್ಳದ ಕಣ್ಕ್ ನೀರ್ ನೊರೆನೊರೆ ಆಗಿ ಕುಣ್ಕಂಡ್ ಸಿಕ್ಕಿದರ್ನೆಲ್ಲ ಕೊಚ್ಚಿಕಂಡ್ ಹೋಗ್ವ ಪೊರ್ಲು ನೋಡೋಕು. ಮಳೆಗಾಲಲಿ ತಪಸ್ವಿನಿನ ದಾಟಿಕೆಂತ ಹಳ್ಳದ ಎಡ ಪಕ್ಕದ ಮರಂದ ಬಲ ಪಕ್ಕದ ಮರಕ್ಕೆ ಬೆದ್‌ರ್‌ಂದ ಪಾಲ ಕಟ್ಟುವೆ. ಪಾಲದ ಕೆಳಗೆ ಗರ್ಜಿಸುವ ತಪಸ್ವಿನಿನ ಬೋರ್ಗರೆತಕ್ಕೆ ತಲೆತಿರ್ಗಿ ಹಳ್ಳಕ್ಕೆ ಬೀಳದ ಹಾಂಗೆ ಕೈತಾಂಗ ಕಟ್ಟುವೆ. ದಾಟ್‌ಕನ ಎಲ್ಲಾದ್ರ್ ಕಾಲ್ ಜಾರಿರೆ ಕತೆ ಮುಗ್ದಾಂಗೆನೆ. ಮಳೆಗಾಲಲಿ ತಪಸ್ವಿನಿನ ಸೆಳೆತಂದ ಬಚಾವಾಗಿ ಬಾಕೆ ಎಂತ ಎಂತಾ ಮೊಸುವವಂಗೂ ಆಕಿಲೆ.

ಅಮ್ಮಣ್ಣಿಗೆ ಮಳೆಗಾಲಲಿ ಪಾಲ ದಾಟುದುಂತೇಳಿರೆ ತುಂಬಾ ಕುಸಿ. ಅಜ್ಜನ ಕೈ ಬೆನ್ನಿಗೆ ಆದಾರ ಇದ್ದದೆಲ್ಲಾ, ಹಾಂಗಾಗಿ ಎಂತಾ ನೀರ್ ಇದ್ರೂನೂ ಹೆದ್ರಿಕೆ ಇಲ್ಲೆ. "ಹಳ್ಳ ಎಲ್ಲರ ಅವ್ವ ಕೂಸು. ಹಳ್ಳನ ಪ್ರೀತ್ಸಿಕೆ ಆಗದೊವುಕೆ ಬೇರೆ ಯಾರ್ನೂ ಪ್ರಿತ್ಸಿಕೆ ಆಕಿಲ್ಲೆ. ಹಳ್ಳ ಎಷ್ಟೇ ಉಗ್ರಳಾಗಿರ್ಲಿ ದೊಡ್ಡ ಮಳೆ ಬಾಕನ ಮಾತ್ರ, ಮತ್ತೆ ಮುಂದೆನ ಹಾಂಗೆ. ಇವ್ಳ ಎಲ್ಲಾ ಅವತಾರನ ನೋಡ್ದಂವ ನಾನ್." ಹೀಂಗೆ ಪ್ರತೀ ಮಳೆಗಾಲಲಿ ಅಜ್ಜ ಹೇಳ್ತಿತ್ತ್.

ಅಜ್ಜ ಎಷ್ಟೋ ಸರ್ತಿ ತಪಸ್ವಿನಿ ಹುಟ್ಟುವ ಮೂಲ ಜಾಗೆನ ನೋಡಿ ಬಂದವ. ಅವ್ಳ ಮನೆಂದ ಹೆಚ್ಚಿಗೆಂತೇಳಿರೆ ಮೂರು ಗಂಟೆ ದಾರಿ. ಬಲ ಪಕ್ಕದ ಗುಡ್ಡೆ ಹತ್ತಿ ಕಾಡ್‌ದಾರ್ಲಿ ಹೋಗಿ ಬೆಟ್ಟದ ಸಾಲ್‌ಗ ಇರುವ ಕಡೆ ಹೋಕು. ಅದ್ ಹುಟ್ಟುದು ಅಲ್ಲೆಲ್ಲೋ ಒಂದು ಕಡೆ. ಅಲ್ಲಿಗೆ ಹೋಗಿ ಬಂದ ಮೇಲೆ ಅಜ್ಜಂಗೆ ಜ್ವರ ಬಂದ್

ಮಲ್ಗಿ ಬುಡ್ತಿತ್ತ್‌ಗಡ. ಹಾಂಗಾಗಿ ತಪಸ್ವಿನಿ ಮೂಲಕ್ಕೆ ಹೋದರೆ ಜ್ವರ ಬಂದ್‌ಬುಟ್ಟದೆಂತ ಊರಿಡೀ ಸುದ್ದಿ ಆಗಿತ್ತ್. ಅಲ್ಲಿಗೆ ಹೋದರೆ ದಾರಿ ತಪ್ಪಿ ಎಲ್ಲೆಲ್ಲೋ ಅಲ್ದ್ ಸಾಯೋಕಾದೆ ಅಂತ ಜನ ನಂಬಿದ್ರೊ. ಕೇಳಿರೆ ಅಜ್ಜ ನಗಾಡ್ತಿತ್ತ್. "ಅವ್ವ ತನ್ನ ಮಕ್ಕಳ್ನ ಕೊಂದದೋ ಪುಟ್ಟ? ಹಳ್ಳದ ಮೂಲಕ್ಕೆ ಹೋಗಿ ಬಾಕನ ಏನೇನೋ ಸೊಳ್ಳೆಗ, ನೊಣಂಗ, ಉಂಬುಳುಗ, ಹುಳ-ಹುಪ್ಪಟೆಗ ಕಚ್ಚಿವೆ. ಅದೇ ಜರಕ್ಕೆ ಕಾರಣ. ನಾನ್ ಎಷ್ಟ್ ಸರ್ತಿ ಹೋಗಿ ಬಾತ್ಲೆ? ಈಗಳೂ ನಾನ್ ಬದ್ಕಿಯೊಳೆಲ್ಲಾ?"

"ತಪಸ್ವಿನಿನ ಮೂಲನ ನಂಗೂ ನೋಡೋಕೊಲೆ ಅಜ್ಜಾ" ಅಮ್ಮಣ್ಣಿ ತನ್ನ ಆಸೆನ ಹೇಳ್ತ್. "ಕೂಸು, ಈಗ ನಿನ್ನನ್ ಕರ್ಕಂಡ್ ಹೋಕೆ ನನ್ನಿಂದಾಕಿಲೆ. ಹಂಞ ದಿನ ಕಳೆಲಿ. ಮಳೆಗಾಲದ ತಪಸ್ವಿನಿನ ಹಾಂಗೆ ನೀನ್ ಗೂಡೆ ಆದಿಯ. ಆಗ ಒಬ್ಬ ರಾಜಕುಮಾರ ಬಂದ್ ನಿನ್ನ ಕುತ್ತಿಗೆಗೆ ಹೂಮಾಲೆ ಹಾಕಿದೆ. ಮತ್ತೆ ಕೀಲ್ ಕುದ್ರೆ ಮೇಲೆ ಕುದ್ರಿಸಿಕಂಡ್ ಅಲ್ಲಿಗೆ ಕರ್ಕಂಡ್ ಹೋದೆ".

"ನೀನ್ ಏನೇನೋ ಹೇಳಿಯ ಅಜ್ಜಾ. ಗೂಡೆಗ ನದೀ ಮೂಲ ನೋಡಿಕಾಗದ್‌ಂತ ಏನಾದ್ರ್ ಕಟ್ಟ್ ಉಟ್ಟೋ?"

"ಅಮ್ಮಣ್ಣೀ, ತಪಸ್ವಿನಿಂತೇಳಿರೆ ಯಾರ್‌ಂತ ತಿಳ್ದೊಳ. ನಿನ್ನ ಹಾಂಗೆ ಒಂದು ಹೆಣ್ಣ್. ಗುಡ್ಡೆಂದಾಚೆ ಉಟ್ಟಲ್ಲಾ ಬೆಟ್ಟಗ ಅಲ್ಲಿ ತುಂಬಾ ಗುಹೆಗೊಳೊ. ಆ ಗುಹೆಗಳ್ಲಿ ಹುಲಿಗ ಇದ್ದವೆ. ತುಂಬಾ ವರ್ಷಗಳ ಹಿಂದೆ ಅಲ್ಲಿ ಒಬ್ಳ್ ನಮ್ಮ ಅಮ್ಮಣ್ಣಿನ ಹಾಂಗೆ ಪೊರ್ಲುನ ಗೂಡೆ ಇತ್ತ್. ಆದ್ರೆ ನಿನ್ನ ಹಾಂಗೆ ಚಟ್ಟೆ ಎದೆಯವಳಲ್ಲ. ಉಬ್ಬಿದ ಎದೆಯವ್ಳ್. ಅವಳ ಜಡೆ ಮೊಣಕಾಲಿಗೆ ತಾಗ್‌ತಿತ್ತ್ ಗಡ. ಎಲ್ಲಿಯವ್‌ಳೋ ಏನೋ? ಆ ಬೆಟ್ಟಗಳ ಸಾಲ್‌ನ ಯಾವ ದನಿಗೆ ಮರ್‌ಳಾತೋ? ಮನೆ ಬುಟ್ಟು ಬಂದವ್ಳ್. ಅಲ್ಲಿ ತಪಸ್ಸ್ ಮಾಡಿಕೆ ಸುರುಮಾಡ್ತ್. ಎಲ್ಲೋ ದಾರಿ ತಪ್ಪಿ ಹೋದ ಜನಗ ಅವ್ಳ ಪ್ರಶಾಂತ ಮೋರೆನ ಕಂಡ್ ಅಡ್ಡ ಬಿದ್ದ್ ಬರ್ತಿದ್ರೋ. ಆ ಅವ್ವಂಗೆ ಹುಲಿಗ ಏನೂ ಮಾಡ್ತುಲೆಂತ ಹೇಳ್ತಿದ್ರೊ. ತಪಸ್ಸ್ ಮಾಡ್ವ ಅವ್ವ ತಪಸ್ವಿನಿ ಆತ್. ನಿಜ ಹೆಸ್ರೇನೋ ಯಾರಿಗೂ ಗೊತ್ತ್‌ಲೆ. ಅವ್ಳೆ ಈ ಹಳ್ಳ."

"ಹೆಣ್ಣ್ ಹಳ್ಳ ಆದದ್ದ್ ಹೇಂಗಜ್ಜಾ? ಒಂದಲ್ಲಾ ಒಂದು ದಿನ ನಾನೂ ಹಳ್ಳ ಆಗಿ ಹರ್ದ್ ಹೋನೆನೋ?"ಅಜ್ಜ ಅವಳ್ನ ಎದೆಗಪ್ಪಿಕಂಡತ್. ನೀನ್ ನನ್ನ ಮುದ್ದು ಕೂಸು. ನೀನ್ಯಾಕೆ ಹಳ್ಳ ಆಗಿ ಹರಿಯೋಕು. ತಪಸ್ವಿನಿ ಹಳ್ಳ ಆದದ್ದೆ ಒಂದು ಕತೆ. ಅವ್ಳ್ ತಪಸ್ಸ್ ಮಾಡ್ತಿದ್ದ ಗುಹೆನ ಪಕ್ಕಲಿ ಒಬ್ಬ ಮುನಿ ಇತ್ತ್. ಅಂವ ಅಂತಿಂತ ಮುನಿ ಅಲ್ಲ. ಕೆಂಪುಕೆಂಪಾದ ಕಣ್ಣ್, ಉದ್ದದ ಗಡ್ಡ, ಅವಂದ್ ನಮ್ಮ ಕಪಿಲೆ

ಹಸ್‌ನಂತ ಮೈ ಬಣ್ಣ. ಜನಗ ಅವನ ಕಪಿಲ ಮುನಿ ಅಂತ ಕರೆತಿದ್ದೊ ಗಡ. ಇವಳ್ನ ಅಂವ ಯಾಗ ನೋಡ್ತೋ, ಇವ್ಳ ಮೇಲೆ ಮನ್ಸಾತ್. ಅವನ ತಪಸ್ಸಿಗೆ ಬಂಗ ಆತ್. ಇವಳ್ನ ಕಾಡ್ತ್, ಬೇಡ್ತ್, ಕಡೆಗೆ ಮದುವೆನೂ ಆತ್. ಮೊದುವೆ ಆಗಿ ಒಂದು ಆಶ್ರಮ ಕಟ್ಟಿಕಂಡತ್. ಜನ ಹೋಕೆ ಹೆದ್ರುವ ಕಡೆ ಒಂಟಿ ಸಂಸಾರ ಸುರು ಆತ್. ಇವ್ಳಿಗೆ ಮೊದುವೆ, ಸಂಸಾರ ಒಂದೂ ಇಷ್ಟ ಇತ್ಲೆ. ಅವಂದೋ ದಿನಾ ಬಲಾತ್ಕಾರ. ಒಂದಷ್ಟ್ ದಿನ ಹೇಂಗೋ ಸಹಿಸಿಕಂಡಿತ್ತ್. ಒಂದಿನ ಇವ್ಳ್ ದ್ಯಾನ ಮಾಡ್‌ತಿರ್‌ಕಾಕನ ಪೀಡ್ಸಿತ್. ಇವ್ಳಿಗೆ ಕೋಪ ಬಂದ್ ಹಳ್ಳ ಆಗಿ ಹರ್ದ್ ಹೋತು."

"ಅವ್ಳ್ ಹಾಂಗೆ ಹರ್ದ್ ಹೋದದ್ದ್ ಮಳೆಗಾಲಲೇ ಇರೋಕು. ಅದ್ಕೆ ಮಳೆಗಾಲಲಿ ಇವ್ಳ್ ಸಿಟ್ಟ್‌ಲಿ ಗರ್ಜಿಸುದುಂತ ಕಂಡದೆ. ಅಲ್ಲಾ ಅಜ್ಜಾ?"

"ಏನೋ ಕೂಸು, ಇದ್ದರೂ ಇರ್ದು. ಆದರೆ ಮಳೆಗಾಲಲಿ ಇವ್ಳ ಕುಣ್ತನ ನೋಡ್ಯೊಳೊನೊ? ಆ ಕುಣ್ತಕ್ಕೆ ಜುಳು ಜುಳು ಸದ್ದ್ ಬೇರೆ. ಹಾಡೂನೂ ಇವಳ್ದೆ. ಕುಣಿತಾನೂ ಇವಳ್ದೆ. ಇಷ್ಟ್ ತಿಳಿಯಾದ ಈ ಹಳ್ಳದ ನೀರ್, ಯಾವ ಬಾಮಿಲೂ ಸಿಕ್ಕಿಕಿಲ್ಲೆ. ಮತ್ತೆ ನೀನ್ ಹಳ್ಳ ಮದ್ಯದ ಪಾರೆಕಲ್ಲ್ ಮೇಲೆ ಕುದ್ದು ನೀರ್ಲಿ ಕಾಲ್ ಆಡ್ಸಿಯಲ್ಲಾ? ಅಲ್ಲಿ ಚಿನ್ನದ ಬಣ್ಣದ ಮೀನ್‌ಗೊಳೊ. ನೀನ್ ನೋಡ್ತಿಲೆನೊ? ಅಂತ ಮೀನ್‌ಗ ತಪಸ್ವಿನಿಲಿ ಮಾತ್ರ ಸಿಕ್ಕುದು ಗಡ. ಕೆಲವು ವರ್ಸಗಳ ಹಿಂದೆ ಆಚೆ ಪಡುವ ದಿಕ್ಕಿನ ಒಬ್ಬ ವಿಜ್ಞಾನಿ ಆ ಮೀನ್‌ಗಳ್ನ ನೋಡೋಕುಂತೇಳಿಯೇ ಇಲ್ಲಿಗೆ ಬಂದೊವು ಹೇಳ್ದ್. ಅವು ಆ ಮೀನ್‌ಗ ಬೇಕೂಂತ ತುಂಬಾ ಆಸೆ ಪಟ್ಟಿದ್ದೊ. ತಿಂಬಕಲ್ಲ. ಸಾಂಕಿಕೆ. ಅದಕ್ಕಾಗಿ ಒಂದಿಷ್ಟ್ ಮೀನ್ ಹಿಡ್ದ್ ಕೊಟ್ಟೆ, ಅವು ಕುಪ್ಪಿನ ಪಾತ್ರೆಲಿ ಎಷ್ಟ್ ಜೋಪಾನಾಗಿ ತಕಂಡ್ ಹೋದೊಂತ ಗೊತ್ತೋ? ದುಡ್ಡಿನ ಗಂಟ್‌ನ ಹಾಂಗೆ ಜೋಪಾನ ಮಾಡಿಕಂಡ್ ತಕಂಡ್ ಹೋದೊ."

"ಆ ಮೀನ್‌ಗಳ್ನ ಅವು ಏನ್ ಮಾಡಿರುವೋ ಅಜ್ಜ?"

"ಅವರ್ಲಿ ಕುಪ್ಪಿಂದಲೇ ಮಾಡ್ದ ಸಣ್ಣ ಕೆರೆ ಉಟ್ಟುಗಡ. ನಮ್ಮಲಿರುವ ಕೆರೆ ಹಾಂಗೆ ಆದರೆ ಅಲ್ಲಿಗೆ ಕಪ್ಪೆಗ, ಹಾವ್‌ಗ ಬಂದ್ ಮೀನ್ಗಳ ನುಂಗಿಬುಡುವೊಂತೇಳಿ ಅಂತದ್ ಮಾಡಿಕಂಡದ್ ಗಡ. ಅಂತದರ್ಲಿ ಅವು ಪೊರ್ಲ್‌ಲಿ ಸಾಂಕುದು ಗಡ. ನಾವ್ ತಿಳ್ಕಂಡದ್ ಏನ್? ಮೀನ್‌ಗ ಇರುದ್ದೇ ತಿಂಬಕೆಂತ. ಅವು ಹೋಕೆ ಮುಂದೆ ಹೇಳ್ದ್ ಏನ್‌ಂತ ಗೊತ್ತುಟೋ? ನಮ್ಮ ಬದ್ಕ್ ಸುದ್ದ ಆಗಿರೊಕುಂತಾದರೆ ಹಳ್ಳ, ಕೆರೆ, ಬಾಮಿಲಿ ಮೀನ್‌ಗ, ಕಪ್ಪೆಗ, ಎಸ್‌ಂಡ್, ಯಾಮೆ, ಹಾವು ಎಲ್ಲ ಇರೊಕುಂತ. ಅವೆಲ್ಲ ನೀರ್ನ ಸುದ್ದ ಮಾಡುವೆ. ನಾವ್‌ಗೆ ಬರುವ ಕಾಯಿಲೆಗಳಲಿ

ಹೆಚ್ಚಿನದ್ ಕೊಳ್ಳು ನೀರ್‌ಂದ ಬಾದುಗಡ. ಅದ್ಕೆ ಅವು ಹೇಳ್ದೊ ನಮ್ಮ ಹಳ್ಳದ ಮೀನ್‌ಗಳ್ನ ತಿಂದ್ ಮುಗ್ಸಿ ನೀರ್ನ ಹಾಳ್ ಮಾಡ್ದು ಬೇಡಂತ".

ಅಜ್ಜ, ಅಮ್ಮಣ್ಣಿನ ಎಷ್ಟೋ ಸರ್ತಿ ಮೀನ್ ಹಿಡಿಯಕೆ ಕರ್ಕಂಡ್ ಹೋಗ್ತಿತ್ತ್. ಅವ್ಳ್ ತಪಸ್ವಿನಿಲಿ ಕಾಲಾಡ್ಸಿಕೆ ಕುದ್ದ್‌ಕಂಬ ಆ ಪಾರೆಕಲ್ಲ್ ಮೇಲೆ ಕುಕ್ಕುರುಕಾಲ್‌ಲಿ ಕುದ್ದ್‌ಕಂಡ್ ಅಜ್ಜ ಗಾಳಕ್ಕೆ ನೊಕ್ಕುಳ್ನ ಸಿಕ್ಕಿಸಿ ನೀರಿಗೆ ಬುಟ್ಟ್ ಮೀನ್ ಹಿಡಿದರ್ನ ನೋಡ್ತಿತ್. ಜೀವ ಮರ್ಕಲಿ ಒದ್ದಾಡುವ ನೊಕ್ಕುಳ್‌ನ ತಿಂಬಂಕ್ಕೆಂತೇಳಿ ಬರ್ವ ಮೀನ್‌ನ ಗಂಟ್ಲಿಗೆ ಗಾಳ ಕೋಸಿಕಣ್‌ತಿತ್ತ್. ಗಾಳನ ಎಳ್ದಂಗೆ ಆಕನ ಅಜ್ಜ ಮೇಲೆ ಎಳೆತಿತ್ತ್. ಮೀನ್‌ನ ಗಂಟ್ಲಿಗೆ ಗಾಳ ಕೋಸಿಕಂಡ್ ಒದ್ದಾಡಿಕಾಕನ ಅದರ ತಲೇಗೆ ಬಾಳ್‌ಕತ್ತಿಲಿ ಟಕ್ಕ್‌ಂತ ಕುಟ್ಟಿ, ಕೊಂದ್ ಗಾಳಂದ ತೆಗ್ದ್ ಚೀಲಕ್ಕೆ ಹಾಕಿಕಣ್‌ತಿತ್ತ್. ಅಜ್ಜ ಎಸ್‌ಂಡ್‌ಗಳ ಹಿಡಿಯುದರ್ನ ನೋಡಿಕೆ ಇನ್ನೂ ಲಾಯ್ಕ್. ಕೊಂಬ ಕಾಲ್‌ಗಳ್ನ ಅಗ್‌ಲ್ಸಿಕಂಡ್ ಮೆಲ್ಲ ಮೆಲ್ಲಂಗೆ ಒಂದು ಕಲ್ಲ್‌ಂದ ಮತ್ತೊಂದು ಕಲ್ಲಿಗೆ ಹರಿವ ಎಸ್‌ಂಡ್‌ಗಳ ಕೊಂಬ ಕಾಲ್‌ಲೇ ಹಿಡ್ದ್ ಎತ್ತಿ ಅದರ್ನ ಮುರ್ದ್ ತೆಗ್ದ್ ಅದನ್ನೆ ಎದೆಗೆ ಕುತ್ತಿ ಬುಡ್ತಿತ್. ಅಲ್ಲಿಗೆ ಅದರ ಕತೆ ಮುಗ್ದಾಂಗೆ. ಹಳ್ಳದ ಕೆರೇಲಿರುವ ಕಲ್ಲ್‌ಗಳ ಪಕ್ಕಕ್ಕೆ ಜಾರ್‍ಸಿರೆ, ಇಲ್ಲದಿದ್ದರೆ ಪೊಕ್ಕಿಸಿರೆ ಎಸ್‌ಂಡ್‌ಗ ಮೇಲೆ ಬರ್ತಿದ್ದೊ. ಅಮ್ಮಣ್ಣಿಗೆ ಅವುಗಳ್ನ ನೋಡಿ ಬಯ ಆಗ್ತಿತ್. ಎಸಂಡ್‌ಗಳಿಗೆ ಕುಂಡೆಲಿ ಕಣ್ಣ್‌ಂತ ಅಜ್ಜ ಹೇಳ್ತಿತ್ತ್, ಅವು ಎಲ್ಲಿಯೋ ನೋಡಿ ಎಲ್ಲಿಗೋ ಹರಿದೂಂತ. ಎರ್ಡ್ ಕಡೆ ಇರುವ ಕೊಂಬಕಾಲ್‌ಗಳ ಇಕ್ಕುಳದ ಹಾಂಗೆ ಅಗಲ್ಸಿಕಂಡ್ ಬಾಕನ ತಾನದರ ಮದ್ಯೆಲಿ ಸಿಕ್ಕಿಕಂಡ್ ಎರ್ಡ್ ತುಂಡಾಗಿ ಹೋಗಿ ಬುಡುವೆಂತ ಹೆದ್ರಿ ಎಸ್‌ಂಡ್ ಕಂಡರೆ ಅಮ್ಮಣ್ಣಿ ಓಡಿಬುಡ್ತಿತ್ತ್.

" ಅಜ್ಜಾ , ಆ ವಿಜ್ಞಾನಿ ಹೇಳ್ದ ಮೇಲೂ ನೀನ್ ಹೀಂಗೆ ಮೀನ್‌ಗಳ್ನ ಮತ್ತೆ ಎಸ್‌ಂಡ್‌ಗಳ ಹಿಡ್ದ್ ತಿಂದ್ ಮುಗ್ಸಿಯನೋ ಹೇಂಗೆ? ನೀನ್ ಹಾಂಗೆಲ್ಲಾ ಹಿಡ್ದ್ ಕೊಲ್ಲಿಕಾಕನ ಅವ್ಕೆ ಬೇನೆ ಆದುಲೆನೋ?"

"ಆಗದೆ ಉಟ್ಟೋ ಕೂಸು? ಹಾಂಗೆಂತ ಗೈಮುಲಿ ಮೀನ್ದೋ, ಎಸ್‌ಂಡ್‌ದೋ ಒಂದು ತುಂಡಾದ್ರ್ ಇಲ್ಲದಿದ್ದರೆ ನಿನ್ನ ಅಜ್ಜನ ದೊಂಡೆಲಿ ಗಂಜಿ ಇಳ್ದದೆನೋ? ನಾನ್ ನಿನ್ನ ಹಾಂಗೆ ಇರಿಕಾಕನ ಆದ ಅಬ್ಯಾಸ ಅದ್. ಈಗ ಅದರಬುಡಿಕೆ ಆಕಿಲ್ಲೆ ಅಮ್ಮಣ್ಣಿ. ಈ ಅಜ್ಜ ಹಿಡ್ದರೆ ಎಷ್ಟ್ ಮೀನ್ ಹಿಡಿದು? ಎಷ್ಟ್ ಎಸ್‌ಂಡ್ ತಿಂಬೋದು ಹೇಳ್. ನೋಡು ತಪಸ್ವಿನಿಲಿ ಎಷ್ಟ್ ಮೀನ್‌ಗೊಳೊ, ಎಷ್ಟ್ ಎಸ್‌ಂಡ್‌ಗೊಳೊ. ನಾನೇನ್ ವಿಷ ಹಾಕಿಯೋ, ತೋಟೆ ಹಾಕಿಯೋ, ಮೀನ್ ಹಿಡ್ದನೆನೋ? ತಿಂಬಕ್ಕೆ ಆಗದರ ಕೊಂದನೆನೋ? ನೀರಿಗೆ ನಾನೇನೋ ವಿಷ ಬೆರ್‍ಸದುಲೆ."

"ಅಲ್ಲಿ ಕಪಿಲೇಶ್ವರ ದೇವಸ್ತಾನದ ಹತ್ರ ಇರುವ ಮೀನ್‌ಗಳ್ನ ಯಾರೂ ಹಿಡಿದುಲ್ಲೆ ಯಾಕಜ್ಜಾ?"

"ಅದ್ ದೇವ್ರ ಮೀನ್ ಅಮ್ಮಣ್ಣಿ. ಅದರ್ನ ತಿಂದ್ ಮನುಷ್ಯರ್‌ಂದ ಅರ್ಗಿಸಿಕಂಬಕೆ ಸಾದ್ಯನೋ? ಎಲ್ಲಾ ಮೀನ್‌ಗಳ್ನ ಮನುಷ್ಯ ತಿಂದ್ ಮುಗ್ಸಿರೆ ನೀರ್ ಹಾಳಾಗಿ ಹೋದೆಲ್ಲಾ? ಅದಕ್ಕೆ ದೇವಸ್ತಾನಗಳ ಹತ್ರ ಇರುವ ಮೀನ್‌ಗಳ್ನ ದೇವರ ಮೀನ್‌ಂತ ಕರಿದುಗಡ. ಮೀನ್‌ಗಳ ಪೂರಾ ತಿಂದ್ ಮುಗ್ಸುದು ಬೇಡಂತೇಳಿ ಮೀನ್‌ನ ದೇವರ ಸುರೂನ ಅವತಾರಂತೇಳುದು ಗಡ. ಅಂದ್ ಬಂದ ವಿಜ್ಞಾನಿ ಹೇಳ್ದ್ ಇದ್."

ಅವ್ಳ ಮನೆ ಪಕ್ಕದ ರಾಜರಸ್ತೆಲಿ ಬಸ್‌ಲಿ ಅರ್ದಗಂಟೆ ಪ್ರಯಾಣ ಮಾಡಿರೆ ಕಪಿಲೇಶ್ವರ ದೇವಸ್ತಾನ ಸಿಕ್ಕಿದೆ. ಅಂಗಳಕ್ಕೆ ತಾಗಿಕಂಡೆ ಹರಿವ ತಪಸ್ವಿನಿನ ಒಡ್ಲ್‌ಲಿ ಹಿಂಡ್ ಹಿಂಡ್ ಮೀನ್‌ಗ. ಮೇಲೆ ಸಣ್ಣ ಮೀನ್‌ಗ ಓಡಾಡಿಕಂಡ್ ಇದ್ದರೆ ಕೆಳಗೆ ದೊಡ್ಡ ದೊಡ್ಡ ಮೀನ್‌ಗ ಯಾವ ಹೆದ್ರಿಕೆನೂ ಇಲ್ಲದೆ ಮೊಸಿಕಂಡ್ ಇದ್ದವೆ. ಆ ಮೀನ್‌ಗಳ ನೋಡಿಕ್ಕೆಂತೇಳಿಯೇ ಯಾವ್ಯಾವುದೋ ಊರ್ಗಳ್‌ಂದ ಜನಗ ಬಂದವೆ. ಅಕ್ಕಿ, ಹೊರಿಯಕ್ಕಿ, ಅವುಲು, ಹೊದ್ರಿ ಹೀಂಗೆ ಯಾವುದಾದ್ರ್ ಒಂದರ್ನ ತಿಂಬಕೆ ಹಾಕಿ ಅವ್ಗಳ ಚೆನ್ನಾಟ ನೋಡಿವೆ. ಎಲ್ಲಾದ್ರ್ ಹಿಡಿಯಕೆ ಹೋದರೆ ಬೀಲಲಿ ರಪಕ್ಕನೆ ಹೊಡ್ದ್ ನುಣ್ಚಿಕಂಡ್ ಜಾರಿಬುಟ್ಟವೆ.

"ಈ ಕಪಿಲಳ್ಳಿಯ ಜನಂಗ ಆ ಮೀನ್‌ಗಳ್ನ ತಿಂಬೋದುಲೆ ಕೂಸು. ದುಡ್ಡಿನಾಸೆಗೆ ಜನ ಒಮ್ಮೊಮ್ಮೆ ಗೊತ್ತಿಲ್ಲದೆ ಬಂದ್ ಬಲೆ ಹಾಕಿ ಮೀನ್ ಹಿಡ್ದ್ ಹೋಗಿ ಬುಟ್ಟವೆ. ಒಮ್ಮೆ ಏನಾತ್‌ಂತ ಗೊತ್ತೋ? ಹಾಂಗೆ ಬಂದ್ ಮೀನ್ ಹಿಡ್ದ ಎರ್ಡ್ ಜನಂಗ ಸಿಕ್ಕಿಬಿದ್ದೊ. ಊರ್ನ ಜನ ಅವ್ಕೆ ಎಕ್ಕಡದ ಮಾಲೆ ಹಾಕಿ ಮೆರವಣಿಗೆ ಮಾಡಿ ಕಂಬಕ್ಕೆ ಕಟ್ಟಿಹಾಕಿ ಮಾಯ್ಬುನ ಸುಡಿಲಿ ಸರೀ ಪೂಜೆ ಮಾಡ್ದೊ. ಕಡೆಗೆ ಬುಟ್ಟೊಂತೇಳ್. ಅವರ್ನ ಅಂದ್ ಮುಗ್ಸಿ ಬುಡ್ತಿದ್ದರೆ ಒಳ್ಳದಿತ್ತ್. ಅವ್ ಮತ್ತೆ ಏನ್ ಮಾಡ್ದೊಂತ ಗೊತ್ತಾ? ಅಂದೇ ಕತ್ತಲೆಗೆ ಅಲ್ಲಿಗೆ ಬಂದ್ ಹಳ್ಳಕ್ಕೆ ವಿಸ ಹಾಕಿ ತಲೆ ತಪ್ಪಿಸಿಕಂಡ್ ಪರಾರಿ ಆದೊ. ಎಷ್ಟ್ ಮೀನ್ಗ ಸತ್ತ್ ಹೋದೊ. ರಾಶಿ ರಾಶಿ ಮೀನ್. ಒಂದಷ್ಟ್ ದಿನ ಹಳ್ಳದುದ್ದಕ್ಕೂ ಸಹಿಸಿಕೆ ಆಗದ ನಾತ. ಹಾಂಗೆ ಸತ್ತ ಮೀನ್‌ಗಳ ಹೆಸ್ರ್‌ಲಿ ದೇವಸ್ತಾನದ ಪಕ್ಕಲಿ ಗೋರಿ ಕಟ್ಟಿದ್. ನೀ ನೋಡಿಯೊಳಲ್ಲ ಅದರ. ಈಗ ಮೀನ್‌ಗ ಮತ್ತೆ ಹೆಚ್ಚಾಗಳೊ ಬುಡು. ಆಮೇಲೆ ಪಾರಕ್ಕೆಂತೇಳಿ ಸರಕಾರ ಎರಡ್ ಜನಗಳ್ನ ನೇಮಕ ಮಾಡಿಟ್ಟು. ಈ ವಿಷಯ ಪ್ರಚಾರ ಆದ

ಮೇಲೆ ಮಿೂನ್ ನೋಡಿಕೆ ಬರುವ ಜನಗಳ ಸಂಖ್ಯೆ ಹೆಚ್ಚಾಗುಟು."

ಅಜ್ಜ ಎಂತ ವಿಸಯನೇ ಇರ್ಲಿ ರಸ ಸೇರ್ಸಿ ಹೇಳ್ತಿತ್. ಹಳ್ಳ, ದೇವಸ್ತಾನ, ಬೆಟ್ಟಗುಡ್ಡಗಳ ಬಗ್ಗೆ ಅಂವ ಹೇಳ್‌ದರ್‍ನ ಕೇಳುದೇ ಒಂದು ಕುಸಿ.

"ಅವ್ವ್ಳ ತಪಸ್ವಿನಿ ಹಾಂಗೆ ಹಳ್ಳ ಆಗಿ ಹರ್ದ್ ಹೋತಲ್ಲ? ಆಮೇಲೆ ಕಪಿಲ ಮುನಿ ಕಂಗಾಲಾಗಿ ಹೋತ್. ಆಶ್ರಮ ಬುಟ್ಟ್ ಎಲ್ಲೆಲ್ಲೋ ಅಲ್ತ್. ಈಗ ದೇವಸ್ತಾನ ಉಟ್ಟಲ್ಲ, ಅಲ್ಲೆ ತಪಸ್ಸಿಗೆ ಕುದ್ದತ್. ಏನ್ ತಪಸ್‌ಂತೇಳಿಯ? ಗಂಜಿ ಇಲ್ಲೆ, ನೀರ್ ಇಲ್ಲೆ, ಹಗಲ್‌ಂತಿಲ್ಲೆ, ರಾತ್ರಿಂತಿಲ್ಲೆ, ಚಳಿಂತಿಲ್ಲೆ, ಬಿಸಿಲಿಂತಿಲ್ಲೆ, ಎಷ್ಟ್ ದಿನನೋ? ತಪಸ್ಸ್ ಮಾಡ್ತ್, ಮಾಡ್ತ್ ಕಡೆಗೆ ಒಂದಿನ ಅವನ ತಪಸ್ಸಿಗೆ ಮೆಚ್ಚಿ ಈಶ್ವರನೇ ಪ್ರತ್ಯಕ್ಷ ಆತ್. ಕಪಿಲ ಮುನಿನ ಏನ್ ವರ ಬೇಕೂಂತ ಕೇಳ್ತ್. ನೀನ್ ಇಲ್ಲಿ ಯಾಗೋಳು ವಾಸ ಇರೊಕುಂತ ಕಪಿಲ ಮುನಿ ಬೇಡಿಕಂಡದಕ್ಕೆ ಈಶ್ವರ ಒಪ್ಪಿ, ಶಿವಲಿಂಗ ರೂಪಾಗಿ ನಿಂತ್ ಬುಟ್ಟತ್. ಅವನೇ ಕಪಿಲೇಶ್ವರ."

ಎಷ್ಟ್ ಸರ್ತಿ ಅಜ್ಜ ಅದರ ಹೇಳಿಟ್ಟೋ. ಆದ್ರೂ ಅವ್ಳಿಗೆ ಮತ್ತೆ ಮತ್ತೆ ಅದರ್‍ನ ಕೇಳಕೂಂತ ಆಸೆ ಆಗ್‌ತಿತ್ತ್. ಎಂತಾ ಒಂದು ವಿಶೇಷ. ಸಿಟ್ಟ್ ಬಂದ ಹೆಣ್ಣ್ ಹಳ್ಳ ಆಗಿ ಹರಿದು.

ಅಜ್ಜಂಗೆ ಕುಸಿ ಆಕಾಕನ ತನ್ನ ಅನುಬವಗಳ್ನ ಅಮ್ಮಣ್ಣಿಗೆ ಹೇಳ್ತಿತ್. "ಹಿಂದೆ ಮನೆ ಜಾಲಿಗೆ ಆನೆಗ, ಹುಲಿಗ ಬರ್ತಿದ್ದೊ ಅಮ್ಮಣ್ಣಿ. ಹುಲಿ ಬಾಕನ ಅದರ ವಾಸನೆಗೆ ಹಟ್ಟಿಲಿದ್ದ ದನಗ ಅಂಬಾ ಅಂತ ಕರ್ಕಂಡ್ ಕುತ್ತಿಗೆ ಬಳ್ಳಿನ ತುಂಡು ಮಾಡಿ ಓಡಿಕೆ ನೋಡ್ತಿದ್ದದ್ ನೋಡೊಕು. ಕಿರುಬಗ ಇಜ್ಜಲಿಗೆ ಬಂದ್ ನಾಯಿಗಳ್ನ ಕಚ್ಚಿಕಂಡ್ ಓಡಿ ಬುಡ್ತಿದ್ದೊ. ನಿಂಗೆ ಈಗ ಸಹ ಆನೆಗಳ ಗೀಳಾಟ, ಹುಲಿಗಳ ಗರ್ಜನೆ ಕೇಳ್ಸಿದಲ್ಲಾ? ತಪಸ್ವಿನಿನ ಮೂಲಲಿ ಗುಹೆಗ ಒಳಲ್ಲ? ಅಲ್ಲಿ ಹುಲಿಗಳೇ ಇರ್ದು. ಜಿಂಕೆ ಮತ್ತು ಕಡವೆಗ ಅಂಗಳ ದಾಟಿ ನೀರ್ ಕುಡೆಕೆ ತಪಸ್ವಿನಿಗೆ ಹೋಕಾಕನ ನೀನ್ ಎಷ್ಟೋ ಸರ್ತಿ ನೋಡಿಯೊಳ. ಅವುಗಳ್ನ ನೋಡಿನೋಡಿ ನಮ್ಮ ನಾಯಿಗಳ್ಗೆ ಅಬ್ಯಾಸಾಗುಟ್ಟು. ಅದಕ್ಕೆ ಈಗ  ಅವು ಬೊಗುಳುದಿಲೆ.

ಪೇಟೇಲಿರುವುಕೆ ಹೀಂಗಿರುವ ಹಳ್ಳ, ಇಷ್ಟ್ ಒಳ್ಳ ಗಾಳಿ, ನೀರ್, ಇಂತ ಸುಕ ಸಂತೋಸ ಸಿಕ್ಕುದುಲೆ ಅಮ್ಮಣ್ಣಿ ಇದೆಲ್ಲಾ ನಮ್ಮಂತ ಹಳ್ಳಿಲಿರೋವುಕೆ ಮಾತ್ರ." ಅಜ್ಜಂಗೆ, ಅಜ್ಜಿನ ನೆನ್‌ಪಾಕನ ಅವನ ಸ್ವರ ಗರಗರ ಆಗ್‌ತಿತ್ತ್. "ನಿನ್ನ ಅಜ್ಜಿ ಹಾಂಗೆ ಹೋಗಿಬುಟ್ಟದೆಂತ ಯಾರಿಗೆ ಗೊತ್ತಿತ್ ಹೇಳ್? ಎದೆಲಿ ಆದ ಆ ಮಾರಿ ಹುಣ್ಣುನ ಡಾಕ್‌ಟ್ರ್ ಏಡಿ ರೋಗಂತೇಳ್ದೊ. ಕಂಡ ಕಂಡ ಡಾಕ್ಟ್ರಗಳಿಗೆಲ್ಲಾ ತೋರ್ಸಿದೆ.

ಯಾವ್ಯಾವ್‌ದೋ ಆಸ್ಪತ್ರೆಗಳಿಗೆಲ್ಲಾ ಕರ್‍ಕಂಡ್ ಹೋದೆ. ಕಪಿಲೇಶ್ವರ, ಮಂಜುನಾಥ, ವೆಂಕಟ್ರಮಣ, ಅಯ್ಯಪ್ಪ, ಮುತ್ತಪ್ಪ, ಪಾಸಾಣಮೂರ್ತಿ, ಗುಳಿಗ, ಪಂಜುರ್ಲಿ ಹೀಂಗೆ ಎಲ್ಲಾ ದೇವ್ರು, ದೆವ್ವಗಳಿಗೆಲ್ಲಾ ಹರ್ಕೆ ಹೊತ್ತೆ. ಕನ್ನಿಕಂಬದೆದ್‌ರ್ ಗುರು ಕಾರ್ನೂರಿಗೆ ಬಡ್ಸಿ ಬೇಡಿಕಂಡೆ. ಅವ್ಳ ಹುಣ್ಣು ದಿನಂದ ದಿನಕ್ಕೆ ಹೆಚ್ಚಾತೇ ಹೊರ್ತು ಗುಣ ಆತ್‌ಲೆ. ಏನ್ ವಾಸನೆಂತೇಳಿಯಾ. ಎಸ್ಟ್ ಬೇನೆ ತಿಂದತೋ, ಎಸ್ಟ್ ನರ್ಳಿತೊ. ಒಂದು ರಾತ್ರಿ ನನ್ನ ಕಣ್ಣ್ ತಪ್ಪಿಸಿ ಇದ್ದಕಿದ್ದಾಂಗೆ ಮಾಯ ಆತ್. ತುಂಬಾ ದಿನ ಕಳ್ದಮೇಲೆ ದೇವಸ್ತಾನದ ಕೆಳಗೆ ಹಳ್ಳಲಿ ಅವ್ಳ ಎಲುಬು ಗೂಡು ಸಿಕ್ಕಿತು. ಅಸ್ಟ್ ದೂರಂದ ಅದರ ಇಲ್ಲಿಗೆ ತಂದ್ ಮಾಡ್ದಾದ್ರ್ ಏನ್‌ಂತೇಳಿ ಅಲ್ಲೇ ಗುಂಡಿ ತೆಗ್ದ್ ಹುಗ್ದ್ ಬಂದೆ. ಹಾಂಗೆ ಸತ್ತವಳ ಹೆಸ್‌ರ್ಲಿ ಬೊಜ್ಜ ಮಾಡಿ ಹಂದಿನೋ, ಕೋಳಿನೋ ತಿಂಬಕೆ ಮನಸ್ ಬಾತ್ಲೆ. ಹದ್ನಾರರ ಕೊಲೆಗೆ ಇಸುವ ಕಾರ್ಯಕ್ರಮನೂ ಮಾಡ್ತ್‌ಲೆ. ಬೂಮಿ ಮೇಲೆ ನರಕ ಅನುಬವಿಸಿದವಳಿಗೆ ಸತ್ತ ಮೇಲೆ ಸ್ವರ್ಗ ಸಿಕ್ಕದಿರಿಕೆ ಸಾದ್ಯನೇ ಇಲ್ಲೆಂತೇಳಿ ಸಮಾದಾನ ಮಾಡಿಕಂಡೆ. ಒಂದು ಲೆಕ್ಕಲಿ ವಾಸಿ ಆಗದ ಕಾಯಿಲೆಂದ ನರಳುದಕ್ಕಿಂತ ಅವ್ಳ್ ಹಾಂಗೆ ಹೋದದ್ದೇ ಒಳ್ಳೆದಾತ್."

"ಎಸ್‌ಂಡ್ ತಿಂದವುಕೆಲ್ಲಾ ಎಸ್‌ಂಡ್ ಕಾಯಿಲೆ ಬಂದದೋ ಅಜ್ಜಾ?"

ಅಜ್ಜ ಬೊಕ್ಕುಬಾಯಿ ಬುಟ್ಟು ಗೊಳ್ ಅಂತ ನಗಾಡ್ತಾ "ಕಪಿಲೇಶ್ವರನ ಪೂಜೆ ಮಾಡ್ವ ಬೋಳಂತಾಯ ಬಟ್ರ ಅಮ್ಮ ಸತ್ತದ್ ಎಸ್‌ಂಡ್ ರೋಗಂದೇ ಗಡ. ಈಗನವು ಅದರ ಕ್ಯಾನ್ಸರ್‌ಂತೇಳುವೆ. ಅದಕ್ಕೆ ಸರಿಯಾದ ಮೊದ್ದೇ ಇಲ್ಲೆಗಡ. ಎಸ್‌ಂಡ್ ತಿಂಬೊವುಕೆಲ್ಲಾ ಬರುವಾಂಗಿದ್ರೆ ನಾವ್ಗೆಲ್ಲಾ ಬರಕಾಗಿತ್ತ್. ಅಂತ ಕಾಯಿಲೆ ಯಾಕೆ ಬಂದದೋ, ಯಾರಿಗೆ ಗೊತ್ತು ಹೇಳ್? ಸಿಟ್ಟ್ ಬಂದದಕ್ಕೆ ತಪಸ್ವಿನಿ ಹಳ್ಳ ಆಗಿ ಹರ್ತ್. ಬೇನೆ ತಡೆಕಾಗದೆ ಅಜ್ಜಿ ಹಳ್ಳಕ್ಕೆ ಹಾರಿ ಸತ್ತತ್."

ಅಜ್ಜ ಅಮ್ಮಣಿಗೆ ಮಿಸಿಕೆ ಕಲ್ಸಿತ್ತ್. ಮಿಸಿಕೆ ಎಲ್ಲವುಕೆ ಗೊತ್ತಿರೊಕು ಅಮ್ಮಣ್ಣಿ. ಹಳ್ಳ ನಮ್ಮ ಅವ್ವಂತಿಟ್ಟ್‌ಕ. ಮಿಸುದು ಅಂದರೆ ಅವ್ಳ ಅಪ್ಪಿಕಂಡ ಹಾಂಗೆ. ಮಿಸುವಷ್ಟ್ ಲಾಯಕ್ಕಾದ ವ್ಯಾಯಾಮ ಬೇರೆ ಇಲ್ಲೆ. ದೇವಸ್ತಾನಕ್ಕೆ ಹೋದ್ರೆ ಅಲ್ಲಿ ಹಳ್ಳಲಿ ಮಿಸಿಯೇ ನಾ ಬಾದು. ಮೋರೆ ಮೇಲೆ ಮಾಡಿ ಬೆನ್ನ್‌ಲಿ ಮಿಸುದುಟ್ಟಲ್ಲಾ ಅದ್ ತುಂಬ ಕುಸಿಕೊಟ್ಟದೆ. ಹಾಂಗೆ ಎಷ್ಟ್ ಹೊತ್ತು ಬೇಕರೂ ಮಿಸಕ್. ಆಗ ನಾನ್ ನೀರ್ ಮತ್ತು ಆಕಾಸದ ಕೂಸು ಅಂತ ಅನ್ಸಿದೆ. ನಿಜ ಹೇಳ್ದುಂತಾದರೆ ಹಳ್ಳ ಅವ್ವಗಿಂತಲೂ ದೊಡ್ಡವ್ಳೆ. ಅವ್ಳ್ ಅವ್ವಂದಿರಿಗೆ ಅವ್ವ. ಮಿಸಿಕೆ ಕಲಿಯದವ್ಕೆ

ಬದುಕೇ ಅಲ್ಲ ಬಲ. ಮಿೂಸಿಕಾಕನ ಹಳ್ಳಲಿ ನಮ್ಮ ಮನಸ್ಸ್‌ನ ಬೇನೆಗಳ್ನೆಲ್ಲ ಹೇಳಿಕಂಡ್ ಮಿೂಸುದುಂತೇಳಿರೆ ಸ್ತಿತಿ-ಗತಿಗಳ ನಿಬಾಯಿಸ್ಕಂಡ್ ಬದ್ಕುದು. ಈಸಿಕೆ ಗೊತ್ತಿರೊವು ನೀರ್ಲಿ ಕಂತಿ ಸಾಯುದ್ಲೆ. ಹಾಂಗೆನೆ ಪರಿಸ್ತಿತಿನ ನಿಬಾಯಿಸೊವು ನೆಮ್ಮದಿ ಕಳ್ಕಂಬೊದುಲೆ.”

ಸುರುಲಿ ಅಜ್ಜ ಎರ್ಡ್ ತೆಂಗಿನಕಾಯ್ಗಳ ಚೊಪ್ಪು ತುಸು ಎಳ್ಕಿಸಿ ಒಂದಕ್ಕೊಂದು ಗಂಟ್ ಹಾಕಿ ಹೊಟ್ಟೆ ಕೆಳಗೆ ಆದಾರಾಗಿ ಇಸಿ ಈಸಿಕೆ ಕಲ್ಸಿತ್. ಅವ್ಳ್ ಈಸಿಕಾಕನ ಅವ್ಳ ಸೊಂಟದ ನೂಲ್ನ ಹಿಡ್ಕಂಬತಿತ್ತ್ ಒಮ್ಮೆ ಏನಾತ್‌ಂತೇಳಿರೆ ಕಾಯಿನ ಗಂಟ್ ಬಿಚ್ಚಿ ಹೋಗಿ ಅವ್ಳ್ ಕಂತಿ ನೀರ್ ಕುಡ್ತ್. ಆಗ ಅಜ್ಜ ಅವ್ಳ ಕಾಲ್ ಹಿಡ್ದ್ ಎತ್ತಿ ನೀರ್ ಕಕ್ಕಿಸಿತ್. ಆಗ ಸೊಂಟಲಿದ್ದ ಬಟ್ಟೆ ಎಲ್ಲೊ ಜಾರಿ ಹೋಗಿ ಅವ್ಳಿಗೆ ತೀರ ನಾಚಿಕೆ ಆತ್. “ಏನ್ ಕೂಸು ನಾನ್ ನೋಡದ್ದಾ ಅದ್? ಮೊನ್ನೆ ಮೊನ್ನೆವರೆಗೂ ನಿನ್ನ ಕುಂಡೆ ತೊಳೆತಿದ್ದದ್ ನಾನೇ ಅಲ್ಲನಾ?” ಅಂತೇಳಿ ನಗಾಡ್ತ್.

ಹಾಂಗಾದ ಮೇಲೇನೆ ಅಜ್ಜ ಬಾಳೆದಂಡ್ ಹಿಡ್ಕಂಡ್ ಈಸಿಕೆ ಕಲ್ಸಿದ್. ಅದ್ ಬಾರಿ ಸುಲಬ. ಎಸ್ಟ್ ಹೊತ್ತಾದ್ರೂನು ಬೊಚ್ಚ್‌ತಿತ್ಲೆ. ಬೊಚ್ಚಿರೆ ಹಾಂಗೆ ಬಾಳೆ ದಂಡ್‌ನ ಮೇಲೆ ಬಾರ ಹಾಕಿ ಬಿದ್ದ್‌ಕಂಡರಾತ್. ನಿದಾನಕೆ ಹರಿವ ನೀರ್‌ನೊಟ್ಟಿಗೆ ಶರ್‍ರದ ಚಲನೆ. ಹಳ್ಳ ಹರಿವ ಸದ್ದೊಂದು ಬುಟ್ಟರೆ ಬೇರೇನೂ ಇಲ್ಲೆ. ಆಗ ಈ ಪರ್ಪಂಚಲಿ ಇರ್ದು ನಾನ್ ಮತ್ತು ಹಳ್ಳ ಮಾತ್ರ ಅಂತ ಅನ್ಸ್‌ತಿತ್ತ್.

ಇವ್ಳ್ ತಪಸ್ವಿನಿ ಗಂಡನ ಉಪದ್ರ ತಾಳಿಕಾಗದೆ ಹಳ್ಳ ಆಗಿ ಹರ್ದ್ ಹೋತು. ಎಸ್‌ಂಡ್ ಹುಣ್ಣಿನ ಬೇನೆ ಸಹಿಸಿಕ್ಕಾಗದೆ ಅಜ್ಜಿ ತಪಸ್ವಿನಿನ ಪಾಲಾತ್. ಅಜ್ಜಿಗೆ ಅದೊಂದು ಅಲ್ಲದಿದ್ದರೆ ಈಗ ಸಾ ಬದ್ಕಿರ್‌ತಿತ್ತ್. ಅಜ್ಜನೊಟ್ಟಿಗೆ ಈಗ ಹೇಳಿಕಂಬಕೆ ಆಗದನ್ನೆಲ್ಲಾ ನಂಗೆ ಅಜ್ಜಿನೊಟ್ಟಿಗೆ ಹೇಳಿಕಂಕಾಗ್‌ತಿತ್ತ್. ನಮ್ಮ ಬದ್ಕಿಲಿ ನಾವ್ಗೆ ಗೊತ್ತಿಲ್ಲದೆನೆ ಏನೇನೋ ನಡ್ದ್ ಹೋದೆ.

ಮಳೆಗಾಲಲಿ ಬುಡದೆ ಮಳೆ ಬಾಕಾಕನ ಅವ್ಳಿಗೆ ಹೊರ್ಕಡೆ ಹೋಕೆ ಆಗ್‌ತಿತ್ಲೆ. ಕಷ್ಟಂದ ಪಾಲದ ನಡೂವರೇಗೆ ಬಂದ್ ನಿಂತ್ ತಪಸ್ವಿನಿನ ನೋಡಿರೆ ನಾನಾ ಬಾವನೆಗ ಮನ್ಸಿಲಿ ಸುಳ್ದ್ ಮರೆಯಾಗ್‌ತಿತ್ತ್. ಬೇಸಿಗೆಲಿ ಎಳೆ ಕೂಸುನ ಲಾಲಿ ಜೋಗುಳದಾಂಗೆ ಅವ್ಳ ಹರಿವ ಸದ್ದ್. ಈಗ ಮಳೆಗಾಲಲಿ ಅವ್ಳ ರೂಪ ಎಲ್ಲ ನುಂಗಿಬುಟ್ಟನೆಂತ ಹೊರ್ಟ ರುದ್ರಕಾಳಿನ ಹಾಂಗೆ. ಯಾರ ಮೇಲಿನ ಸಿಟ್ಟ್ ತೀರ್ಸಿಕೆ ಈ ಓಟನೊ? ಅಲ್ಲ ಕಡಲ್ ಸೇರ್ವ ಅವ್‌ಸರನೋ?

“ಮಳೆಗಾಲಲೂ, ಬೇಸಿಗೆಲೂ ಹಳ್ಳ ಹರಿದರ್ನ ಸರಿಯಾಗಿ ಗಮನ್ಸೊಕು ಅಮ್ಮಣಿ. ಮಳೆಗಾಲದ ನೀರ್ನ ಬಣ್ಣಕ್ಕೂ ಬೇಸಿಗೆ ಕಾಲದ ನೀರ್ನ ಬಣ್ಣಕ್ಕೂ ಎಸ್ಟ್

ವ್ಯತ್ಯಾಸ ನೋಡು. ಮಳೆಗಾಲಲಿ ಕಾಡ್, ಕಡ್ಡಿ, ಮರಗ ಪಾಂಬಿಕಂಡ್ ಹೋದುದರ್ನ ನೋಡ್ದೇ ಬಾರಿ ಪೊರ್ಲು. ಹಳ್ಳದ ಎರ್ಡ್ ಪಕ್ಕಗಳಲ್ಲಿರುವ ಬಾಳೆಂದ ಕಾಯಿಗ ಹಳ್ಳಕ್ಕೆ ಬಿದ್ದ್ ಪಾಂಬಿಕಂಡ್ ಹೋಕಾಕನ ಈಜ್‌ಗಾರರ್ ಕಾಯಿಗಳ್ನ, ಮರಗಳ್ನ ಹಿಡ್ದ್ ಕೂಡಿಹಾಕಿವೆ. ಹಳ್ಳಕ್ಕೆ ಪಾಲ ಇದ್ದರೆ ಬಿದಿರ್ ಗಳೆಗೆ ಚೀಲದ ಹಾಂಗೆ ಕಟ್ಟಿ ಪಾಲಲಿ ನಿತ್ತ್‌ಕಂಡ್ ಕಾಯಿ ಪಾಂಬಿಕಂಡ್ ಬಾಕನ ಹಿಡಿವ ಗತ್ತ್ ನೋಡೋಕು. ಮಳೆಗಾಲ ಪೂರ್ತಿ ಅವ್ಕೆ ಅದೇ ಬದ್ಕ್. ಅದರ್‌ಂದ ಬಂದ ಹಣಂದ ದೊಡ್ಡ ದೊಡ್ಡ ಮನೆಗಳ್ನ ಕಟ್ಟಿಕೊಂಡವು ಕೂಡಾ ಒಳೊ." ಅಮ್ಮಣ್ಣಿ ಬೆರ್ಗಾಗಿ ಕೇಳಿ ತಲೆ ತೂಗ್‌ತಿತ್ತ್.

ಅಜ್ಜ ಮಾತ್‌ನ ಮುಂದುವರಿಸಿತ್. "ನಾನೊಮ್ಮೆ ಹಟಕಟ್ಟಿ ತಪಸ್ವಿನಿ ಹುಟ್ಟುವಲ್ಲಿಂದ ಸಮುದ್ರ ಸೇರುವಲ್ಲಿವರೇಗೆ ಹಳ್ಳದ ಪಕ್ಕಲೇ ನಡ್ಕಂಡೇ ಹೋದೆ. ತೋಟ ಸಿಕ್ಕಿದಲ್ಲಿ ಹಳ್ಳಕ್ಕೆ ಇಳಿಯಕಾಗ್‌ತಿತ್ತ್. ನಾಲ್ಕ್ ದಿನ ಬೇಕಾಗಿತ್ ನಂಗೆ. ಕೆಲವು ಕಡೆ ನೀರ್‌ನಾಯ್ಗಳ ಕಂಡೆ. ಒಂದೇ ಗಳಿಗೆ ನಮ್ಮ ಕಂಡರೆ ಸಾಕ್ ಅವು ಪುಸ್‌ಕ್ಕಂತ ಜಾರಿ ಮಾಯಾಗಿಬುಟ್ಟವೆ. ಕೆಲವು ಕಡೆ ಮೊಸಳೆಗಳೂ ಇದ್ದವೆ. ಕೆಲವು ಪಕ್ಕನೆ ನೀರ್ಗೆ ಜಾರಿವೆ. ಅಪರೂಪಕ್ಕೆ ಓಡ್ಸಿಕಂಡ್ ಬಾದೂ ಉಟ್ಟು. ಇವ್ಳ್ ಸಮುದ್ರ ಸೇರುವಲ್ಲಿ ಎಸ್ಟ್ ಅಗಲಾಗುಟ್ಟುಂತೇಳಿರೆ ಹಳ್ಳ ಯಾದ್ ಸಮುದ್ರ ಯಾದ್‌ಂತ ಗೊತ್ತಾಗದಸ್ಟ್. ಅಲ್ಲಿಂದ ಹಳ್ಳದೊಳಗೆ ಸುಮಾರ್ ದೂರದವರೇಗೆ ಮಂಜಿಗ ಬಂದವೆ. ತುಂಬಾ ಕಡೆ ಬೇಸಿಗೆಲಿ ಇವ್ಳ ಹೊಟ್ಟೆಂದ ಮೊಯ್ಯ್ ತೆಗ್ದ್ ಬದ್ಕೊವು ಎಸ್ಟ್ ಒಳ ಗೊತ್ತೊ. ಅವ್ಕೆ ಅದೇ ಕೆಲಸ. ಅದೇ ಜೀವನ. ನೆನ್ಪಿಸಿಕ ಅಮ್ಮಣ್ಣಿ, ಈಸಿಕೆ ಬಾರದವರ್ದ್ ಒಂದು ಬೊದ್ಕೇ ಅಲ್ಲ. ಒಂದು ಮಾತಂತೂ ಸರೀಂತ ಕಂಡದೆ. ಹಳ್ಳನ ಪ್ರೀತಿಸದವ್ಕೆ ಯಾರ್ನ ಕೂಡ ನಿಜಕ್ಕೂ ಪ್ರೀತ್ಸಿಕೆ ಆಕಿಲ್ಲೆ ಬಲ."

ಅಜ್ಜಂಗೆ ತುಂಬಾ ಪದಗ ಬರ್ತಿತ್.

"ನನ್ನ ಅಪ್ಪಂಗೆ ದೇವಸ್ತಾನಂದ ಕೆಳಗೆ ಗದ್ಯೆಯಿತ್ತ್. ವರ್ಸಕ್ಕೆ ಎರ್ಡ್ ಬೆಳೆ. ಏಣೆಲ್ ಮತ್ತು ಸುಗ್ಗಿ. ಏಣೆಲ್ ಮಳೆಗಾಲದ ಬೆಳೆ. ಸುಗ್ಗಿ ಚಳಿಗಾಲದ ಬೆಳೆ. ಗದ್ದೆ ಹೂಟೆ ಮಾಡಿ ಬತ್ತ ಬಿತ್ತಿ ತಿಂಗಳೊಳಗೆ ನೇಜಿ ತೆಗ್ದ್ ಗದ್ದೆ ಗೋರಿ ಮಾಡಿ ನೆಡ್ದು ಉಟ್ಟಲ್ಲಾ ಅದೊಂದು ಹಬ್ಬದ ಹಾಂಗೆ. ನೇಜಿ ಕೀಳಿಕಾಕನ ಅಕ್ಕಂದರ್ ಹೇಳ್ವ ಹಾಡ್‌ಗೇನ್ ನೆಡಿಕಾಕನ ಹೇಳ್ವ ಹಾಡ್‌ಎಸ್ಟ್? ಈಗ ಅದೆಲ್ಲಾ ಎಲ್ಲಿಟ್ಟು. ಗದ್ದೆ ಗೋರಿಗೆ ಎತ್ತ್‌ಗಳ ಹೊಡ್ಕಂಡ್ ನೆರೆಕರೆವೆಲ್ಲಾ ಬಾದು. ಹೂಡ್ಕನ ಒಬ್ಬೊಬ್ಬನ ದನಿಕೊಡುವ ಮರ್ಜಿ ಒಂದೊಂದು ತರ. ಅದರ ಕೇಳಿಕೆ ಕುಸಿ ಮಾತ್ರ ಅಲ್ಲ

ತಮಾಸೆನೂ. ಈಗ ಎಲ್ಲಾ ಕಡೆ ಅಡ್ಕೆ ತೋಟ. ಎರ್ಡ್ ಬೆಳೆ, ಮೂರು ಬೆಳೆ ಬತ್ತ ಬೆಳ್ಸ್‌ವಲ್ಲಿ ಕೂಡ ಅಡ್ಕೆ ತೋಟ ಮಾಡ್ಯೊಳಲ್ಲ ಅವರ್ನ ಏನ್‌ಂತ ಕರೆಯೋಕು? ನೀವ್ಗೆಲ್ಲಾ ಆ ಹಾಡ್‌ಗ ಹೇಂಗೆ ಗೊತ್ತಾಕು? ಕೆಸ್‌ರ್ಲಿ ಹೊರ್ಳಾಡಿ ಬದ್ಕ್‌ತಿದ್ದ ಅಂದಿನ ಮಣ್ಣಿನ ಮಕ್ಕಳೆಲ್ಲಿ? ಈಗ ಶೋಕಿ ಮಾಡಿಕಂಡ್ ಪೇಟೆ ಸುತ್ತುವ ಇಂದಿನ ಜನರೆಲ್ಲಿ. ಈಗೀಗ ಯಾವ ಕೆಲ್ಸಕ್ಕೂ ಜನ ಇಲ್ಲೆ. ಇನ್ನ್ ಹೆಚ್ಚ್ ದಿನ ಇಲ್ಲೆ ಬಲಾ. ಒಂದು ಹೊತ್ತಿನ ತುತ್ತಿಗೂ ಬರಗಾಲ ಬಾಕೆ ಉಟ್ಟು ನೋಡಿಕ."

ಅಮ್ಮಣ್ಣಿ ತಪಸ್ವಿನಿನ ಮದ್ಯದ ಪಾರೆಕಲ್ಲ್‌ಲಿ ಕುದ್ದು ನೀರ್ಲಿ ಕಾಲಾಡಿಸಿಕಾಕನ ಅಜ್ಜ ಏರ್‌ದನಿಲಿ ಯಕ್ಷಗಾನದ ಪದ ಹೇಳ್‌ತ್ತಿತ್ತ್. "ಮಳೆಗಾಲಲಿ ಪಾಲದ ನಡೂಲಿ ನಿಂತ್‌ಕಂಡ್ ತಪಸ್ವಿನಿನ ಗರ್ಜನೆನ ಮಿೂರ್‍ಸುವ ಹಾಂಗೆ ತಾರಕಲಿ ಹಾಡಿಕೆ ಯತ್ನಿಸ್‌ತಿದ್ದೆ. ಅವ್ಳ ಕೂಸು ನಾನ್. ಅವಳ್ನ ಸೋಲ್ಸಿಕುಟ್ಟೋ? ಅವಳ್‌ಂದ ಸ್ವರ ಕಲ್ತೆ, ಒಂದು ಪದ ಹಾಡಿಬುಟ್ಟನೆ ಕೇಳ್."

'ಚಿಕ್ಕ ಪ್ರಾಯದ ಬಾಲೆ ಚದುರೆ ನಿನ್ನಂಗವ
ಒರೆಯಲೇನೇ
ಮದ ಉಕ್ಕುತ ಬರುತಿದೆ ಮಾರನ ಮದದಾನೆ
ಒರೆಯಲೇನೇ'

ಅಜ್ಜ ಹಾಡಿಕಾಕನ ಅವ್ವ್ ಕೆಬಿಕೊಟ್ಟು ಕೇಳ್ತಿತ್. ಅವ್ಳಿಗೆ ಅದರ ಅರ್ತ ಗೊತ್ತಾದ್ದ್ ಹೈಸ್ಕೂಲು ಸೇರ್ದ ಮೇಲೆ. ಅಜ್ಜ ಯಾರ್ನಾದರ್ ಮನ್ಸಿಲಿ ನೆನ್ಸಿಕಂಡ್ ಆ ಹಾಡ್ನ ಹೇಳ್ತಿತ್ತೊ ಹೆಂಗೆ ಅಂತ ಆಗ ಅವ್ಳ್ ಗ್ಯಾನಮಾಡ್‌ತ್ತಿತ್.

ಎಸ್‌ಂಡ್ ರೋಗಂದ ನರಳಿ ಅಜ್ಜಿ ತಪಸ್ವನಿಲಿ ಹರ್ದ್ ಹೋಕನ ಅಜ್ಜಂಗೆ ಎಸ್ಟ್ ಪ್ರಾಯನೋ? ಅಂವ ಮನಸ್‌ನ ಯೋಚನೆಗಳ್ನ ಹತ್ತಿಕ್ಕಿಕಂಡ್ ಹೇಂಗೆ ಬದ್ಕಿತೋ?

"ಅಮ್ಮಣ್ಣಿ, ಯಕ್ಷಗಾನ ಸುರು ಮಾಡಿಕಾಕನ 'ಅಂಬುರುಹದಳನೇತ್ರೆ' ಅಂತ ಬಾಗವತರ್ ಹಾಡಿವೆ. ಅಂಬು ಅಂದರೆ ನೀರ್‌ಗಡ. ಅಂಬುರುಹದಳ ನೇತ್ರೆಂತೇಳಿರೆ ನೀರ್ಲಿ ಹುಟ್ಟಿದ ತಾವರೆ ಹಾಂಗಿರುವ ಕಣ್ಣಿರುವವಳ್ ಅಂತಾದೆ. ನೀರಿದ್ದರೆ ತಾನೆ ಹುಟ್ಟು. ಹೆಣ್ಣ್‌ಗ ನದಿಗಳ ಹಾಂಗೆಂತೇಳ್ವೆ, ಅದಕ್ಕೆ ಹಳ್ಳಗಳಿಗೆಲ್ಲ ಹೆಣ್ಣಿನ ಹೆಸ್ರ್ ಇರ್‍ದು. ಕೊಡ್ಗಿಲಿ ಕಾವೇರಿ ಹಳ್ಳ ಹುಟ್ಟಿ ಹರ್‍ದದೆ. ಕಾವೇರಿ ಒಬ್ಬ ರುಸಿನ ಹೆಣ್ಣ್ ಆಗಿತ್ತ್. ಅಂವನೊಟ್ಟಿಗೆ ಸರಿ ಬಾರದೆ ಹಳ್ಳ ಆಗಿ ಹರ್ದ್ ಹೋತ್. ಈ ತಪಸ್ವಿನಿದೂ ಅದೇ ಕತೆ. ಹೆಣ್ಣ್‌ಗ ಗಂಡಂದರ್‌ಂದ ತುಂಬಾ ಕಸ್ಟ ಅನುಬವಿಸುವೆ. ಜೀವನಲಿ ಗಂಡಿಗಿಂತ ಹೆಚ್ಚಿಗೆ ನೋವು ತಿಂಬವಳ್ ಹೆಣ್ಣೇ. ಬೇನೆ ಕೊಡುವಂವ ಗಂಡ್ಸ್.

ನಿನ್ನ ಅಜ್ಜ ಮಾತ್ರ ಹಾಂಗೆ ಅಲ್ಲ ಬಲ. ನಿನ್ನ ಅಜ್ಜಿಗೆ ಒಂದೇ ಒಂದು ಕಸ್ಟ ಕೊಟ್ಟಂವ ನಾನಲ್ಲ. ಆದ್ರೆ ಆ ಬೇನೆ ಇಲ್ಲದ ಕಸ್ಟ ಅವ್ಳಿಗೆ ಕೊಟ್ಟ್‌ಬುಡ್ತ್. ಯಾಕೆ ಗೊತ್ತೋ? ಆ ದೇವ್ರ್ ಒಬ್ಬ ಗಂಡ್ಸ್."

ಅಜ್ಜ ಹಾಂಗೆ ಹೇಳಿಕಾಕನ ಅವ್ವ ಕಣ್ಣ್ ಕರೇಲಿ ಹಂಞಾ ನೀರಿತ್ತ್. ಅಜ್ಜ, ಅವಂಗೆ ಗೊತ್ತಿರುವ ಪದಗಳನ್ನೆಲ್ಲ ಅವ್ಳಿಗೆ ಕಲ್ಸಿಕೊಟ್ಟಿತ್. "ಇದಕ್ಕಿಂತ ದೊಡ್ಡ ಆಸ್ತಿ ಬೇರೊಂದಿಲ್ಲೆ ಅಮ್ಮಣ್ಣಿ. ಈ ಅಜ್ಜಂದ ದೊಡ್ಡ ಆಸ್ತಿ ಮಾಡಿಕಾತ್ಲೆ. ಅದ್ರೆ ಬೇಲಿ ಹಾಕಿದ ಇಸ್ಟ್ ಜಾಗ ಉಟ್ಟಲ್ಲಾ ಇದ್ ನಾನೇ ಮಾಡ್ದ್. ಒಂದು ಕಾಲಲಿ ಆನೆಗಳ ದಾರಿನೇ ಬದಲಾಯ್ಸಿಬುಟ್ಟೆ. ರಾಜರಸ್ತೆಯೇನೋ ಮುಂದೆನೇ ಇತ್ತ್. ಆದರೆ ಒಂದು ಅಂಗಡಿ ಸಿಕ್ಕೊಕುಂತಾದರೆ ಒಂದುವರೆ ಗಂಟೆ ನಡೆಕಾಗಿತ್ತ್.

ಒಂದು ಇಸ್ಕೂಲು, ಆಸ್ಪತ್ರೆ ಯಾವ್ದೂ ಹತ್ರಲಿ ಇತ್ಲೆ. ಈ ರಾಜ ರಸ್ತೆಗೆ ದಾಮರೂ ಹಾಕಿತ್ಲೆ. ನಿನ್ನ ಪ್ರಾಯಲಿ ನಾನ್ ಕಾರ್, ಬಸ್ ಕಂಡಂವಲ್ಲ. ಹಳ್ಳ ನೋಡಿ ನೆಲಲಿ ಬದ್ಕಿಕೆ ಕಲ್ತೆ. ಆಕಸಲಿ ಇಮಾನ ಕಂಡ್ ಕನ್ಸ್ ಕಾಂಬೊದರ ಅಬ್ಯಸ ಮಾಡಿಕಂಡೆ. ಒಂಟಿತನ ಕಳೆಕೆ ಯಕ್ಷಗಾನದ ಪದಗಳ್ನ ಕಲ್ತೆ. ಆದ್ರೆ ನಿನ್ನಪ್ಪ ಉಟ್ಟಲ್ಲಾ? ಅಂವ ಒಂದು ಹಾಡ್ನೂ ಕಲ್ತಿತಿಲ್ಲೆ. ನಾನ್ ಮಾಡ್ದ ಆಸ್ತಿಗೆ ಒಂದು ಚೂರು ಸೇರ್ಸಿತ್ಲೆ. ಅದಿರ್ಲಿ, ನಾನ್ ಮಾಡ್ದ ಆಸ್ತಿನ ಅಂವ ಉಳ್ಸಿಕಂಡರೆ ಅಸ್ಟೇ ಸಾಕ್."

ಅಪ್ಪನ ಹೆಸ್ರ್ ಎತ್ತಿರೆ ಸಾಕ್ ಅವ್ವ ಮೋರೆ ಬಾಡಿ ಹೋಗುತಿತ್ತ್. ಅಂವ ಹಿಂಬೊತ್ತಿಗೆ ತೂರಾಡಿಕಂಡೇ ಮನೆಗೆ ಬಾದು. ಅವ್ವಂಗೆ ಇಲ್ಲದ ನೆವನ ಹಿಡ್ದ್ ದಿನಾ ಬಯ್ಯುದ್.

"ನಿನ್ನ ಕರ್ಮಕ್ಕೆ ಮೂರ್ ಹೆಣ್ಣ್ ಹೆತ್ತಳ. ಅಂಗ್ಡಿ ಇಸಿ ಚಕ್ಕುಲಿ ವ್ಯಾಪಾರ ಮಾಡ್. ಮೂರಾತಲ್ಲ! ಇನ್ನೂ ಒಂದು ಹೆಣ್ಣ್ ಕೂಸುನ ಹೆತ್ತ್‌ಬುಡು. ಕಡೇ ಕಾಲಕ್ಕೆ ಸುಡ್ಕಳಿಗೆ ನಿನ್ನ ಹೊತ್ತ್‌ಕಂಡ್ ಹೋಕೆ ನಾಲ್ಕ್ ಜನ ಬೇಕಲ್ಲಾ? ನಿನ್ನ ಹಣೇಬರಕ್ಕೆ ಒಂದು ಗಂಡ್ ಕೂಸ್ನ ಹೆರಿಕಾತ್ಲೆ. ನಿನ್ನ ಮೂರು ಹೆಣ್ಣ್ ಮಕಳ್ನ ಗಂಟ್ಲಿಗೆ ಕಟ್ಟಿಕಂಡ್ ಮಳೆಗಾಲಲಿ ತಪಸ್ವಿನಿಗೆ ಹಾರಿ ಸತ್ತ್‌ಬುಡು. ನಾನ್ ಇನ್ನೊಂದು ಮೊದ್ವೆ ಆಗಿ ಗಂಡ್ ಮಂಜಂಗೆ ಅಪ್ಪ ಆನೆ."

"ಅಪ್ಪ ಹಾಂಗೆಲ್ಲ ಬಾಯಿಗೆ ಬಂದ ಹಾಂಗೆ ಬೊಯ್ಯಕಾಕನ ಅವ್ವ ಪಾಪ ಮರ್ಡುದು ಬುಟ್ಟರೆ ಬೇರೇನ್ ಮಾಡಿಕೆ ಸಾದ್ಯ ಉಟ್ಟು? ಸುಮ್ಮನೆ ಕಣ್ಣೀರ್ ಹಾಕ್‌ತಿತ್ತ್. ಅಜ್ಜ ಮಾತಾಡದೆ ಸುಮ್ಮನಿರ್‌ತಿತ್ತ್.

“ಅಪ್ಪಂಗೆರ್ಡ್ ಬಯ್ದ್ ಬುದ್ದಿ ಹೇಳಜ್ಜ” ಅಂತ ಅಮ್ಮಣ್ಣಿ ಹೇಳಿರೆ “ಅಂವ ಸಣ್ಣಂವಾಗಿರಿಕಾಕನ ಎಷ್ಟು ಸರ್ತಿ ನಾನ್ ಹೊಡ್ದೆಳೆನೋ. ದೊಡ್ಡಂವ ಆದ ಮೇಲೆ ಹಾಂಗೆ ಬಡಿಯಕ್ಕಾದೆನೋ? ಈಗಂತೂ ನಾನ್ ಅಜ್ಜ ಆಗಿಬುಟ್ಟೆ. ಅಂವ ಎಷ್ಟ್ ಗಟ್ಟಿ ಉಟ್ಟು ನೋಡು. ಅವಂಗೆ ಈಗ ಸಹ ಎರ್ಡ್ ಬುಡ್ವೆ. ಆದ್ರೆ ಅಂವ ತಿರ್ಗಿಸಿ ಕೊಟ್ಟು ಬುಟ್ರೆ ನಾನ್ ನಿನ್ನ ಅಜ್ಜಿನ ದಾರಿ ಹಿಡಿಯೋಕಸ್ಟೆ. ಕುಡ್ದೊವು ಬಯ್ದ್ ಗಲಾಟೆ ಮಾಡ್ದೆಲ್ಲ ಇದ್ದದೆ. ಆದರೆ ಇಂವ ಎರಡ್ನೆ ಮೊದ್ವೆ ಮಾತೆತ್ತ್‌ತುಟ್ಟಲ್ಲಾ. ಅದೇ ಚಿಂತೆಯಾಗುಟ್ಟು ನಂಗೆ.”

“ಎರಡ್ನೆ ಮೊದ್ವೆಯಾದರೆ ಏನಜ್ಜಾ?”

“ಸುರೂನ ಹೆಣ್ಣ್ ಮಕ್ಕ ಎಲ್ಲಾ ಮೂಲೆ ಪಾಲಾದವೆ. ಗಂಡನೇ ಅವರ್ನೆಲ್ಲಾ ಮನೆಂದ ಹೊರ ಹಾಕುದೂ ಉಟ್ಟು. ಈವರೇಗೆ ತನಗಿದ್ದ ಹಕ್ಕ್ ಹೊಸಬ್ಳ ಪಾಲಾದರೆ ಸುರೂನ ಹೆಣ್ಣ್ ಹೇಂಗೆ ಸಹಿಸುದು? ಮೂರು ಹೆಣ್ಮಕಳ್ನ ಕಟ್ಟಿಕಂಡ್ ನಿನ್ನ ಅವ್ವ ಎಲ್ಲಿಗೆ ಹೋದು? ಮತ್ತೆ ಎರಡ್ನೆ ಮೊದ್ವೆ ಆಗಿ ನಿಜವಾದ ಸುಕ ಪಟ್ಟವರ್ನ ನಾನ್ ಇದುವರೇಗೆ ಕಂಡಂವಲ್ಲ. ಏನಿದ್ರೂ ನಾನ್ ಇರುವವರೇಗೆ ನಿನ್ನ ಅಪ್ಪಂಗೆ ಇನ್ನೊಂದು ಮೊದ್ವೆ ಆಕೆ ದೈರ್ಯ ಬಾಕಿಲ್ಲಂತ ತಿಳ್ದಳೆ. ಆದ್ರೆ ಈ ಮುದಿ ಜೀವ ಇನ್ನೆಷ್ಟ್ ದಿನನೋ?”

ಅಮ್ಮಣ್ಣಿ ಅಜ್ಜನ ಗಟ್ಟಿಯಾಗಿ ಅಪ್ಪಿಕಂಡತ್. “ತಪ್ಪು ಮಾಡಿಬುಟ್ಟೆ ಅಮ್ಮಣ್ಣಿ. ನನ್ನ ಮುದ್ದು ಕೂಸುನ ಎದ್ರ್ ಈ ಮಾತ್‌ನ ನಾನ್ ಹೇಳಿಕಾಗದಿತ್ತ್. ಇಲ್ಲೆ ಅಮ್ಮಣ್ಣಿ ನಿನ್ನ ಬುಟ್ಟ್ ನಾನೆಲ್ಲಿಗೂ ಹೋದುಲ್ಲೆ. ನೋಡು, ನಿನ್ನ ಅಜ್ಜ ಈಗ ಎಷ್ಟ್ ಗಟ್ಟಿಮುಟ್ಟಾಗುಟ್ಟು!”

ಅವ್ಳ್ ಅಜ್ಜನ ಹೆಗ್‌ಲ್‌ಗಳ್ನ ಸವರ್ತ್. ಅದರ ಮೇಲೆ ಕುದ್ದ್‌ಕಂಡ್ ಅವ್ಳ್ ಎಷ್ಟ್ ಸರ್ತಿ ತಪಸ್ವಿನಿನ ದಾಟಿಟೋ? ಎಷ್ಟ್ ಸರ್ತಿ ಕಪಿಲೇಶ್ವರನ ಜಾತ್ರೆಗೆ ಹೋಗುಟೋ? ಯಕ್ಷಗಾನ ಬಯಲಾಟ ನೋಡಿಕೆ ಎಷ್ಟ್ ಸರ್ತಿ ಹೋಗಿತ್ತೋ? ಅಮ್ಮಣ್ಣಿಗೆ ಬೇಜಾರಾದು ಬೇಡಂತ ಅಜ್ಜ ಹಾಡಿಕೆ ಸುರುಮಾಡ್ತ್.

ತರುಣಿಮಣಿ ಪೋಗಿದಿರು ಮನ್ಮಥ<br>
ಶರಧಿ ಬೆಂಡಾಗಿಹೆನು ಎನ್ನನು<br>
ಸುರತ ಸುಖ ಪಡಿಸೆಂದು ಪೇಳಿದ<br>
ಅರಸ ಪ್ರೇಮದಿ ಯಾಚಿಸಿ.

“ನಿಂಗೆ ಒಳ್ಳ ಸೊರ ಉಟ್ಟು ಅಮ್ಮಣ್ಣಿ. ಯಕ್ಷಗಾನಕ್ಕೆ ಹೇಳಿ ಮಾಡ್ಸಿದ ಏರುಸ್ವರ ಅದ್. ನಾನ್ ಇದುವರೇಗೆ ಹೆಣ್ಣ್ ಬಾಗವತರ ಕಂಡಂವಲ್ಲ. ಅಸಲ್ ಯಕ್ಷಗಾನ ಉಟ್ಟಲ್ಲಾ ಇದೊಂದು ಗಂಡು ಕಲೆ. ಹೆಣ್ಮಕ್ಕಳಿಗೆ ಹೇಳ್ಸಿದಲ್ಲ. ನೀನ್ ಮನಸ್ಸ್ ಮಾಡ್ರೆ ಬಾಗವತಳಾಕ್. ಅಜ್ಜಂದ ಆಗದರ ನೀನ್ ಸಾದಿಸಿ ತೋರ್ರೊಕು. ನಿಂಗೊಬ್ಬ ಒಳ್ಳ ಗುರು ಸಿಕ್ಕೊಕು. ನೀನ್ ಶಾಸ್ತ್ರೀಯ ಸಂಗೀತ ಕಲ್ತರೆ ಇನ್ನೂ ಒಳ್ಳದ್. ರಾಗ ಮತ್ತು ತಾಳ ಎರಡರ ಮೇಲೂ ಹತೋಟಿ ಸಿಕ್ಕಿದೆ. ನೀನ್ ದೊಡ್ಡ ಹಾಡ್‌ಗಾರ್ತಿ ಆಕು. ಸಾವಿರಾರ್ ಜನ್ರೆದ್‌ರ್ ಎತ್ತರದ ವೇದಿಕೆಲಿ ಕುದ್ದು ಹಾಡೋಕು. ಆಗ ಈ ಅಜ್ಜ ಮೇಲೆ ಮೋಕೆಂದ ನೋಡಿ ನಿನ್ನ ಮೇಲೆ ಹೂವಿನ ಮಳೆ ಕರೆಕು.”

ಅಜ್ಜ ಮತ್ತೆ ಮತ್ತೆ ಸಾವಿನ ಮಾತಾಡ್ತುಟ್ಟು. ಒಂದಲ್ಲ ಒಂದಿನ ಎಲ್ಲವೂ ಸತ್ತೇ ಸಾಯೊಕಡ. ಹಾಂಗಂತ ಶಾಲೆಲಿ ಮಾಸ್ಟ್ರ ಹೇಳಿಯೊಳೊ. ಅವಳ ಕ್ಲಾಸಿನ ಮಕ್ಕ ಒಮ್ಮೊಮ್ಮೆ ಮನೆಂದ ಸತ್ತ ಸುದ್ದಿ ಹೊತ್ತ್ ತರ್ತಿದ್ದೊ. ಅಜ್ಜ ಹಾಂಗೆ ಹೇಳೋಕುಂತಾದರೆ ಯಾವ ಕಾಯ್ಲೆ ಅಂವನ ಪೀಡ್ಸುತುಟ್ಟೋ ಏನೋ? ಅಜ್ಜ ಹೋಗಿಯೇ ಬುಟ್ಟುದೆ. ಅವ್ವಿಗೆ ಮರ್ಡಿಕೆ ಬಾತ್. ಅಜ್ಜ ಹೋದರೆ ಮನೆಲಿ ನನ್ನ ಮಾತಾಡ್ಸೊವೇ ಇಲ್ಲೆ. ಸಣ್ಣ ತಂಗೆ ಶಾರದಳ ನೋಡಿಕೊಂಬುದರ್ಲೆ ಅಮ್ಮನ ಹೊತ್ತೆಲ್ಲ ಹೋದೆ. ದೊಡ್ಡ ತಂಗೆ ಬಾಳಕ್ಕನ ಸಹ ಸರಿಯಾಗಿ ಮಾತಾಡ್ಸಿಕೆ ಆದುಲೆ. ಅಪ್ಪನಂತೂ ಮಂಜಣೆ ಮಾಡ್ದ ನೆನ್ಪೇ ಇಲ್ಲೆ. ಎಲ್ಲದಕ್ಕೂ ಇರುವಂವ ಇಂವ ಒಬ್ಬನೇ. ಈ ಅಜ್ಜನೂ ಹೋಗಿಬುಟ್ಟರೆ ಮತ್ತೆ ಯಾರೂ ಇರುದ್ಲೆ. ಮನ್ಸ್‌ಲೇ ಬೇಜಾರ್ ಪಟ್ಟ್‌ಕಂತ್.

ಅಂದ್ ಅವ್ವ್ ಶಾಲೆ ಬುಟ್ಟು ಮನೆಗೆ ಬಾಕನ ಅಂಗಳಲಿ ತುಂಬಾ ಜನ ಸೇರಿದ್ದೊ. ಅಂಗಳದ ನಡೂಲಿ ಅಜ್ಜನ ಬೆಂಚಿನ ಮೇಲೆ ಮಲ್ಗಿಸಿದ್ದೊ. ಮೋರೆ ಒಂದು ಬುಟ್ಟು ಇಡೀ ಶರ್ರಕ್ಕೆ ಬಿಳಿ ಬಟ್ಟೆ ಹೊದ್ಸಿದ್ದೊ. ಅಜ್ಜನ ಕಣ್ಣ್ ಮುಚ್ಚಿಕಂಡಿತ್. ಅವ್ವ ಮಾತ್ರ ನೆನ್ಸಿನೆನ್ಸಿ ಅಳ್ತಿತ್.

———***———

# ೨. ಈ ಲೋಕಂದ ಪರ ಲೋಕಕ್ಕೆ.

ಹಂಞ ಹೊತ್ತಿ ಪಟೇಲ್ರೊಟ್ಟಿಗೆ ಊರ್‌ಗೌಡ್ರ್ ಬಂದ್ರೊ. ಅಪ್ಪ ಏನೋ ತಪ್ಪು ಮಾಡ್ದವರ ಹಾಂಗೆ ಕೈಕಟ್ಟಿ ನಿಂತ್‌ಕಂಡಿತ್ತ್. ಊರುಗೌಡ್ರ್ ಜೋರು ಮಾಡ್ದೊ.

"ಏನ್ ಹಾಂಗೆ ನಿಂತೊಳ? ಬೆಪ್ಪನ ಹಾಂಗೆ. ಎಷ್ಟ್ ಹೊತ್ತ್ತಂತ ಹೆಣನ ಹೀಂಗೆ ಇಸಿಕಂಡಿಯಾ? ನಿನ್ನ ಕುಟುಂಬದೊವು, ನೆಂಟ್ರೆಲ್ಲಾ ಬಂದೊಳೊನೊ? ಸುಡ್ಕುಳಿ ಸೌದೆ ಎಲ್ಲಾ ತಯಾರ್ ಮಾಡಿ ಕಾಟ ಒಟ್ಟೊಕು. ಒಮ್ಮೆ ಎಲ್ಲಾ ನೋಡಿ ಏನೆಲ್ಲಾ ಆಕೋ ಬೇಗ ಮಾಡಿಬುಡು."

ಮನೆಗೆ ನೆಂಟ್ರ್ ಬಾತಿದ್ದದೇ ಅಪ್ರೂಪ. ಕುಟುಂಬುದ ಪೈಕಿ ಅಪ್ಪನ ತಮ್ಮ ಶಿವಪ್ಪ ಸಣಪ್ಪ ಅಪ್ಪನೊಟ್ಟಿಗೆ ಏನೋ ಕಾರಣಕ್ಕೆ ಜಗಳಾಡಿ ಹೋದ ಮೇಲೆ ಮತ್ತೆ ಮನೆಗೆ ತಿರ್ಗಿ ಬಾತ್ಲೆ. ಅವಂಗೆ ದೇವಸ್ತಾನದ ಹತ್ರ ದೊಡ್ಡ ಆಸ್ತಿ ಉಟ್ಟು. ಸಣಂವನ ಕಡೆಂದ ಸಿಕ್ಕಿದ್. ಅವ್ವನ ತಮ್ಮ ಪೋಲೀಸ್ ಆಗಿತ್ತ್. ಈ ಪೋಲೀಸ್ ಮಾವ ಅಪ್ರೂಪಕ್ಕೆ ಅಮ್ಮನ ಸಂಸಾರ ನೋಡಿಕೆಂತೇಳಿ ಬಾತಿತ್ತ್. ಮತ್ತೆ ದಿನಾ ಮನೆಗೆ ಬಾತಿದ್ದವಂತೇಳಿರೆ ತೀರ್ತದ ತ್ಯಾಂಪಣ್ಣ.

ತ್ಯಾಂಪಣ್ಣ ಮೊದುವೆ ಆಗಿತ್ಲೆ. ಹೇಳಿಕಂಬಕೆ ಅವಂಗೆ ನೆಂಟ್ರೂ ಇತ್ಲೆ. ರಾಜರಸ್ತೆಂದಾಚೆ ಅವಂದೊಂದು ಸಣ್ಣ ಗುಡ್ಸಲಿತ್ತ್. ದಿನಾ ಕುಪ್ಪಿಲಿ ತೀರ್ತ ತಂದ್ ಅಜ್ಜಂಗೆ ಕೊಡ್ತಿತ್ತ್. ಹಾಂಗೆ ಯಾರಿಗೆಲ್ಲಾ ಕೊಡ್ತಿತ್ತೋ ಗೊತ್ತ್ಲೆ. ಅದ್ ಬುಟ್ಟರೆ ಅವಂಗೆ ಬೇರೆ ಕೆಲ್ಸನೂ ಇತ್ಲೆ. ಉತ್ಸಾಹ ಬಂದರೆ ಅಜ್ಜನೊಟ್ಟಿಗೆ ರಾಗ ಸೇರ್ಸ್‌ತಿತ್ತ್. ರಾಗ ಲಾಯಕಿಲ್ಲೆಂತೇಳಿರೆ ಅಂವ ಮೋರೆ ಬಾಡ್ಸ್‌ತಿತ್ತ್.

ಅಮ್ಮಣ್ಣೀ, ನಿನ್ನ ಅಪ್ಪ ದಿನಾ ಹಾಕಿಕಂಡ್ ಬಂದದೆಲ್ಲಾ, ಅದ್ ಸ್ಪಿರೀಟಂದ ಮಾಡ್ದ್. ಸಲ್ಪೇಟ್, ಬೆಟ್ರಿ, ಕೋಳಿ ಹೇಲ್, ಚರ್ಮದ ಚೂರು ಹೀಂಗೆ ಏನೆಲ್ಲಾ ಹಾಕಿ ಅದರ್ನ ಮಾಡ್ದು. ಕುಡ್ದರೆ ತಲೆಗೇರಿ ಗಿರ್ರಂತ ತಿರ್ಗಿಸಿದೆ. ಆದರೆ ಅದರ ಸಂಗತಿ ಏನ್ ಗೊತ್ತೋ? ಅದರ ದಿನಾ ತಕಂಡರೆ ಕರ್‌ಳ್ ಒಟ್ಟೆ ಆಗಿ ಕಿತಾಪತಿ ಆದೆ. ನಮ್ಮ ತ್ಯಾಂಪಣ್ಣ ಮಾಡ್ದು ಶುದ್ದಾದ್. ತಪಸ್ವಿನಿ ನೀರ್ಗಿಂತ್ಲೂ ಕಿಲೀನು. ರುಚಿ ನೋಡಿಯೊನೋ? ಅಜ್ಜ ತ್ಯಾಂಪಣ್ಣನ ತೀರ್ತನ ಅವ್ವ ಬಾಯಿ ಹತ್ರ ತಾತ್. ಅದರ ವಾಸನೆಗೆ ಕಕ್ಕಿಕೆ ಬಂದಂತಾಗಿ ಅವ್ವ್ ಮೋರೆ ತಿರ್ಗಿಸಿತ್. ತ್ಯಾಂಪಣ್ಣ ನಗಾಡ್ತ್.

"ನೋಡ್ತಾ ಇರ್ ಅಮ್ಮಣ್ಣಿ. ಈಗೇನೋ ಬೇಡಾಂತೇಳಿಯಾ ಮತ್ತೆ ನೀನೇ ತ್ಯಾಂಪಣ್ಣಂದ ಕೇಳಿ ಕುಡ್ದಿಯ. ಇದರ ರುಚಿ ಏನ್‌ಂತ ನಿನ್ನ ಅಮ್ಮನ ಕೇಳ್.

ನೀನ್ ಹೊಟ್ಟೆಲಿರಿಕಾಕನ ಅವಳಿಗೇನ್ ಕಡಿಮೆ ಕಷ್ಟ ಕೊಟ್ಟಿದೋ? ಹೆರಿಕಾಕನಂತೂ ತುಂಬಾ ಬೇನೆ ತಿಂದುಟು. ಅವ್ಳ ಮೈ ಕೈ ಬೇನೆ ವಾಸಿಯಾದದ್ದ್ ತ್ಯಾಂಪಣ್ಣನ ತೀರ್ಥಂದ. ನಿನ್ನ ಅಪ್ಪ ಅಷ್ಟಕ್ಕೆ ಬುಟ್ಟತ್ಲೆ. ಅವನ ಪರಾಕ್ರಮಂದ ನಿಂಗೆ ಇಬ್ಬರ್ ತಂಗೆಕಾದೊ. ಆಗಳೂ ತೀರ್ಥ ಈ ತ್ಯಾಂಪಣ್ಣಂದೇ. ಊರ್ಲಿ ಕಾಯ್ಸವು ಎಷ್ಟಿಲ್ಲೆ? ಹೆಸ್ರ್ ಬಂದದ್ ಈ ತ್ಯಾಂಪಣ್ಣಂದ್ ಮಾತ್ರ. ಈ ಹೆಸ್ರ್ ಇಸಿದ್ ಯಾರ್ ಗೊತ್ತೊ? ನಿಮ್ಮ ಶಾಲೆನ ಹೆಡ್ಮಾಸ್ಟ್ರ. ದಿನಕ್ಕೊಮ್ಮೆ ತೀರ್ಥದ ಸೇವನೆಯಾಗದಿದ್ರೆ ಅವ್ರ ತಲೆನೇ ಓಡುದಿಲ್ಲೆ ಗಡ. ರುಚಿ ನೋಡಿರೆ ನೀನೂ ಬುಡಿಕಿಲ್ಲೆ" ಅಜ್ಜನ ಮಾತ್ ಅವ್ಳಿಗೆ ನೆನ್ಪಾಗ್‌ತಿತ್.

ಇಂದ್ ತೀರ್ಥದ ತ್ಯಾಂಪಣ್ಣನ ಮೋರೆಲಿ ನಗೆ ಇತ್ಲೆ. ಅಜ್ಜನ ಪ್ರೀತಿಸಿದಷ್ಟ್ ಅಂವ ಯಾರ್‍ನೂ ಪ್ರೀತಿಸಿರಿಕಿಲ್ಲೆ. ಪ್ರತಿ ದಿನ ಅಜ್ಜಂಗೆ ತೀರ್ಥ ತಂದ್ ಕೊಡಂವ ಅವನೆ. ಒಂದೇ ಒಂದು ದಿನ ಅಂವ ದುಡ್ಡ್ ತಗಂಡದರ ಅವ್ಳ್ ಕಂಡಿತ್ಲೆ.

"ನಿಂಗೆ ಗೊತ್ತಿಲ್ಲೆ ಅಮ್ಮಣ್ಣಿ. ಹೀಂಗೆ ಇಂತಾ ರಣ ಕಾಡ್ ಇರುವಲ್ಲಿ ಕೃಷಿ ಮಾಡ್‌ಕಂತ ತೋರ್‍ಸಿಕೊಟ್ಟದ್ದೇ ನಿನ್ನ ಅಜ್ಜ. ಈ ದಾಸಪಣ್ಣ. ಇಲ್ಲಿ ಒಂದು ಕಾಲಲಿ ಸುತ್ತು ಮುತ್ತ ಒಂದೇ ಒಂದು ಮನೆಯಿತ್ಲೆ. ಇದ್ ರಣಗ, ಬ್ರಹ್ಮರಾಕ್ಷಸ, ಪೀಡೆ ಪಿಶಾಚಿಗ ಓಡಾಡುವ ಜಾಗಗಡ. ಇಂತ ಕಡೆಲಿ ನಿನ್ನ ಅಜ್ಜ ಸಾದಿಸಿತಲ್ಲ. ಅವನ ದೈರ್ಯ, ಸಾಹಸ ಯಾರಾದ್ರೂ ಸರಿ ಮೆಚ್ಚೋಕೆ. ಈಗ ನೋಡು ರಾಜರಸ್ತೆಂದ ಆಚೆಗೆ ಊರ್ ಬೆಳ್ತ್. ಶಾಲೆ ಬಾತ್. ಆಸ್ಪತ್ರೆ ಆತ್. ನಾವ್ಗೆ ಹೆಚ್ಚಿಗೆ ಓದಿಕೆ ಆತ್ಲೆ. ನೀನ್, ಬಾಳಕ್ಕ, ಶಾರದೆ ಓದೊಕು. ನಾವ್ ಕೇಳ್ದಿಲ್ಲಾ ಅಜ್ಜಿ ಕತೆಗ. ಈ ಲೋಕಲಿ ಎಷ್ಟ್ ಕತೆಗಳೊಳನೋ ಏನೊ? ನಾವ್ಗೆ ಅದೆಲ್ಲಾ ತಿಳ್ಕಂಬ ಪುಣ್ಯ ಇಲ್ಲೆ. ನೀವ್ಗಾದ್ರೂ ಸಿಕ್ಕಲಿ."

ತ್ಯಾಂಪಣ್ಣ ಹೇಳಿಕಾಕನ ಅವ್ಳ್ ಅಜ್ಜನನ್ನೇ ನೋಡ್ತಿತ್. ಅಜ್ಜ ನಗ್‌ತಿತ್.

"ಇಲ್ಲೇ ಯಾಕಜ್ಜ ನೀ ಮನೆ ಮಾಡ್ದ್?"

"ಹರಿವ ತಪಸ್ವಿನಿನ ದಿನಾ ನೋಡ್ತೊಳಲ್ಲ ಕೂಸು? ಎಷ್ಟ್ ಮಡಿಯಾಗುಟ್ಟು ಅವ್ಳ್, ಕೆಳಗೆ ಹೋದರೆ ಇಷ್ಟ್ ಮಡಿಯಿಲ್ಲೆ. ಇಲ್ಲಿ ಹಳ್ಳದ ಎರ್‍ಡೂ ಕಡೆ ನಮ್ಮದೇ ಜಾಗ. ಆಚೆಗೆ ಹೋದರೆ ಒಂದೊಂದು ಕಡೆ ಒಬ್ಬೊಬ್ಬರ್ದ್. ನೀನ್ ದಿನಾ ಕುದ್ರುವ ಪಾರೆ, ಈಸುವ ಜಾಗಕ್ಕೆ ಬೇರೆ ಯಾರೂ ಬಾದುಲ್ಲೆ. ಆಚೆಗೆ ಇಂತಾ ಜಾಗನೇ ಇಲ್ಲೆ. ಇಲ್ಲಿ ನಿನ್ನ ಪಾರೆಕಲ್ಲ್‌ಲಿ ಕುದ್ದ್ ತಪಸ್ವಿನಿನ ಸಂಗೀತ ಕೇಳ್ತಾ ಇದ್ದರೆ ಈ ಲೋಕವೇ ಮರ್‍ತ್ ಹೋದೆ. ಈ ತಪಸ್ವಿನಿ ಹುಟ್ಟುವಲ್ಲಿಂದ ಸಮುದ್ರ ಸೇರುವಲ್ಲಿವರೇಗೆ

ನೋಡಿ ಬಂದೊಳೆ. ಇಂತಾ ಜಾಗ ಬೇರೆಲ್ಲೂ ಇಲ್ಲೆ. ತುಂಬಾ ಸಣ್ಣಂವನಾಗಿರಿಕಾಕನೇ ಅವ್ವನ ಕಳ್ಕೊಂಡವ ನಾನ್. ನಂಗೊಬ್ಬಳ್ ಅವ್ವ ಬೇಕಿತ್ತ್. ಇಲ್ಲಿ ಮಾತ್ರ ತಪಸ್ವಿನಿ ನನ್ನೊಬ್ಬಳ ಅವ್ವ, ಕೆಳಗೆ ಹೋದರೆ ತುಂಬಾ ಜನಕ್ಕೆ ಅವ್ಳ್ ಅವ್ವಾಗಿ ಬುಟ್ಟದೆ. ನಂಗೀಗ ಇಬ್ಬರ್ ಅವ್ವಂದಿರ್. ಒಬ್ಳ್ ತಪಸ್ವಿನಿ; ಮತ್ತೊಬ್ಬಳ್ ನನ್ನ ಮುದ್ದಿನ ಅಮ್ಮಣ್ಣಿ"

ಅವರ ಈ ಮಾತ್‌ಕತೆಗಳನ್ನೆಲ್ಲಾ ಬಾಳಕ್ಕ ದೂರಂದ ಕೇಳ್ಸಿಕೊಳ್ತಿತ್. ಅವ್ಳಿಗೆ ಯಾಗೋಳು ಅವ್ವನ ಹಿಂದೆ ಮುಂದೆ ಸುತ್ತುದೇ ಕೆಲ್ಸ. ಅದೇ ಅವ್ಳಿಗೆ ಇಷ್ಟನೂ. ಪುಟ್ಟ ತಂಗೆ ಶಾರದೆ ಮರ್ಟರೆ ತೊಟ್ಲ್ ತೂಗುದು, ಅವ್ವ ಉಚ್ಚೆ ಬಟ್ಟೆಗಳ್ನ ಒಗ್ದ್ ಕೊಡುದು, ಮಾಯ್ಪಿನ ಸುಡಿ ತಂದ್ ಗುಡ್ಸುದು ಹೀಂಗೆ ಅವಳ ಹೊತ್ತು ಕಳ್ದ್ ಹೋತಿತ್.

ಅಂಗಳಲಿ ಎರ್ಡ್ ಗ್ಯಾಸ್‌ಲೈಟ್ ಹೊತ್ಸಿಟ್ಟಿದ್ದೋ. ಪಟೇಲ್ರ ಮತ್ತು ಊರ್‌ಗೌಡ್ರ ಸೂಚನೆ ಪ್ರಕಾರ ಎಲ್ಲವೂ ಅವರವರ ಕೆಲ್ಸ ಮಾಡ್ತಿದ್ದೊ. ಅಂಗಳ್‌ಲಿ ಬೆಂಚಿನ ಮೇಲೆ ಮಲ್ಗಿಸಿದ್ದ ಅಜ್ಜನ ಮೈ ಮೇಲಿನ ವಸ್ತ್ರ ಎಲ್ಲ ತೆಗ್ದ್ ಎಣ್ಣೆ ಮತ್ತು ಅರ್ಸಿನ ಹಚ್ಚಿದೊ. ಅಂಗಳದ ಮೂಲೆಲಿ ಮೂರ್ ಕಲ್ಲ್ ಇಸಿ ಅಂಡೆಲಿ ನೀರ್ ಕಾಯ್ಸಿ, ಅಜ್ಜನ ತೆಂಕ ಬಡ್ಗ ಮಲ್ಗಿಸಿ ಬಿಸಿ ನೀರ್ಲಿ ಮಿಯ್ಸಿದೊ. ಆ ಮೇಲೆ ಹೊಸ ಬೈರಾಸಿಲಿ ಅಜ್ಜನ ಮೈ ಉಜ್ಜಿ ಹೊಸ ಅಂಗಿ ಪಂಚೆ ಉಡ್ಸಿದೊ. ತಲೆಗೆ ಬರ್ಜರಿ ಮುಂಡಾಸ್ ಸುತ್ತಿದೊ.

"ನಿನ್ನ ಅಜ್ಜ ಈಗ ಮದುಮಂಜ ಆತ್" ಊರ ಗೌಡ್ರ ಮಾತಿಗೆ ಪಟೇಲ್ ಹೇಳ್ದೊ "ಹೌದು ಹೌದು ಚಟ್ಟಕ್ಕೇರುವ ಮದುಮಜ."

ಅಲ್ಲಿದ್ದವುಕೆಲ್ಲ ನಗೆ ಬಾತ್. ಅಜ್ಜ ತೀರಿ ಹೋದ್ರೂ ಸಹ ಇವು ನಗಾಡ್ವೆಲ್ಲಾ ಅಂತ ಅವರ ಮೇಲೆ ಅಮ್ಮಣ್ಣಿಗೆ ಕೋಪ ಬಾತ್.
ಪಟೇಲ್ರ್ ಹೇಳ್ದೊ:

"ಈ ದಾಸಪ್ಪ ಪುಣ್ಯವಂತ. ತಾನಾತ್ ತನ್ನ ಕೆಲ್ಸ ಆತ್. ಇಲ್ಲೊಂದು ಊರು ಬೆಳ್ದದ್ ಇಂವ ಇಲ್ಲಿ ಆಸ್ತಿ ಮಾಡ್ದ ಮೇಲೇನೆ. ನಂಗೆ ಗೊತ್ತಿರುವ ಹಾಂಗೆ ಒಂದೇ ಒಂದು ಪೆಟ್ಟ್ ಕುಟ್ಟು, ಗೌಜಿ ಗದ್ಲ ಮಾಡ್ದಂವಲ್ಲ. ಹೆಣ್ಣ್ ಸಾಯಕನ ಮೂವತ್ತೈದ್ ಇರ್ದು. ಆದ್ರೂ ಮರು ಮದುವೆ ಆತ್ಲೆ. ಈ ತಪಸ್ವಿನಿನ ಮೂಲಂದ ಸಮುದ್ರ ಸೇರುವಲ್ಲಿವರೇಗೆ ನೋಡಿ ಬಂದ ಈ ದಾಸಪ್ಪನ ಬುಟ್ಟರೆ ಬೇರೆ ಯಾರೂ ಇಲ್ಲೆ. ಇಂವ ಮಾಡಕಾದ ಕೆಲ್ಸ ಎಲ್ಲ ಮುಗ್ಸಿಟು. ಇವನ ಕಂಡಿತ ಆ

ನಾರಾಯಣ ದೇವ್ರು ವೈಕುಂಟಕ್ಕೆ ಕರ್ಸಿಕಂಡದೆ. ಇವನ ಸಾವು ಸಾವಲ್ಲ. ಒಂದು ಹಬ್ಬ."ಅಮ್ಮಣ್ಣಿಗೆ ಈಗ ಪಟೇಲ್ರ ಮೇಲಿನ ಕೋಪ ಮಾಯ ಆತ್. ಅವರ ಪಕ್ಕಲಿ ನಿತ್ತ್‌ಕಂಡೇ ಎಲ್ಲಾ ಕ್ರಿಯೆಗಳ ನೋಡ್ತ್.

ಮದುಮಂಜನ ಹಾಂಗೆ ಸಿಂಗರಿಸಿದ ಅಜ್ಜನ ತಂದ್ ಮನೆ ಹೊರ ಕೋಣೆಲಿ ಮಲ್ಗಿಸಿದೊ. ಊದುಬತ್ತಿ ಉರ್ಸಿದೊ. ಗಂದ ದೂಪನೂ ಇತ್ತ್. ದೀಪ ಉರಿತಿತ್ತ್. ಹಣೆಲಿ ಬೆಳ್ಳಿ ನಾಣ್ಯ ಇಸಿದ್ದೊ. ಆ ಮೇಲೆ ಕುಟುಂಬದೊವೆಲ್ಲಾ ಅಜ್ಜಂಗೆ ಮೂರು ಸುತ್ತು ಬಂದೊ. ಆ ಮೇಲೆ ಎದೆ ಮೇಲೆ ಐದ್ ವಿಳ್ಯದೆಲೆ ಇಸಿದೊ. ತಲೆ ಬಾಗಲಿ ಅಕ್ಕಿ ಮತ್ತು ಕಾಲಿನ ಕಡೆ ಬತ್ತ ಕಟ್ಟಿ ಇಸಿದೊ. ಬಾಯಿಗೆ ಎಲೆ ಅಡ್ಕೆ ಕೊಟ್ಟೊ. ಚೊಲ್ಲಿದ ಕಾಯಿನ ಮನೆ ಮೆಟ್ಲಿಗೆ ಹೊಡ್ದೊ. ಅದರ ಬಾಗಗಳ ನೋಡಿ ಊರ್‌ಗೌಡ್ರ್ "ದೇವ್ರಿಗೆ ಪ್ರೀತಿ ಆಗುಟು" ಅಂತ ಹೇಳ್ದೊ. ಮತ್ತೆ ಅಜ್ಜನ ಬಿದ್ರಿಂದ ಮಾಡ್ದ ಚಟ್ಟದ ಮೇಲೆ ಮಲ್ಗಿಸಿದೊ.

ಅಜ್ಜಂಗೆ ಸುರೂಗೆ ಹೊದಿಸಿದ್ದ ಬಿಳಿ ಬಟ್ಟೆಗಳ ತೆಗ್ದ್ ಅಡ್ಡಕ್ಕೆ ಹರ್ದ್ ಮಾಲೆ ಹಂಗೆ ಮಾಡಿ ಅಪ್ಪನ ಕುತ್ತಿಗೆಗೆ ಹಾಕಿದೊ ಅದೇ ಬಟ್ಟೆನ ಎರ್ಡ್ ತುಂಡುಗಳ್ನ ಅಜ್ಜನ ಕಾಲಿನ ಮತ್ತು ಕೈಯಿನ ಬೆರ್ಳ್‌ಗಳಿಗೆ ಕಟ್ಟಿದೊ. ಒಂದು ತುಂಡು ಬಿಳಿ ಬಟ್ಟೆನ ಅಪ್ಪ ಸೊಂಟಕ್ಕೆ ಸುತ್ತಿಕಂಡತ್. ಬೊಳ್ಳಿ ಕಟ್ಟಿದ ಹೊಸ ಮಡಿಕೆಲ್ಲಿದ್ದ ಕೆಂಡಕ್ಕೆ ಗಂದ ದೂಪ ಹಾಕಿ ಬಿದ್ರ್‌ಕೋಲ್‌ಲಿ ನೇತಾಡ್ಸಿಕಂಡ್ ಒಬ್ಬ ಮುಂದೆ ನಡ್ತ್. ಗ್ಯಾಸ್‌ಲೈಟ್ ಹಿಡ್ದೊವು ದಾರಿ ತೋರ್ಸ್ತಿದ್ದೊ. ಅಜ್ಜನ ಚಟ್ಟಕ್ಕೆ ನಾಲ್ಕ್ ಜನ ಹೆಗಲ್ ಕೊಟ್ಟ್ ಹೊತ್ತ್‌ಕಂಡ್ ಕಾಟದ ಕಡೆಗೆ ಹೆಜ್ಜೆ ಹಾಕಿದೊ. ಅಮ್ಮಣ್ಣಿ ಅವರ್ನ ಹಿಂಬಾಲಿಸಿತ್.

"ಕಾಟದ ಹತ್ರ ಹೆಣ್ಮಕ್ಕಳಿಗೇನ್ ಕೆಲ್ಸ? ಊರ್ ಗೌಡ್ರ್ ಕೇಳ್ದಕ್ಕೆ ತ್ಯಾಂಪಣ್ಣ ಬೇಡಿಕಂಡತ್ "ಅದ್ ಅಜ್ಜನ ಅಷ್ಟೊಂದು ಹಚ್ಚಿಕಂಡ ಕೂಸು. ಕಾಟಕ್ಕೆ ಅದ್ ಮೂರು ಸುತ್ತು ಬಂದರೇನೇ ದಾಸಪ್ಪಣ್ಣ ವೈಕುಂಠಕ್ಕೆ ಹೋದು. ಅದನ್ನ ತಡಿದು ಬೇಡ ಗೌಡ್ರೆ."

ಆಗ ಅವ್ಳಿಗೆ ಅಳ್ಗೆಲ್ ಒತ್ರಿಸಿ ಬಾತ್. ಹಿಂದೆ ಅವಳ ಕಣ್ಣ್‌ಲಿ ನೀರ್ ಕಾಂಬಕಾಕನ ಒರ್ಸಿಕೆ ಅಜ್ಜ ಇತ್ತ್. ಇನ್ನ್ ಯಾರೊಳೊ? ಅವ್ಳ್ ಲಂಗಂದ ಮೋರೆ ಒರ್ಸಿಕಣ್ತ್. ಅದನ್ನ್ ನೋಡಿ ತ್ಯಾಂಪಣ್ಣ ಕೈಯಿಂದ ಅವಳ್ನ ಬಾಚಿ ತಬ್ಬಿಕಣ್ತ್. "ಮರ್ಡ್ಬಡ ಅಮ್ಮಣ್ಣಿ. ನನ್ನ ಕೂಸಿನ ಕಣ್ಣ್‌ಲಿ ನೀರ್ ಬಾರದ ಹಾಂಗೆ ನೋಡಿಕ ತ್ಯಾಂಪಣ್ಣ ಅಂತ ದಾಸಪ್ಪಣ್ಣ ನನ್ನೊಟ್ಟಿಗೆ ಹೇಳ್ತ್ಯೊಳೊ. ನಾವ್ ಅತ್ತರೆ ಸತ್ತೊವುಕೆ

ವೈಕುಂಠಕ್ಕೆ ಹೋಕೆ ಆದುಲ್ಲೆ ಗಡ. ಅವು ಪ್ರೇತ ಆಗಿ ಬೂಮಿಲಿ ತಿರ್‌ಗಾಡ್‌ತ್ತಾ ಇದ್ದವೆ ಗಡ. ನಿನ್ನ ಅಜ್ಜ ಯಾರಿಗೂ ಅನ್ಯಾಯ ಮಾಡ್ದಂವಲ್ಲ. ಅವು ಪ್ರೇತಾಗಿ ಅಲೆಕಾಗದ್."

ಚಟ್ಟ ಹೊತ್ತೊವು ಕಾಟದ ಪಕ್ಕಲಿ ಚಟ್ಟನ ಇಳ್ಸಿದೊ. ಅಜ್ಜನ ಚಟ್ಟಂದ ಎತ್ತಿ ಕಾಟದ ಮೇಲೆ ಮಲ್ಗಿಸಿದೊ. "ದಾಸಪ್ಪಣ್ಣನ ಕಡೇದಾಗಿ ಎಲ್ಲವೂ ನೋಡಿಕಣಿ" ಅಂತ ಊರ್‌ಗೌಡ್ರ್ ಹೇಳ್ದೊ. ಕುಟುಂಬದೊವು ಮತ್ತು ಹತ್ತಿರದ ನೆಂಟ್ರ್ ನಾರಾಯಣ, ನಾರಾಯಣಂತ ಹೇಳಿಕಂಡ್ ಕಾಟಕ್ಕೆ ಮೂರು ಸುತ್ತು ಬಂದೊ. ಅಜ್ಜನ ಮೈಮೇಲಿದ್ದ ಬಟ್ಟೆಗಳ ಪೈಕಿ ಒಂದು ಬುಟ್ಟು ಬಾಕಿ ಎಲ್ಲಾ ತೆಗ್ದೊ. ಅಜ್ಜನ ಹೆಣದ ಮೇಲೆ ಸೌದೆ ತುಂಡುಗಳ್ನ ಒಟ್ಟಿದೊ. ಮತ್ತೆ ಅಪ್ಪ ಕಾಟಕ್ಕೆ ಕಿಚ್ಚಿ ಕೊಟ್ಟಿತ್. ಕಿಚ್ಚಿ ಹಿಡ್ದ್ ಕಾಟ ಉರ್ದು ಅಜ್ಜನ ಶರ್‍ರನ ಕಿಚ್ಚಿ ನುಂಗ್‌ತಿತ್ತ. ಕಿಚ್ಚಿ ಲಾಯ್ಕ್ ಹಿಡ್ಕಣ್ತ್.
ಇನ್ನ್ ಕೆಡಿಕಿಲೆಂತೇಳಿ ಕಾಟ ಕೊಡುವವರ್ಲಿ ಒಬ್ಬ ಎಡಕೈಯಿಂದ ಕೊಡ್ಲಿನ ಚಿದಂಗಾಗಿ ಕಾಟಕ್ಕೆ ಅಡ್ಡ ದಾಟುವ ಹಾಂಗೆ ಬೀಸಾಡ್‌ದೊ. ಆಮೇಲೆ ಎಲ್ಲವೂ ಅಲ್ಲಿಂದ ಹೊರ್ಟೋ.

"ದಾಸಪ್ಪಣಂದ್ ಸುಖ ಸಾವು. ಮದ್ಯಾಹ್ನ ಉಂಡಾದ ಮೇಲೆ ಹಂಞ ಹೊತ್ತಿ ಎದೆಬೇನೆ ಆದೆ. ತ್ಯಾಂಪಣ್ಣಂತೇಳಿ ಮಲಗಿ ಬುಟ್ಟೊ. ನಾನ್ ನೀರ್ ಕುಡ್ಸಿದೆ. ಹಾಂಗೆ ಎದೆನ ಉಜ್ಜಿಕೊಂಡವು ಹಂಞ ಹೊತ್ತಿ ತಣ್ಣಂಗಾದೊ. ದೊಡ್ಡ ಜೀವ ಆಗಲೇ ಹೋಗಿತ್ತ್. ಮತ್ತೆ ಸುಮಾರ್ ಹೊತ್ತು ಗಂಟ್ಲಿಂದ ಗೊರಗೊರ ಶಬ್ದ ಬರ್‌ತಿತ್ತ್. ಸಣ್ಣ ಜೀವ ಅಮ್ಮಣ್ಣಿ ಬರ್ಲಿಂತ ಕಾದಿರೊಕು. ಮಲ್ಗಿದಲ್ಲೇ ಆತ್ಲೆ. ಯಾರಿಗೂ ಉಪದ್ರ ಕೊಟ್ಟತ್ಲೆ. ಇಲ್ಲಿಂದ ಕಪಿಲೇಶ್ವರ ದೇವಸ್ತಾನಕ್ಕೆ ಹೋಗುವ ಹಾಂಗೆ ದಾಸಪಣ್ಣ ಹೋಗಿ ಬುಟ್ಟೋ."

ಅಮ್ಮಣ್ಣಿಗೆ ಅಲ್ಲಿಂದ ಹೊರ್ಡುವ ಮನಸಿತ್ಲೆ. ತ್ಯಾಂಪಣ್ಣ ಅವ್ಳ ಹತ್ರ ಬಂದ್ "ಮುಗ್ತ್ ಕೂಸು, ಅಜ್ಜನ ಈ ಲೋಕದ ಜೀವನ ಮುಕ್ತಾಯ ಆತ್. ಇನ್ನ್ ನಾವಿಲ್ಲಿ ನಿಲ್ಲಕಾಗದ್. ಸತ್ತವು ಹದಿನಾರ್ ದಿನ ಪ್ರೇತ ರೂಪದಲಿದ್ದವೆ. ಹದಿನಾರಂಕೊಲೆ ಕಾರ್ಯಕ್ರಮ ಮುಗ್ದ ಮೇಲೆ ಪ್ರೇತ ರೂಪಂದ ಬಿಡುಗಡೆ ಆಗಿ ಈ ಲೋಕಂದ ಪರಲೋಕಕ್ಕೆ ಹೋಗಿ ಕಾರ್‌ನೂರ್‍ನ ಸೇರಿಕಂಡವೆ. ದೀಪಾವಳಿಗೆ ಬಂದ್ ಕನ್ನಿಕಂಬದೆದ್‌ರ್ ಬಡಿಸಿಟ್ಟದರ ತಿಂದ್ ಮತ್ತೆ ಪರಲೋಕಕ್ಕೆ ಹೋದವೆ. ಇನ್ನ್ ಇಲ್ಲಿ ನಿಂತರೆ ಸೋಂಕು ಆದು."

ಅಮ್ಮಣ್ಣಿ ಯೋಚನೆ ಮಾಡ್ತ ತ್ಯಾಂಪಣ್ಣನ ಹಿಂದೆ ಹೋತ್. ಅಜ್ಜ ಪ್ರೇತಾಗಿ ಯಾರ್‍ನೂ ಪೀಡ್ಸಿಕಿಲೆ. ಬದ್ಕಿರಿಕಾಕನ ಯಾರ್‍ಗೂ ತೊಂದರೆ ಕೊಡದ ಅಜ್ಜನೇ ಪ್ರೇತಾದರೆ ಅವ್ವನ ದಿನಾ ಕಣ್ಣೀರ್ ಹಾಕುವಾಂಗೆ ಮಾಡ್ವ ಈ ಅಪ್ಪ ಏನಾಬಡ? ಅಜ್ಜ ಹೋಗಿ ಬುಟ್ಟೋ. ಅಪ್ಪ ಹೋಗ್ತಿದ್ದರೆ ನಂಗೆ ಏನೂ ಬೇಜಾರ್ ಆಗ್‌ತಿತ್ಲೆ.

ತ್ಯಾಂಪಣ್ಣನ ಬುಟ್ಟರೆ ಅಂದ್ ಹೊರಗಿನವು ಯಾರೂ ಮನೆಲಿ ಉಳ್ಕಂತ್ಲೆ. "ಅಜ್ಜ ಇಲ್ಲದ ಚಾವಡಿಲಿ ನೀನ್ ಒಬ್ಬೆ ಮಲ್ಗ್‌ಬಡ. ಬಾಲಕ್ಕ ಇಲ್ಲೆ ಮಲ್ಗಿದೆ. ಅವ್ಳ ಒಟ್ಟಿಗೆ ಮಲ್ಕ." ಅವ್ವ ಹೇಳ್ತ್.

"ಅಲ್ಲಿ ಮಲ್ಗಿರೆ ನಂಗೆ ನಿದ್ದೆ ಬಾಕಿಲ್ಲೆವ್ವ, ಶಾರದೆ ಆಗಾಗ ರಾತ್ರಿ ಎದ್ದದೆಂತ ನೀನೇ ಹೇಳ್ತಿದ್ದೆ. ಇಂದ್ ಹೇಂಗೂ ತ್ಯಾಂಪಣ್ಣ ಒಳೊ. ಅಜ್ಜ ನಂಗೆ ಏನೂ ಮಾಡಿಕಿಲ್ಲೆಂತ ನಂಗೆ ಗೊತ್ತುಟು. ಚಾವಡಿಲಿ ಅಜ್ಜ ಮಲ್ಗ್‌ತಿದ್ದಲ್ಲೆ ಮಲ್ಗಿನೆ."

ಅವ್ಳ ಪಕ್ಕಲೆ ಮಲ್ಗಿದ ತ್ಯಾಂಪಣ್ಣ ಹಂಞ ಹೊತ್ತ್ಲಿ ಗೊರ್ಕೆ ಹೊಡಿಯಕೆ ಸುರುಮಾಡ್ತ್. ದಿನ ಇಡೀ ಓಡಾಡಿ ಎಸ್ಟ್ ಸುಸ್ತಾಗಿತೋ? ತ್ಯಾಂಪಣ್ಣನ ಗೊರ್ಕೆ ಲೋಡು ಲಾರಿ ಚಡಾವು ಏರಿಕಾಗದೆ ಕಷ್ಟಂದ ಮೊರೆ ಇಡುವಾಂಗೆ ಕೇಳಿಸ್ತಿತ್ತ್. ಹಂಞ ಹೊತ್ತಾದ ಮೇಲೆ ತ್ಯಾಂಪಣ್ಣ ಏನೇನೋ ಬಡಬಡಿಸ್ತಿತ್ತ್. ಮತ್ತೆ ಸಣ್ಣದಾಗಿ ಅತ್ತತ್. ಏನ್ ಕನ್ಸ್ ಕಂಡತೋ? ಮತ್ತೆ ಅಡ್ಕೆ ಮರಕ್ಕೆ ಮೊದ್ದು ಬುಡುವ ಪಂಪ್‌ನ ಹಾಂಗೆ ಸದ್ದ್ ಹೊರ್ಡಿಸಿಕೆ ಸುರುಮಾಡ್ತ್.

ಅಮ್ಮಣ್ಣಿಗೆ ತುಂಬಾ ಹೊತ್ತು ನಿದ್ದೆನೇ ಬಾತ್ಲೆ. ಅಜ್ಜ ಇಲ್ಲದ ನಿಜಸ್ತಿತಿನ ಅರ್‍ಗಿಸಿಕಂಬಕೆ ಅವ್ಳಿಗೆ ಕಷ್ಟ ಆತ್. ಒಮ್ಮೆನೆ ತಾನ್ ದೊಡ್ಡವಳಾಗಿಬುಟ್ಟೆ ಎಂಬ ಬಾವನೆ ಬಾತ್.

ಅಜ್ಜ ತೀರಿಕಂಡ ಹತ್ತನೇ ದಿನ ಮನೆ ತುಂಬಾ ಊರೊವು, ನೆಂಟ್ರ್‌ಗ ತುಂಬಿದ್ದೊ. ಊರ್‌ಗೌಡ್ರ್, ಪಟೇಲ್ರ್, ಎಲ್ಲಾ ಬಂದಿದ್ದೊ. ತ್ಯಾಂಪಣ್ಣ ಬಂದವರ್‍ನ ಸುದಾರ್‍ಸಿಕೇಂತ ಪುರ್‍ಸೊತ್ತಿಲ್ಲದೆ ಓಡಾಡ್ತಿತ್ತ್. ಎಲೆ ಅಡಿಕೆ ತುಂಬಿಸಿಕಂಡ ಬಾಯಿಂದ ಬರುವ ಅವನ ಮಾತ್‌ಗಳ್ನ ಕೇಳ್ದುದೆಂದರೆ ಮಜಾ ಅನ್ನಿಸ್ತಿತ್ತ್. ತೀರಾ ಹತ್ರ ಇದ್ದರೆ ಮೋರೆಗೆ ಎಲಾಡಿಕೆ ರಸ ಅವನ ಮಾತ್ ಕೇಳುವವರ ಮೇಲೆ ರಟ್ಟ್‌ಸ್‌ತಿತ್ತ್. ಬಂದ ನೆಂಟ್ರ್ ಅಪ್ಪನ ಬದ್‌ಲ್ ಹೆಚ್ಚಾಗಿ ತ್ಯಾಂಪಣ್ಣನ ಮಾತಾಡ್‌ಸ್ತಿದ್ದೊ.

ಅಮ್ಮಣ್ಣಿಗೆ ಅಜ್ಜ ಹೇಳ್‌ತಿದ್ದ ಮಾತ್‌ಗ ನೆನಪ್ಪಾಗ್‌ತಿತ್ತ್. "ಇಂವ ಈ ತ್ಯಾಂಪಣ್ಣ ಉಟ್ಟಲ್ಲಾ ಕೂಸು, ನಮ್ಮ ನೆಂಟನೂ ಅಲ್ಲ, ಏನೂ ಅಲ್ಲ. ಸಂಕಟ ಬಂದರೆ

ವೆಂಕಟ್ರಮಣಂತೇಳುವೆಲ್ಲಾ ಹಾಂಗೆ ಇಂವ. ನಿನ್ನ ಅಪ್ಪ ಹೊಲ್ಸ್ ಬಾಯಿಂದ ಎಲ್ಲ ಸಂಬಂದಗಳ್ನ ಹಾಳ್‌ಮಾಡಿಕಣ್ತ್. ನಮ್ಮ ಕಷ್ಟಗಳ್ಗೆ ಒದಗಿ ಬರುವಂವ ಅಂತಿದ್ದರೆ ಈ ತ್ಯಾಂಪಣ್ಣ ಮಾತ್ರ. ಬಂದುಗ, ನೆಂಟ್ರ್‌ಗ ಅಂತೆಲ್ಲಾ ನಾವ್ ಆದರ ತೋರ್‍ಸುವೆಲ್ಲಾ ಅವರ್ಂದ್‌ಲೇ ನಾವ್ಗೆ ತೊಂದರೆ ಬಾದು ನೋಡು. ಅವೇ ನಮ್ಮ ನಿಜವಾದ ಶತೃಗ. ಆಪತ್ತಿಗೆ ಒದಗುವವನೇ ನೆಂಟ. ನಿನ್ನ ಅಪ್ಪಂದಾಗಿ ಚಿಕ್ಕಪ್ಪ ಈ ಮನೆಗೆ ಬಾದುದನ್ನೇ ಬುಟ್ಟತ್. ತಮ್ಮನೇ ಆದುಲ್ಲೆಂತಾದರೆ ಇನ್ನಾರ್ ಆದವೆ? ಮೂರು ಮಕ್ಕಳಾದ ಮೇಲೆ ಮತ್ತೊಂದು ಮೊದುವೆ ಆಕೆ ಹೊರ್‍ಟುಟು ನಿನ್ನ ಅಪ್ಪ. ತನ್ನ ಹೆಣ್ಣ್ ಮಕ್ಳನ ಪ್ರೀತ್ಸಿಕೆ ಆಗದಂವ ಬೇರೆ ಯಾರ್‍ನ ಪ್ರೀತಿಸುದು? ಅವಂಗೆ ಹೊಸ್ತೊಂದು ಹೆಣ್ಣ್ ಬೇಕೂಂತ ಆಗುಟು. ನಾನ್ ದೇವ್ರ್‍ಗೆ, ಬೂತಕ್ಕೆ, ರಣ, ಕೊಲೆಗೆ ಹೆದ್ರ್‍ತ್ಲೆ. ನಿನ್ನ ಅಪ್ಪನ ಹೊಲ್ಸ್ ಬಾಯಿಗೆ ಮಾತ್ರ ಹೆದ್ರೊಕಾದೆ. ನಿನ್ನ ಅಜ್ಜಿ ನೀರ್‍ಲಿ ಹರ್‍ದ್ ಹೋದ ಮೇಲೆ ನಂಗೆ ಹೆಣ್ಣ್ ಕೊಡಿಕೆ ಬಂದೋವಿದ್ದೊ. ನಂಗೇನೋ ಹೆಣ್ಣ್ ಸಿಕ್ಕಿದೆ. ಮಕ್ಕಳಿಗೆ ಅವ್ವ ಸಿಕ್ಕಿದೆನೋ? ಚಿನ್ನಪ್ಪಂಗೆ, ಶಿವಪ್ಪಂಗೆ ಚಿಕ್ಕವ್ವನ ಕಾಟ ಬೇಡಂತೇಳಿ ಸುಮ್ಮನಾದೆ. ಮುತ್ತಿನಂತಾ ಮೂರು ಮಕ್ಕ ಸೀತೆಂತಾ ಹೆಣ್ಣ್ ಇದ್ದರೂ ಇವಂಗೆ ಎಲ್ಲೋ ಹೊರಗಿನ ಚಾಳಿ ಉಟ್ಟು. ಇಂತೊವು ಬರ್ಕತ್ತ್ ಆಕೆ ಉಟ್ಟೋ?"

ತೀರ್ತದ ತ್ಯಾಂಪಣ್ಣ ಅಜ್ಜನ ಮಾತಿಗೆ ನಗಾಡಿಕಂಡ್ ಹೇಳ್ತಿತ್. "ನಮ್ಮ ದಾಸಪ್ಪಣ್ಣ ಮತ್ತೆ ಮದುವೆಯಾಗದಿದ್ದರೇನ್? ಎಷ್ಟ್ ಜನ ಹೆಂಗ್ಸರ್ ಇವನ ಮೆಚ್ಚಿಕಂಡತ್ಲೆ. ಇವನ ತಾಕತ್ತಿಗೆ ಒಂದೆರಡಲ್ಲ ನಾಲ್ಕ್ ಮೊದುವೆ ಆಕಾಗಿತ್ತ್. ಇವು ಗಂಡಾನೆ ಹಾಂಗೆ ಬದ್ಕಿದೊವು. ಹೋದದ್ದೇ ದಾರಿ. ಇಂದಿಗೂ ಇವರ ಹಾಂಗೆ ಸ್ವರ ಎತ್ತಿ ಹಾಡೊವು ಇಲ್ಲಿ ಯಾರೂ ಇಲ್ಲೆ. ಎತ್ತರದ ಮರಗಳ್ಲಿ ಹೆಜ್ಜೇನ್ ನೋಡ್ತ್ಯೋಳೊನೊ? ಪಂತಕ್ಕೆ ಕತ್ತಲ್‌ಲಿ ಮರಹತ್ತಿ ಹೆಜ್ಜೇನ್ ತಂದೊವು ಇವು. ಅದೂ ಬ್ರಹ್ಮರಾಕ್ಷಸ ಇದ್ದ ಮರ. ಯಾವ ಹೆಣ್ಣ್ ಇಂತಾ ದೈರ್ಯವಂತಂಗೆ ಮರಳಾಕಿಲ್ಲೆ ಹೇಳ್? ಆದ್ರೂ ದಾಸಪ್ಪಣ್ಣ ತಲೆ ಓಡ್ಸಿದೊ. ಅವು ಮರು ಮದ್ವೆ ಆಗ್ತಿದ್ದರೆ ಆಗಲೇ ಈ ಮನೆ ನರಕಾಗಿ ಹೋಗ್ತಿತ್ತ್. ಈಗ ನಿನ್ನ ಅಪ್ಪ ನರ್‍ಕ ಮಾಡಿ ಬುಡ್ತ್. ಇನ್ನೊಂದು ಮದ್ವೆ ಆದರೆ ಮತ್ತೆ ಏನಾದೆನೋ? ಇನ್ನ್ ಅವಂಗೆ ಈ ಕಪಿಲೇಶ್ವರನೇ ಬುದ್ದಿ ಕೊಡೊಕು."

ಜನಗ ಇನ್ನೂ ಬರ್‍ತಲೆ ಇದ್ದೊ. ತ್ಯಾಂಪಣ್ಣ ಅಜ್ಜ ಮಲ್ಲುಗವ ಜಾಗಲಿ ಹಂಞ ಬೂದಿ ತಂದ್ ಹರ್‍ಡಿತ್. ಒಂದು ಬೊಂಡ ಕೆತ್ತಿ ಒಟ್ಟೆ ಮಾಡಿ ಬಡಗ ದಿಕ್ಕಿಲಿ ಇಸಿತ್. ಅರ್‍ಸಿನದ ತುಂಡು ತಕಂಡ್ ನೂಲ್‌ಲಿ ಕಟ್ಟಿ ಬೊಂಡದೊಳಗೆ ಇಳ್ಸಿ

ತೂಗಾಡ್ಸಿತ್. ಒಂದು ಕುಂಬಳ ಕಾಯೀನ ಎರ್ಡ್ ಹೋಳು ಮಾಡಿ ಕುಂಕುಮ ಮತ್ತು ಅರ್ಸಿನ ಹಚ್ಚಿ ಚೊಂಬು ನೀರ್ನ ಹಕ್ಕಲೆ ಇಸಿತ್.

ಅಪ್ಪ ಬಡಗ ದಿಕ್ಕಿಗೆ ಮೋರೆ ಮಾಡಿ ಒಂಟಿ ಕಾಲ್‌ಲಿ ನಿಂತ್ ಕಂಡ್ "ಅಪ್ಪ, ನೀರ್ ನೆರ್ಳಿಗೆ ಇಸಿಯೊಳೊ ಬಂದ್ ಹೋಗಿ, ಅಪ್ಪಾ, ನೀರ್ ನೆರ್ಳಿಗೆ ಇಸಿಯೊಳೊ ಬಂದ್ ಹೋಗಿ, ಅಪ್ಪಾ, ನೀರ್ ನೆರ್ಳಿಗೆ ಇಸಿಯೊಳೊ ಬಂದ್ ಹೋಗಿ" ಅಂತ ಮೂರು ಸರ್ತಿ ಗಟ್ಟಿಯಾಗಿ ಕರ್ದ್ ಹೇಳ್ತ್. ಅದಾದ ಮೇಲೆ ಎಲ್ಲಾ ಸೇರಿ ಒಟ್ಟಿಗೆ ಕುದ್ದು ಸರಿ ಉಂಡೊ. ಅಮ್ಮಣ್ಣಿ ಊಟ ಬಡ್ಸುವವರೊಟ್ಟಿಗೆ ಸೇರಿಕಂಡ್ ಇಕ್ಕಿಕೆ ಸಹಾಯ ಮಾಡ್ತ್.

"ಇದ್ ಮಿಂಚಿಲೂಟದ ಕಾರ್ಯಕ್ರಮ. ಅಜ್ಜ ಕೊಲೆನ ರೂಪಲಿ ಇಲ್ಲೆ ಒಳೊ. ಅವ್ಕೆ ನಾವ್ ತಿನ್ನುವಂತದರ ತಿಂಬಕೆ ಆದುಲೆ. ಅದ್ಕೆ ಬೊಂಡ, ಕುಂಬಳಕಾಯೀನ ಇಸಿದ್. ಚೊಂಬು ನೀರ್ಲಿ ಕೈಕಾಲ್ ತೊಳ್ದ್ ಅಜ್ಜ ಬೊಂಡ ಕುಡ್ದವೆ. ನಾಳೆ ಬೊಳ್ಪಿಗೆ ಬೇಗ ಎದ್ದ್ ನೋಡು. ಬೊಂಡದ ನೀರ್ ಕಡಿಮೆ ಆಗಿದ್ದದೆ. ಅಜ್ಜನ ಹೆಜ್ಜೆ ಗುರ್ತು ಬೂದಿಲಿ ಮೂಡಿದ್ದದೆ. ಅಂದರೆ ತ್ಯಾಂಪಣ್ಣ, ಈ ಹತ್ತ್ ದಿನ ಅಜ್ಜ ಕೊಲೆಯಾಗಿ ಇದ್ದದ್ ಹೇಂಗೆ? ಅವ್ಕೆ ನಾವೇನೂ ಕೊಟ್ಟಿತಿಲ್ಲೆಲ್ಲಾ?"

"ಮತ್ತೆ ನೀನ್ ನೋಡ್ದ್ ಏನ್‌ನ? ಎರಡ್ನೇ ದಿನ ನಾವೆಲ್ಲ ಸೇರಿ ಕಾಟಕ್ಕೆ ಚೊಂಬಿಲಿ ಹಾಲ್, ಗಿಂಡಿ ತುಪ್ಪ ಸುರ್ದ್ ಬಾತಿಲ್ಲೆನೋ? ಮೂರರಂದ್ ಸುದ್ದ ಮಾಡಿ ದೂಪೆ ಕೂಡ್ಸಿತ್ಲೆನೋ? ಅಷ್ಟ್ ಸಾಕಾದೆ ಅಜ್ಜಂಗೆ. ಹಾಲ್ ತುಪ್ಪ ಕುಡ್ದ್ ದೂಪೆನ ಒಳಗಿದ್ದ ಅಜ್ಜ ಇಂದ್ ಹೊರ ಬಂದವೆ. ಬೊಂಡ ಕುಡ್ದ್ ನಮ್ಮ ಹರ್ಸ್‌ವೆ. ಕೊಲೆಗಳಿಗೆ ಶರ್‍ರ ಇಲ್ಲೆ. ಇರ್ದು ಆತ್ಮ ಮಾತ್ರ. ಅದಕ್ಕೆ ಅಷ್ಟ್ ಸಾಕಾದೆ. ನಾಳೆ ಅಜ್ಜಂಗೆ ಬರ್ಜರಿ ಊಟ ಕೊಡಿಕುಟ್ಟು."

ಅಂದ್ ರಾತ್ರಿ ಅಮ್ಮಣ್ಣಿ ಅವ್ವನ ಕೋಣೆಲಿ ಬಾಳಕ್ಕನೊಟ್ಟಿಗೆ ಮಲ್ಗಿತ್. ರಾತ್ರಿ ಶಾರ್ದೆ ಏಳ್‌ಕನ್ನೆಲ್ಲಾ ಅವ್ಳಿಗೂ ಎಚ್ಚರಾಗ್‌ತಿತ್ತ್. ಬೊಳ್ಪು ಆಕಾಕನ ಒಳ್ಳ ನಿದ್ದೆ ಬಾತ್. ತಡ ಆಗಿ ಎದ್ದವಳಿಗೆ ನಿನ್ನೆ ತ್ಯಾಂಪಣ್ಣ ಹೇಳ್ದ ಮಾತ್‌ಗ ನೆನ್ಪಾಗಿ ಹೋಗಿ ನೋಡ್ತ್. ಅಲ್ಲಿ ಬೊಂಡ, ಚೊಂಬು ನೀರ್, ಕುಂಬಳಕಾಯಿ ಯಾವುದು ಇತ್ಲೆ. ತ್ಯಾಂಪಣ್ಣ ಅವಳ ನೋಡಿ ನಗಾಡ್ತ್.

"ನಿನ್ನ ಅಜ್ಜಂಗೆ ತುಂಬಾ ಕುಡಿಯಕೆ ಆಗಿತ್ತ್‌ಂತ ಕಂಡದೆ. ಅರ್ದ ಬೊಂಡದ ನೀರ್ ಕಾಲಿ ಮಾಡಿದ್ದೊ. ನೀನ್ ತಡಮಾಡಿ ಎದ್ದ. ಇಲ್ಲದಿದ್ದರೆ ನಿಂಗೆ ನೋಡಕಾಗಿತ್ತ್. ಬೊಂಡದ ಬದ್‌ಲ್ ನಾನ್ ಮಾಡ್ದ ತೀರ್ತ ಇಸ್‌ತಿದ್ದರೆ ಅಜ್ಜ ಎಲ್ಲ ಕಾಲಿ ಮಾಡ್ತಿತ್ತ್."

ಬೊಳ್ಳಿಗೆ ರಾಗಿ ಮುದ್ದೆ ತಿಂಬೊವು ರಾಗಿಮುದ್ದೆ ತಿಂದೊ. ತಿಂಡಿ ತಿಂಬೊವು ತಿಂಡಿ ತಿಂದೊ. ಕ್ಷೌರ ಮಾಡ್ಸಿಕಣವು ಕ್ಷೌರ ಮಾಡ್ಸಿಕಂಡೊ. ಆಮೇಲೆ ದೂಪೆಗೆ ಹೋಕೆ ತಯಾರಿ ಮಾಡ್ದೊ. "ಎಲ್ಲಾ ತಯಾರಿ ಆತಲ್ಲ ಇನ್ನ್ ದೂಪೆಗೆ ಹೋದು" ಅಂತ ಊರ್‌ಗೌಡ್ರ್ ಹೇಳ್ದೊ. ಕೆಲವು ಜನ ಹತ್ರ ಹೋಗಿ ಅದರ ಸುತ್ತ ಒಂದು ಬೇಲಿ ಕಟ್ಟಿದೊ. ಅಜ್ಜನ ಓಡಾಟಕ್ಕೆ ತೊಂದರೆಯಾಗದಿರ್ಲಿಂತ ತೆಂಕ ಮತ್ತು ಬಡಗ ದಿಕ್ಕಿಲಿ ಕಾಲಿ ಜಾಗ ಬುಟ್ಟಿದ್ದೊ. ಬೇಲಿನ ಉದ್ದಕ್ಕೂ ಮಾಯಿನ ಎಲೆಂದ ಅಲಂಕಾರ ಮಾಡಿದ್ದೊ. ಕಾಲಿ ಜಾಗಲಿ ಬಾಳೆ ಕಟ್ಟಿದ್ದೊ. "ಈಗ ದಾಸಪ್ಪಣ್ಣನ ಕುಲೆಗೆ ನೆಮ್ಮದಿಯಾಗಿರ್ದುಂತ" ಪಟೇಲ್ರ್ ಹೇಳಿಕಾಕನ ಕೆಲವು ತಲೆ ಆಡ್ಸಿದೊ.

ಅಲ್ಲಿನ ಕೆಲ್ಸ ಮುಗ್ಸಿ ಕೈಕಾಲ್ ತೊಳ್ಕಂಡ್ ಮನೆಗೆ ಬಂದ ಮೇಲೆ ಜಗಲ್‌ಲಿ ಒಂದು ಮಣೆ ಇಸಿ ಅದರ ಮೇಲೆ ಬಿಳಿ ಬಟ್ಟೆ ಹಾಸಿ ಅಪ್ಪನ ಕುದ್ರಿಸಿದೊ. ಎದ್‌ರ್ಲಿ ಕಾಲ್ದೀಪ ಮತ್ತು ಅಕ್ಕಿ ಬಟ್ಲ್‌ನ ತಂದಿಸಿದೊ. ಊರ್‌ಗೌಡ್ರ್ ಕುಲದೇವರ್ನ ನೆನ್ದ್ ಕಾಲ್ದೀಪ ಹೊತ್ತಿಸಿದೊ. ಆ ಮೇಲೆ ಬಟ್ಲ್‌ಂದ ಅಕ್ಕಿ ತೆಗ್ದ್ ಅಪ್ಪನ ತೋಳಿಗೆ ತಾಗ್ಸಿ ತಲೆಗೆ ಸೇಸೆ ಹಾಕಿದೊ. ಸೇರ್ದ ಹಿರಿಯೊವೆಲ್ಲ ಹಾಂಗೆ ಮಾಡ್ದ ಮೇಲೆ ಅಪ್ಪನ ಎದ್ರಿಸಿ ಬಿದ್ದ ಅಕ್ಕಿನ ಎತ್ತಿದೊ. ಅದನ್ನೆ ಅನ್ನ ಮಾಡಿ ಬಿಳಿ ಬಟ್ಟೆಲಿ ಕಟ್ಟಿಕಂಡ್ ಅಲ್ಲಿ ಸೇರ್ದೋವೆಲ್ಲ ದೂಪೆ ಕಡೆಗೆ ಹೋದೊ. ಅಪ್ಪ ದೂಪೆಗೆ ಬಲಂದ ಎಡಕ್ಕೆ ಪಿದಂಬು ಸುತ್ತುಬಂದ್ ಬಿಳಿ ಬಟ್ಟೆಲಿ ಕಟ್ಟಿದ ಅನ್ನನ ತೆಂಕ ದಿಕ್ಕಿಲಿ ಇಸಿತ್. ನೆಂಟ್ರಿಸ್ಟರ್ ಅಜ್ಜಂಗೆ ಬೇರೆ ಬೇರೆ ತಿಂಡಿಗಳ್ನ ತಂದಿದ್ದೊ. ಅದನ್ನೆಲ್ಲ ಅನ್ನದ ಪಕ್ಕಲಿ ಇಸಿ ಕೈ ಮುಗ್ದೊ. ಆಮೇಲೆ ಎಲ್ಲವೂ ದೂಪೆಗೆ ಮೂರು ಸುತ್ತು ಬಂದೊ. ಆ ಮೇಲೆ ಪ್ರಾರ್ಥನೆ ಮಾಡಿಕಂಬ ಬಗ್ಗೆ ಊರ್‌ಗೌಡ್ರಿಗೆ ಪಟೇಲ್ರ್ ಸೂಚನೆ ಕೊಟ್ಟೋ.

"ದಾಸಪಣ್ಣಾ ನೀವು ನಿಮ್ಮ ಹಣೆಲಿ ದೇವ್ರ್ ಹೇಂಗೆ ಬರ್ದಿತ್ತೊ ಹಾಂಗೆ ಬದ್ಕಿದೊವು. ನೀವು ನಿಮ್ಮ ಮನೆಗೆ ಒಳ್ಳೆದನ್ನೆ ಮಾಡ್ದ ಕುಟುಂಬದವರ್ನ ಬಾರಿ ಲಾಯ್ಕಾಗಿ ನೋಡಿಕಂಡ. ಬೇಕಾದ ಹಾಂಗೆ ಬದ್ಕಿ ಮಕ್ಕಮರಿಗಳ್ಗೆ ಸಾಕಷ್ಟ್ ಉಳ್ಸಿದ. ಹತ್ತ್ ಜನ ಸೈಂತೇಳುವ ಹಾಂಗೆ ಬದ್ಕಿ ತೋರ್ಸಿದ. ಎಲ್ಲದಕ್ಕೂ ಒಂದು ಅಂತ್ಯ ಉಟ್ಟು. ಹುಟ್ಟಿಗೊಂದು ಸಾವು ಇದ್ದದ್ದೆ. ಇಂದಿಗೆ ನಿನ್ನ ಈ ಮಣ್ಣಿನ ರುಣ ಮುಗ್ದುಟು. ನಿನ್ನ ಹೆಸ್ರ್ ಹೇಳಿ ನಾವ್ ಇಷ್ಟ್ ಜನ ಇಲ್ಲಿ ಸೇರ್ರ್ಯೊಲೊ. ನಾವ್ ತಂದದರ ನೀವ್ಗೆ ಬಡ್ಸಿಯೊಳೋ. ನಮ್ಮ ಆಚಾರ ವಿಚಾರಗಳ್ಲಿ ತಪ್ಪಿದ್ದರೆ ನಮ್ಮನ್ನ್ ಕ್ಷಮಿಸಿ ನಾವು ಒಪ್ಪಿಸಿದರ್ನ ಸ್ವೀಕರಿಸಿ ಸ್ವರ್ಗಕ್ಕೆ ಹೋಕು."

ಆಗ ಅಲ್ಲಿ ಸೇರಿದವೆಲ್ಲ ಒಟ್ಟಿಗೆ ಮೂರು ಸರ್ತಿ "ಸ್ವರ್ಗಕ್ಕೇ ಹೋಗಿ"ಂತ ಹೇಳಿ ದೂಪೆಗೆ ಕೈ ಮುಗ್ದ್ ಮನೆಕಡೆ ತಿರ್‍ಗಿ ಬಂದೊ. ತಿರ್‍ಗಿ ಬಾಕಾಕನ ತ್ಯಾಂಪಣ್ಣ ಅಮ್ಮಣ್ಣಿಗೆ ಹೇಳ್ತ್ "ಇದ್ಕೆ ಕೂಳಿಗೆ ಇಸುದುಂತೇಳುವೆ. ಅಡ್ಗೆ ಮನೆಲಿ ಕನ್ನಿಕಂಬ ಉಟ್ಟಲ್ಲಾ? ಅಲ್ಲಿ ಕುಲೆಗೆ ಬಡ್ಸುವ ಶಾಸ್ತ್ರ ಮಾಡುವೆ. ಬಾಳ್ಗೆಗೆ ಕೋಳಿ ಸಾರ್ ಮತ್ತು ನೀರ್‌ದೋಸೆ ಬಡ್ಸಿಕುಟ್ಟು. ಕಡ್ಬು ಮತ್ತು ಬಾಳೆಕಾಯಿ ಗೈಪು ತಪ್ಪದೆ ಮಾಡಿರೊಕು. ಇಂದ್ ಅಜ್ಜಂಗೆ ಬರ್ಜರಿ ಊಟ."

ಕುಟುಂಬದೊವೆಲ್ಲ ಮಿಂದ್‌ಕಂಡ್ ಬಂದ್ ಅಂಗಳಲಿ ಮನೆಕಡೆ ಮೋರೆ ಮಾಡಿ ಸಾಲಾಗಿ ನಿಂತೋ. ನೆಂಟ್ರ್‌ಗ ಮತ್ತು ಊರೊವು ಮನೆಕಡೆ ಬೆನ್ನ್ ಹಾಕಿ ಸಾಲ್‌ಲಿ ನಿಂತೊ. ತ್ಯಾಂಪಣ್ಣ ಹೇಳ್ತ್ "ಈಗ ಸುದ್ದ ಕಾರ್ಯಕ್ರಮ ಮಾಡಿಕುಟ್ಟು" ಅಂತ. ಮಡಿವಾಳ ನೀರ್ ಮತ್ತೆ ಅಕ್ಕಿ ಹಾಕಿ ಸುದ್ದ ಮಾಡ್ತ್. ಊರ್‍ನವೊಬ್ಬ ಬಟ್ರಲ್ಲಿಂದ ತಂದ ಪುಣ್ಯ ನೀರ್‍ನ ಎಲ್ಲರ ಮೇಲೆ ಹಾಕಿತ್. ಗಂದದೂಪದ ಹೊಗೆ ಎಲ್ಲವುಕೆ ಹಿಡ್ದೊ. ದೂಪಕ್ಕೆ ಕೈ ಮುಗ್ದ್ ಗಂದದ ಬೊಟ್ಟು ಹಣೆಗೆ ಹಾಕಿಕೊಂಡೊ.

ಒಳಗೆ ಕಾರ್‍ನೂರಿಗೆ ಬಡ್ಸಿ ಊರ್‌ಗೌಡ್ರ್ ಪ್ರಾರ್ತಿಸಿದೊ. ಅದಾಗಿ ಎಲ್ಲವೂ ಹೊರ್ಕಡೆ ಬಂದೊ. "ಇನ್ನ್ ರಾಜಿ ಪಂಚಾತಿಕೆಯೊಂದು ನಡೆಕಟ್ಟು. ಆಮೇಲೆ ಊಟದ ಕಾರ್ಯಕ್ರಮ. ಎಲ್ಲಿ ಶಿವಪ್ಪ ಮತ್ತು ಚಿನ್ನಪ್ಪ? ಇಲ್ಲಿ ಬರ್‍ಲಿ"
ಊರ್‌ಗೌಡ್ರ್ ಹೇಳ್ದೊ.

"ಶಿವಪ್ಪ ಚಿಕ್ಕಪ್ಪ ಹಳ್ತೆಲ್ಲ ಮರ್ತ್ ಮನೆಗೆ ಬಂದಿತ್. ಚಿಕ್ಕವ್ವನು ಬಂದಿತ್ತ್. ಮದ್ವೆಯಾಗಿ ಹತ್ತು ವರ್ಷ ಕಳ್ದರೂ ಅವ್ಕೆ ಮಕ್ಕಳಾಗಿತ್ಲೆ. ಮನೆಗೆ ಬಂದ ಚಿಕ್ಕಪ್ಪ ಅಪ್ಪನ ಬುಟ್ಟು ಉಳ್ದವರನ್ನೆಲ್ಲಾ ಮಾತಾಡಿಸಿತ್. ಬೇಕಿದ್ದರೆ ತಮ್ಮನೇ ಮಾತಾಡ್ಲಿಂತ ಅಪ್ಪ ಗರ್ವಂದ ವರ್ತಿಸಿತಿತ್ತ್.

ಊರ್‌ಗೌಡ್ರ್ ಅಪ್ಪನೆದ್‌ರಿಗೆ ಚಿಕ್ಕಪ್ಪನ ನಿಲ್ಲಿಸಿ "ಊರ ಪಟೇಲ್ರ್ ಈಗ ರಾಜಿ ಪಂಚಾತಿಕೆ ಮಾಡೋಕು." ಅಂತ ಪಟೇಲ್ರ್‌ನ ಕೇಳಿಕೊಂಡೊ. ಪಟೇಲ್ರ್ ಎದ್ದ್ ಬಂದ್ ಎಲ್ಲವುಕೆ ಕೈ ಮುಗ್ದ್ ಹೇಳ್ದೊ.

"ದೇವರ ಸೃಷ್ಟಿಲಿ ಮನುಷ್ಯನಷ್ಟ್ ಒಳ್ಳ ಜನ್ಮ ಇನ್ನೊಂದಿಲ್ಲೆ. ಜೀವನಂತೇಳಿರೆ ನಾಲ್ಕ್ ದಿನಗಳ ಆಟ. ಅದರ್‍ಲಿ ಎರ್‌ಡ್ ಮಾತಾಡಿರೆ ಕಡ್ಮೆ ಆದೆ. ನಾಲ್ಕ್ ಮಾತಾಡಿರೆ ಹೆಚ್ಚಿಗೆ ಆದೆ. ಮನುಷ್ಯಂತೇಳಿದ ಮೇಲೆ ಮನಸ್ತಾಪ ಬಾದು ಹೋದು ಸಾಮಾನ್ಯ. ಅದರ್‍ನ ಹೆಚ್ಚ್ ದಿನ ಇಸಿಕಂಬುದರ್‍ಲಿ ಅರ್ತ ಇಲ್ಲೆ. ಅದರ್‍ಲೂ ಅಣ್ಣ ತಮ್ಮಂದಿರ್ ಮಾತ್ ಬುಟ್ಟರೆ ಮೇಲೆ ನೋಡಿ ಉಗುಳ್ದ ಹಾಂಗೆ ಆದೆ. ಆದದ್ದ್ ಆಗಿ ಹೋತು.

ಈಗ ಮನೆಯ ಹಿರಿಯೊವು ನಮ್ಮ ಬುಟ್ಟು ಹೋದೊ. ಅಣ್ಣ ತಮ್ಮಂದಿರೊಳಗೆ ಮನಸ್ತಾಪ ಇದ್ದರೆ ಅಪ್ಪಂಗೆ ಸ್ವರ್ಗ ಸಿಕ್ಕುದುಲೆ. ಹಾಂಗಾಗಿ ಆದದನ್ನ ಮರ್ತ್ ಈಗ ಅಣ್ಣ ತಮ್ಮಂದಿರ್ ಒಂದಾಕು. ಎಲ್ಲಿ ಒಂದು ಚೊಂಬು ನೀರ್ ತನ್ನಿ."

ಪಟೇಲ್ರ್, ತಂದ್ ಕೊಟ್ಟ ಚೊಂಬು ನೀರ್ನ ಅಪ್ಪ ಮತ್ತು ಚಿಕ್ಕಪ್ಪಂಗೆ ಅದನ್ನ್ ಮುಟ್ಟಿಕೆ ಹೇಳ್ದೊ. ಆ ಮೇಲೆ ಗಟ್ಟಿ ದನಿಲಿ ಹೇಳ್ದೊ "ಇದರ್ಲಿ ಇರ್ುದ್ ಗಂಗೆ. ಅವ್ಳ್ ಎಂದೂ ಸಾಯದ ಜೀವಂತ ತಾಯಿ. ಅವ್ಳ್ ಸಾಕ್ಷಿಯಾಗಿ ಸೇರಿದ ಸಬೆ ಎಲ್ಲರ ನಡುಲಿ ಅಣ್ಣ ಚಿನ್ನಪ್ಪ ಮತ್ತು ತಮ್ಮ ಶೀನಪ್ಪ ಇಲ್ಲಿವರೇಗೆ ಇದ್ದ ಮನಸ್ತಾಪ ಎಲ್ಲ ಮರ್ತ್ ಮುಂದೆಗೆ ಅಣ್ಣ ತಮ್ಮಂದಿರಾಗಿ ಬದ್ಕುವೆಂತ ಸಬೆ ಮುಂದೆ ಪ್ರಮಾಣ ಮಾಡುತ್ತೊಳೊ. ಅವು ಒಂದೇ ಅಪ್ಪಂಗೆ ಹುಟ್ಟಿದೊವು. ಒಂದೇ ಅವ್ವನ ಹೊಟ್ಟೆಂದ ಬಂದೊವು. ಬೂಮಿ, ಗಾಳಿ, ನೀರ್, ಅಗ್ನಿ, ಆಕಾಶಂತೇಳುವ ಪಂಚಬೂತಗಳಿಗೆ ಸಿಟ್ಟ್ ಬಾದುಲ್ಲೆ. ಪಂಚಬೂತಗಂಳ್ದಾದ ಮನ್ಸರ್ ಸಿಟ್ಟ್‌ಲೇ ಬದ್ಕಿಕಾಗದ್. ಇನ್ನುಮುಂದೆ ಇವು ಹಿಂದೆ ಮಾಡ್ದ ತಪ್ಪುನ ಮುಂದುವರಿಸುದ್ಲೆ. ಇನ್ನು ಮುಂದೆ ಇವು ಪರಸ್ಪರ ಒಂದಾಗಿ ಒಬ್ಬನ ಸುಖಲಿ ಇನ್ನೊಬ್ಬ ಪಾಲ್ಗೊಂಡವೆ. ಒಬ್ಬನ ದುಕ್ಕನ ಇನ್ನೊಬ್ಬ ಹಂಚಿಕಂಡವೆ. ಇದಕ್ಕೆ ಪಂಚಬೂತಗಳೇ ಸಾಕ್ಷಿ; ಗುರುಕಾರ್ನೂರರೇ ಸಾಕ್ಷಿ; ಈ ಸಬೆ ಸಮಸ್ತರ್ ಸಾಕ್ಷಿ."

ಮತ್ತೆ ಮೂರು ಜನ ಒಟ್ಟಾಗಿ ಹೋಗಿ ಚೊಂಬು ನೀರ್ನ ತುಳ್ಸಿ ಬುಡಕ್ಕೆ ಹೊಯ್ದೊ. ಅದಾಗಿ ಚಿಕ್ಕಪ್ಪ ಅಪ್ಪನ ಕಾಲ್ ಹಿಡ್ತ್. ಇಬ್ಬರೂ ಒಟ್ಟಾಗಿ ಊರ್‌ಗೌಡ್ರ್ ಮತ್ತು ಪಟೇಲ್ರ ಕಾಲ್ ಹಿಡ್ದೊ. ಚಿಕ್ಕಪ್ಪ ಅಮ್ಮಣ್ಣಿನ ನಗ್‌ನಗ್ತಾ ಮಾತಾಡಿಸ್ತ್.

"ನಮ್ಮ ಮನೆಗೆ ನಿನ್ನ ಕರ್ಕಂಡ್ ಹೋನೆ. ನೀನ್ ಲಾಯ್ಕ್ ಈಸಿಕೆ ಕಲ್ತೊಳ ಗಡ. ಅತ್ತಿಗೆ ಹೇಳ್ದೊ. ಅಲ್ಲಿ ತಪಸ್ವಿನಿ ತುಂಬಾ ಅಗಲಲಿ ಹರ್ದದೆ. ನೀನ್ ಎಷ್ಟ್ ಬೇಕಾದ್ರೂ ಈಸಕ್."

ಮನೆಲಿ ಸಂತೋಷ ಇತ್ತ್. ಅಪ್ಪ ಚಿಕ್ಕಪ್ಪ ರಾಜಿ ಆದದ್ದ್ ಅವ್ವಿಗೆ ತುಂಬಾ ಕುಸಿ ತಂದಿತ್ತ್. ಬೊಜ್ಜದ ಊಟ ಮಾಡಿಕಾಕನ ಅವ್ಳ್ ತುಂಬಾ ಕುಸಿಂದ ಊಟ ಮಾಡ್ತ್. ಅಜ್ಜ ನಿಜಕ್ಕೂ ಪುಣ್ಯಾತ್ಮ. ಸತ್ತ ಮೇಲೂ ಮನೆಗೆ ಒಳ್ಳೆದರ್ನೆ ಮಾಡ್ತ್. ಇನ್ನ್ ಚಿಕ್ಕಪ್ಪ ಚಿಕ್ಕವ್ವ ಮನೆಗೆ ಬಂದವೆ. ನಾನ್ ಬಾಳಕ್ಕನೊಟ್ಟಿಗೆ ಅವರ ಮನೆಗೆ ಹೋಕ್. ಅವ್ಳ ಕುಸಿ ನೋಡಿ ತ್ಯಾಂಪಣ್ಣ ಹೇಳ್ತ್.

"ಇಷ್ಟ್ ಜನರ ನೋಡಿ ಅಷ್ಟೊಂದು ಕುಸಿ ಪಡ್ತೊಳ ಕೂಸು. ಹದ್ನಾರರ ದಿನನೂ ಜನ ಬಂದವೆ. ಆಗಳೂ ನಿಂಗೆ ಕುಸಿ ಆದೆ."

ಇನ್ನೂ ಜನ ಬಂದವೆಂತೇಳ್‌ಕನ ಅವ್ಳಿಗೆ ಮತ್ತೊಂದು ಯೋಚನೆ ಬಾತ್. ಬೊಜ್ಜಕ್ಕೆಂತ ಬಂದೊವು ತಪಸ್ವಿನಿನ ಎಡ ಬಲಂತ ನೋಡದೆ ಅಲ್ಲಲ್ಲಿ ಉಚ್ಚೆ ಹ್ಯೊದ್, ಹೇತ್ ಹಾಕಿ ಹಳ್ಳ ದಾಟಿಕಾಕನ ಮೂಕು ಮುಚ್ಚಿಕಂಡ್ ದಾಟುವಾಂಗೆ ಮಾಡಿದ್ದೊ. ಅವ್ಳ ಪ್ರೀತಿನ ಪಾರೆಕಲ್ಲ್ ಮೇಲೂ ಪ್ರಸಾದ ಹಾಕಿದ್ದೊ. ಒಂದು ದೊಡ್ಡ ಮಳೆ ಬರುವಲ್ಲಿವರೇಗೆ ಉಳಿಕೆ ಇದ್ದೇ ಇದ್ದದೆ. ಇನ್ನೂ ಜನ ಬರುವಾಂಗಿದ್ದರೆ ಮತ್ತೂ ಕಷ್ಟನೆ.

ಹದ್ನಾರರಂದ್ ಅವ್ಳ್ ಮತ್ತು ಬಾಳಕ್ಕ ಶಾಲೆಗೆ ಹೋತ್ಲೆ. ಸಾಕಷ್ಟ್ ಜನ ಅಂದು ಕೂಡಾ ಬಂದಿದ್ದೊ. ಊರ್‌ಗೌಡ್ರ್, ಪಟೇಲ್ರ್ ಎಲ್ಲ ಬಂದಿದ್ದೊ. ಊಟದ ತಯಾರಿ ಆಗಿತ್ತ್. ಅಂದ್ ರಾತ್ರಿ ಅಡ್ಗೆ ಮನೆನ ಕನ್ನಿಕಂಬದ  ಎದ್‌ರ್ ಹದ್ನಾರ್ ಎಲೆ ಹಾಕಿ ಕೋಳಿಗೈಪು, ಹಂದಿಗೈಪು, ನೀರ್‌ದೋಸೆ, ಅಪ್ಪದಿಟ್ಟ್ ಎಲ್ಲ ಬಡ್ಸಿದೊ. ಹದಿನಾರ್ ಎಲೆಗಳ ಎದ್‌ರಿಗೆ ಒಂದೆ ಬೇರೆ ಎಲೆ ಇಸಿ ಅಜ್ಜಂಗೆ ಪ್ರತ್ಯೇಕ ಬಡ್ಸಿ ಸೇವನೆ ಮಾಡುವ ಹಾಂಗೆ ಬಿನ್ನವಿಸಿಕಂಡೊ. "ಕಟ್ಟು ಕಟ್ಟಲೆಯ  ಪ್ರಕಾರ ಅಡುಗೆ ಮಾಡಿ ಬಳ್ಸಿಯೊಳೊ. ಮಾಡಿದ ಅಡುಗೆಯಲಾಗಲಿ, ಬಳ್ಸಿದ ಊಟಲಾಗಲಿ ತಪ್ಪು ಇದ್ದರೆ ಒಪ್ಪು ಸಾಲಿಸಿಕಂಡ್ ಮಾಪು ಮಾಡೊಕು. ನಮ್ಮ ದಾಸಪ್ಪಣಂಗೆ ಹದ್ನಾರರ ಕಾರ್ಯಕ್ರಮನ ನಾವ್‌ಗೆ ತಿಳ್ದಹಾಂಗೆ ಮಾಡಿಯೊಳೊ. ಅವರ್ನ ನಿಮ್ಮ ಸಾಲಿಗೆ ಸೇರ್ಸಿಕಂಡ್ ಕುಟುಂಬಕ್ಕೆ ಒಳ್ಳೆದ್ ಮಾಡೊಕುಂತ ನಾವೆಲ್ಲ ಸೇರಿ ಬಿನ್ನವಿಸಿಕಂಡವೆ" ಅಂತ ಹೇಳಿ ಒಂದು ನಿಮ್ಮ್‌ಸ ಕನ್ನಿಕಂಬಕ್ಕೆ ಬೆನ್ನ್ ಹಾಕಿ ನಿಂತೊ. ಎಲ್ಲವು ಪುನ ತಿರ್ಗಿ ನಿತ್ತ ಮೇಲೆ ಅಲ್ಲಿದ್ದ ಹದ್ನಾರ್ ಎಲೆಗಳ್ಲಿ ಒಂದರ ಹೊರ ತೆಗ್ದ್ ಅಜ್ಜಂಗೆ ಬಳ್ಸಿದ ಎಲೆನ ಅಲ್ಲಿ ಇಸಿದೊ. ಹೊರ ತೆಗ್ದ ಎಲೆನ ಬಾಳೆನ ಬುಡಲಿಸಿ ಬಂದೊ.

ಆಮೇಲೆ ಗಡದ್ ಊಟ ಆತ್. ಚಿಕ್ಕಪ್ಪನ ಲೆಕ್ಕಲಿ ಲಾಡ್ ಮತ್ತು ಹೋಳಿಗೆ ಇತ್ತ್. ಊಟಾದ ಮೇಲೆ ತೇಗಿಕಂಡ್ ತ್ಯಾಂಪಣ್ಣ ಹೇಳ್ತ್. "ಅಬ್ಬಾ, ಈಗ ನಂಗೆ ತೃಪ್ತಿ ಆತ್. ಇಷ್ಟ್ ದಿನ ದಾಸಪ್ಪಣ್ಣ ಕೊಲೆನ ರೂಪಲಿತ್ತ್. ಈಗ ಕಾರ್ನೂರರ ಸಾಲಿಗೆ ಸೇರ್ದೊ. ಇನ್ನ್ ವರ್ಷಕ್ಕೊಮ್ಮೆ ದೀಪಾವಳಿಗೆ ವೈಕುಂಟಂದ ಇಳ್ದ್ ಬಂದವೆ. ನಮ್ಮನ್ನೆಲ್ಲಾ ನೋಡಿಕಂಡ್ ಕನ್ನಿಕಂಬದೆದ್‌ರ್ ಬಳ್ಸಿದರ ಸೇವಿಸಿ ಮತ್ತೆ ನೆಮ್ಮದಿಂದ ತಿರ್ಗ ಹೋದವೆ."

"ತ್ಯಾಂಪಣ್ಣಾ, ಅಜ್ಜ ಕಾರ್ನೂರಾಗಿ ವೈಕುಂಠಕ್ಕೆ ಹೋಗೊಳಂತ ನಾವ್‌ಗೆ ಗೊತ್ತಾದು ಹೇಂಗೆ?" ಅಮ್ಮಣ್ಣಿ ಕೇಳ್ತ್.

ಅವ್ಳ ಪ್ರಶ್ನೆಗೆ ಉತ್ತರ ಹೇಳಿಕೆ ತ್ಯಾಂಪಣ್ಣ ಬಾಯಿ ತೆಗೆಕಾಕನ "ಅಯ್ಯಯ್ಯೋ,

ಕುಸುಮಂಗೆ ಕೊಲೆ ಹಿಡ್ದುಟ್ಟು" ಅಂತ ಹೇಳ್ದ್ ಕೇಳ್‌ಸ್ತ್. ಒಳಗಿದ್ದ ಅವ್ವ ಯಾಗ ಅಂಗಳಕ್ಕೆ ಬಂದಿತ್ತೊ? ಅವ್ಳ ಜುಟ್ಟು ಬಿಚ್ಚಿ ಹೋಗಿ ಕೂದಲ್ ಚಲ್ಲಾಪಿಲ್ಲಿಯಾಗಿತ್ತ್. ಕಣ್ಣಾಲಿಗ ಗರ್‌ಂತ ತಿರ್ಗ್‌ತಿತ್ತ್. ಅವಳ್ನ ಐದಾರ್ ಹೆಂಗ್ಸರ್ ಎರ್ಡೂ ಕಡೆಂದ ಹಿಡ್ಕಂಡಿದ್ದೊ. ಅವ್ಳ್ ಬುಸುಗುಟ್ಟಿಕಂಡ್ ತಪ್ಪಿಸಿಕಂಕೆ ಯತ್ನಿಸ್‌ತಿತ್ತ್. ಊರ್‌ಗೌಡ್ರ್ ಚೊಂಬು ನೀರಿಗೆ ತುಳ್ಸಿ ಎಲೆ ಹಾಕಿ, ಅಂಗೈಗೆ ನೀರ್ ಬುಟ್ಟು ಅವಳ ಮೋರೆಗೆ ಪಚಕ್ಕನೆ ಎರ್ಚಿದೊ. ಪಟೇಲ್ರ್ ಜಬರ್‌ದಸ್ತಿಂದ ಕೇಳ್ದೊ.

"ಯಾರ್ ನೀನ್?"

"ನಾನ್ ಈ ಕಜೆ ಮನೆಯ ದಾಸಪ್ಪ."

"ನೀನ್ ಬಂದದ್ ಯಾಕೆ?"

"ಇದ್ ನನ್ನ ಮನೆ ಅದಕ್ಕೆ ಬಂದೆ."

"ನಿಂಗೆ ಕ್ರಮಪ್ರಕಾರ ಸುಡುಕ್ಕಳಿ ಮಾಡಿ ಕಾಟಕ್ಕೆ ಇಸಿಯೊಳೊ. ಎರಡನೇ ದಿನ ಕೊಳ್ಳಿ ಕೂಡುವ ಶಾಸ್ತ್ರ ಮಾಡಿಯೊಳೊ. ಮೂರರಂದ್ ಪದ್ಧತಿ ಪ್ರಕಾರ ಸುದ್ದ ಕಾರ್ಯಕ್ರಮ ನಡ್ಸಿಯೊಳೊ. ಹತ್ತರ ಮೊಂಚ್ಲ್ ಊಟದಂದ್ ಬೊಂಡದ ನೀರ್ ಕೊಟ್ಟ್ ನೀರ್‌ನೆರಳಿಗೆ ಇಸಿಯೊಳೊ. ಹನ್ನೊಂದರಂದು ದೂಪೆಗೆ ಕೋಟೆ ಕಟ್ಟಿ ಬೊಜ್ಜ ನಡ್ಸಿಯೊಳೊ. ಇನ್ನೂ ನಿಂಗೆ ತೃಪ್ತಿ ಆತ್ಲೆಂತೇಳಿರೆ ಏನರ್ಥ? ಇನ್ನೂ ನಿಂಗೆ ಆಕಾದ್ ಏನ್ ಹೇಳ್?"

"ಅಂವ ಬರ್‍ಲಿ. ಅಂವ ಚೆನ್ನಪ್ಪ ಬರ್‍ಲಿ."

ಅಪ್ಪ ಹೋಗಿ ಅವ್ವನೆದ್‌ರ್ ಕೈಕಟ್ಟಿ ನಿಂತ್‌ಕಂಡತ್. ಅವ್ವ ಅವನ ಕಣ್ಣ್ ಕೆಕ್ಕರಿಸಿ ನೋಡ್ತ್.

"ಏ ಚೆನ್ನಪ್ಪಾ, ಹಡ್ಬೆ ಬಿಗನಾಸಿ, ಅವ್ಳ್ ಯಾರ್ ನಿನ್ನ ತಲೆ ತಿರ್ಗಿಸಿದವಳ್? ಮಾನಗೆಟ್ಟ ಮೂರು ಕಾಸಿನವಳ್ನ ಮದ್ವೆಯಾನೆಂತ ನಿನ್ನ ಹುಟ್ಸಿದ ಈ ಅಪ್ಪನೆದ್‌ರೇ ಬೊಗ್ಳ್‌ತ್ತೊಳಲ್ಲಾ? ಎಷ್ಟ್ ದೈರ್ಯನೊ ನಿಂಗೆ? ಹೇಳ್ ಬೇವಾರ್ಸಿ. ಆದಿಯನ ಇನ್ನೊಂದು ಮೊದುವೆ? ಆಗ್. ಈಗಲೇ ಆಗಿ ಕರ್ಕಂಡ್ ಬಾ ಅವ್ಳ. ಹೋಗು ಅವ್ಳ್ ಬರ್‍ಲಿ. ಅವ್ಳ ರಕ್ತ ಕುಡ್ದುಬುಟ್ಟನೆ. ಅವ್ಳಿಗೆ ಹದ್ನಾರರ ಕುಲೆ ಮಾಡಿಯೇ ನಾನ್ ಮೈಕುಂಠಕ್ಕೆ ಹೋದು."

ಎಲ್ಲವೂ ಅವ್ವನ ಸುತ್ತುಗಟ್ಟಿ ಮಾತ್‌ಗಳ್ನ ಕೇಳ್ಸಿಕಣ್‌ತಿದ್ದೊ. ಅವ್ವನ ಅವತಾರ ನೋಡಿ ಅಮ್ಮಣ್ಣಿಗೆ ಕೈಕಾಲ್‌ಗ ನಡ್ಗಿಕೆ ಸುರು ಆತ್.

"ಇದ್ ಏನ್ ಚಿನ್ನಪ್ಪಾ, ನಿನ್ನ ಅಪ್ಪ ಹೇಳ್ತಿರುದು? ಮುತ್ತಿನಂತ ಮೂರ್ ಹೆಣ್ಣ್ ಮಕ್ಕಳಿರಿಕಾಕನ ಇನ್ನೊಂದು ಮದ್ವೆ ಆವ ಕೇಡ್‌ಗಾಲ ಯಾಕೆ ಬಾತ್ ನಿಂಗೆ?" ಊರ್‌ಗೌಡ್ರ ಪ್ರಶ್ನೆಗೆ ಅಪ್ಪ ಏನೂ ಕುಗ್ಗಿ ಹೋತ್ಲೆ.

"ಯಾರೂ ಮಾಡದರ ನಾನೇನೂ ಮಾಡಿಕೆ ಹೊರಟಿತ್ಲೆ ಗೌಡ್ರೆ. ಈ ಊರ್ಲಿ ಎಷ್ಟ್ ಜನ ಎರ್ಡ್ ಮದುವೆ ಆತ್ಲೆ. ಎಷ್ಟ್ ಜನ ಇನ್ನೊಬ್ಬ ಇಸಿಕಂಡತ್ಲೆ? ನನ್ನನ್ ಕೇಳುವುಕೆ ಎಷ್ಟ್ ಆಗುಟು? ಮೂರು ಹಣ್ಣ್‌ಮಕ್ಕಳ ಅಪ್ಪಂಗೆ ಒಂದು ಗಂಡ್ ಮಂಜ ಬೇಕುಂತಾದರೆ ತಪ್ಪೇನ್?"

ಊರುಗೌಡ್ರ ಬಾಯಿ ಕಟ್ಟಿತ್. ಪಟೇಲ್ರ್ ಸದ್ದ್ ಹೊರ್ಡಿಸ್ತ್‌ಲೆ. ಅವಿಬ್ಬರು ಎರ್ಡೆರ್ಡ್ ಮದುವೆಯಾದೊವುಂತ ತ್ಯಾಂಪಣ್ಣ ಅಮ್ಮಣ್ಣಿನ ಕೆಬಿಲಿ ಹೇಳ್ತ್. ಯಾರ್ ಕೂಡ ಮಾತಾಡ್ತಿಲೆ. ಅವ್ವನ ಆರ್ಬಟೆ ಮುಂದುವರ್ತ್.

"ಹಿರಿಯವುಕೆ ಎದುರ್‌ತ್ತರ ಕೊಟ್ಟಿಯನೋ ಸಿಕಂಡಿ? ನೀನ್ ಸಾವಿರ ಮದ್ವೆ ಆದ್ರೂ ನಿಂಗೆ ಹೆಣ್ಣೇ ಹುಟ್ಟುದು. ಅದಕ್ಕೂ ಮುಂದೆ ನೀನ್ ಎಲ್ಲಿ ಉಳ್ಕೊಂಡಿಯ ನೋಡ್ನೆ. ಸುರುಗೆ ಆ ನಿನ್ನ ಸೂಳೆನ ಕುತ್ತಿಗೆ ಮುರ್ದ್ ರಕ್ತ ಕುಡ್ದನೆ. ಮತ್ತೆ ನಿನ್ನ ಎದೆಗೆ ಗುಂಡುಕಲ್ಲ್ ಎತ್ತಿಹಾಕಿ ರಕ್ತ ಕಕ್ಕಿಸಿನೆ. ನಿಮ್ಮಿಬ್ಬರ ಹದ್ನಾರರ ಕೊಲೆ ನೋಡದೆ ನಾನ್ ಇಲ್ಲಿಂದ ಹೋದುಲೆ."

ಅವ್ವ ಮತ್ತೆ ಬುಸುಗುಡುತ್ತಾ ಅತ್ತಿತ್ತ ವಾಲಾಡಿಕೆ ಸುರುಮಾಡ್ತ್. ಅಷ್ಟ್ ಜನ ಹೆಂಗ್ಸ್‌ಗಿದ್ದರೂ ಅವಳ್ನ ಹಿಡ್ದ್ ನಿಲ್ಲಿಸಿಕಾಗ್‌ತಿತ್ಲೆ. ಅಲ್ಲಿ ಸೇರ್‌ದವುಕೆ ಏನ್ ಮಾಡ್ದೂಂತ ಗೊತ್ತಾತ್ಲೆ. ಅಪ್ಪ ಸೋಲೊಪ್ಪಿಕೂ ತಯಾರಿತ್ಲೆ.

ಅವ್ವನ ಅವತಾರ ಜೋರು ಜೋರಾಗುತ್ತಾ ಹೋದ್ದರ ನೋಡಿ ತ್ಯಾಂಪಣ್ಣ ಮುಂದೆ ಹೋಗಿ ಅಪ್ಪನೆದ್‌ರ್ ನಿತ್ತತ್.

"ದಾಸಪ್ಪಣ್ಣ ಕುಲೆನ ರೂಪಲೇ ಇರೋಕುಂತ ನಿನ್ನ ಆಶೆನೊ ಚೆನ್ನಪ್ಪಾ
ಅವು ಸ್ವರ್ಗಕ್ಕೆ ಹೋಗದೆ ಇಲ್ಲೇ ಇದ್ದರೆ ಏನಾದೂಂತ ಯೋಚಿಸ್. ಒಂದು ದಿ
ನಾವ್‌ಗೆ ತಡ್ಕಂಕಾದುಲ್ಲೆ. ದಿನಾ ಇದ್ ಮುಂದುವರ್ದರೆ ಮನೆ ನರಕಾದುಲ್ಲೆನಾ
ನಾನ್ ಒಂದೇ ಒಂದು ಮದ್ವೆ ಆಗದೆ ಇಷ್ಟ್ ವರ್ಷ ಬದ್ಕಿಲ್ಲೆನೋ? ಎರಡ್ನೆ ಮ
ಆಗದಿದ್ದರೆ ನೀನೇನ್ ಸತ್ತ್ ಹೋದುಲೆ. ಎಲ್ಲಾ ಕ್ರಮಗ ಸರಿಯಾಗಿ ನಡ್ದ್ ನೆಂಟ್ರೆಪ್ಪೆಲ್ಲ
ಕುಸಿಂದ ಇರಿಕಾಕನ ಎಲ್ಲರ ಸಂತೋಷನ ಹಾಳ್ ಮಾಡಿಕಾಗದ್. ಈಗ ಈ
ಮನೆ ಸ್ವರ್ಗದಂತಾಗುಟ್ಟು. ನೀನ್ ಇನ್ನೊಂದು ಮದ್ವೆ ಆದರೆ ಎಲ್ಲರ ಬಾಳ್ ನರ
ಆದೆ. ನಿಂಗೆ ನಿನ್ನ ಹಟನೇ ಮುಖ್ಯಂತಾದರೆ ಹೇಳಿಬುಡು. ನಾವೆಲ್ಲ ಈಗಳೆ
ಹೋಗಿಬುಟ್ಟವೆ. ಮತ್ತೆ ಎಂದಿಗೂ ಇಲ್ಲಿಗೆ ಕಾಲಿಸುದಿಲ್ಲೆ."

ಅಪ್ಪ ತಲೆ ತಗ್ಗಿಸಿ ಗಟ್ಟಿಯಾಗಿ ಹೇಳ್ತ್ "ಆತ್ ನಾನ್ ಇನ್ನೊಂದು ಮದ್ವೆ
ಆದುಲೆ. ಸೇರ್ದ ಎಲ್ಲಾ ನೆಂಟರಿಪ್ಪರೆದ್‌ರ್ ಈ ಮಾತ್‌ನ ಹೇಳ್ತೊಳೆ. ಆತಲ್ಲಾ?
ಈಗ ನಿಂಗೆ ತೃಪ್ತಿಯಾತಲ್ಲಾ? ಇನ್ನ್ ನೀನ್ ಇಲ್ಲಿರಿಕಾಗದ್ ನೇರ ವೈಕುಂಠಕ್ಕೆ
ಹೋಗಿಬುಡೋಕು."

ಅವ್ವ ಒಮ್ಮೆಲೆ ಆರ್ಬಟೆ ಕೊಟ್ಟ್ ಮೇಲೆ ಎದ್ದತ್. ಆಮೇಲೆ ಉಸ್ಸ್ ಉಸ್‌ಂತ
ಸ್ವರ ಹೊರ್ಡ್ಸಿ ಕುಸಿದ್‌ಬೀತ್. ಅವ್ಳ್ ನೆಲಕ್ಕೆ ಬೀಳದ ಹಾಂಗೆ ಜಾಗ್ರತೆಂದ ಹೆಂಗ್ಸರ್
ಅವ್ವನ ಎತ್ತಿಕಂಡ್ ಒಳಗೆ ಹೋದೊ.

ಬಂದಿದ್ದ ನೆಂಟ್ರೆಲ್ಲಾ ಒಬ್ಬೊಬ್ಬರಾಗಿ ಹೊರ್ಟ್ ನಿಂತೊ. ಶಿವಪ್ಪ ಚಿಕ್ಕಪ್ಪ ಮತ್ತು
ಪೋಲೀಸ್ ಮಾವ ಅಪ್ಪಂಗೆ ಎರ್ಡ್ ಬುದ್ಧಿಮಾತ್ ಹೇಳಿ ಅಮ್ಮಣ್ಣಿನ ಕೆನ್ನೆ ಹಿಂಡಿ,
ಅವ್ವನ ಒಪ್ಪಿಗೆ ಪಡ್ದ್ ಹೊರ್ಟ್ಟೊ. ಎಲ್ಲವೂ ಹೋದ ಮೇಲೆ ಅಮ್ಮಣ್ಣಿ ತೀರ್ತದ
ತ್ಯಾಂಪಣ್ಣನಲ್ಲಿ ಕೇಳ್ತ್.

"ಅಜ್ಜ ಇನ್ನೂನು ಕುಲೆ ರೂಪಲೆ ಒಳನೋ ತ್ಯಾಂಪಣ್ಣ?"

"ಇರಿಕಿಲ್ಲೆ ಅಮ್ಮಣ್ಣಿ. ಹತ್ತರಂದ್ ನಾನ್ ಬೂದಿ ಹರ್ದಿದರ ನೋಡ್ತ್ಯೋಳಲ್ಲ?
ಅಜ್ಜ ಕುಲೆಯ ರೂಪಲಿರ್‌ತಿದ್ದರೆ ಬೂದಿಲಿ ಅಜ್ಜನ ಪಾದ ಮೂಡಕಾಗಿತ್ತ್. ಅಜ್ಜ
ತೀರಿಕಂಡ ಮೇಲೆ ನಾನ್ ಇಲ್ಲೇ ಒಳೆಲ್ಲಾ? ಅಜ್ಜ ಕುಲೆ ಆಗಿರುವ ಒಂದೇ ಒಂದು
ಲಕ್ಷಣ ಕಂಡತ್ಲೆ. ಹುಣ್ಸೆಮರದ ಗೆಲ್ಲ್‌ನ ಸಹ ಕುಲ್ಕಿತ್ಲೆ. ಯಾಕೆ ಹೇಳ್? ನಾವ್
ಮಾಡ್ದ ಕ್ರಿಯೆಗೆಲ್ಲಾ ಸರಿಯಾಗಿಯೇ ಆಗುಟು. ಅಜ್ಜ ಕಂಡಿತಾಗಿ ವೈಕುಂಠಕ್ಕೆ
ಹೋಗೊಳೊ."

"ಹಾಂಗಾದರೆ ಅವ್ವನ ಮೈಮೇಲೆ ಬಂದೊವು ಯಾರ್?"

"ನಂಗೂ ಸರಿಯಾಗಿ ಗೊತ್ತಾತ್ಲೆ ಅಮ್ಮಣ್ಣಿ. ಕೆಲವು ಪ್ರಶ್ನೆಗಳಿಗೆ ಉತ್ತರ ತಿಳ್ದ್‌ಕಣದೆ ಇರುದು ಒಳ್ಳೆದ್‌ಂತ ಕಂಡದೆ. ಉತ್ತರ ಬೇಕೇ ಬೇಕುಂತಾದರೆ ಅವ್ವನ ಕೇಳುದೇ ಒಳ್ಳೆದ್." ಅವಳ್ ತುಂಬಾ ಹೊತ್ತು ಯೋಚನೆ ಮಾಡ್ತಾ ಕುದ್ದತ್. ಎಲ್ಲಾ ವಿಷಯಗಳ ಕೇಳಿ ತಿಳ್ಕಂಬಬದ್‌ಲ್ ಯೋಚಿಸಿ ಉತ್ತರ ಕಂಡ್‌ಕಣಕ್‌ಂತ ಅವ್ಳಿಗೆ ಆಗ ತಲೆಗೆ ಹೊಳ್ತ್.

——***——

# ೩. ಅಂಬುರುಹದಳ ನೇತ್ರೆ

ಹತ್ತ್ ಸಮಸ್ತರೆದ್‌ರ್ ಅಜ್ಜನ ಕುಲೆಗೆ ಕೊಟ್ಟ ಮಾತ್‌ನ ಉಳ್ಸಿಕಂಬಕೆ ಅಪ್ಪಂದ ಆತ್ಲೆ. ಅಂತೂ ಮತ್ತೊಂದು ಮದ್ವೆ ಆಗಿಯೇ ಬುಟ್ಟತ್.

ಅಪ್ಪ ಅಲ್ಲೂ ಬುದ್ದಿವಂತಿಕೆ ತೋರಿಸಿತ್ತ್. ಅಜ್ಜ ಸತ್ತ್ ಐದ್ ವರ್ಸ ಕಳ್ದ ಮೇಲೆ ಎರಡ್ನೆ ಮದ್ವೆ ಆತ್. ಅವಳ್ನ ಕಜೆ ಮನೆಗೆ ಕರ್ಕಂಡ್ ಬಾತ್ಲೆ. ದೇವಸ್ತಾನಂದ ಹಂಞ ಕೆಳಗೆ ಬಿಡಾರ ಹೂಡ್ತ್. ಕಜೆ ಮನೆಂದನೂ ಯಾರ್ರೂ ಕೂಡ ಕರ್ಕಂಡ್ ಹೋತ್ಲೆ. ಮೊದುವೆಗೂ ಯಾರ್ರೂ ಹೇಳ್ತ್‌ಲೆ.

ಅಪ್ಪನ ಎರಡ್ನೆ ಮದುವೆಗೆ ಹಂಞ ಮುಂದೆ ಅವ್ವ ಗಂಡ್‌ಕೂಸುನ ಹೆತ್ತತ್. ಆದ್ರೂ ಅಪ್ಪ ತನ್ನ ಹಟನ ಬುಟ್ಟತ್ಲೆ. ಗಂಡ್ ಕೂಸಾದ ಮೇಲೂ ಮತ್ತೊಂದು ಮೊದುವೆ ಆಕೆ ಅಪ್ಪಂಗೆ ಹೇಂಗೆ ಮನ್ಸ್ ಬಾತೋ. ಯಾಗಾದರೊಮ್ಮೆ ಅಪ್ಪ ಕಜೆ ಮನೆಗೆ ಬರ್ತಿತ್ತ್. ಬೊಳ್ಪಿಗೆ ಬಂದರೆ ಕತ್ತಲೆ ಆಗ್‌ತಿದ್ದಂಗೆ ಹೋಗಿ ಬುಡ್ತಿತ್ತ್. ಅಷ್ಟ್ ಜನರೆದ್‌ರ್ ಅಜ್ಜನ ಕುಲೆಗೆ ಕೊಟ್ಟ ಮಾತ್‌ನ ಮುರ್ದ ಅಪ್ಪನ ಮೋರೆ ನೋಡಿಕೂ ಅಮ್ಮಣ್ಣಿಗೆ ಮನಸ್ಸಾಗ್‌ತಿತ್ಲೆ. ಅವ್ವ ಅಂತೂ ಅವಂಗೆ ನಾಯಿಗೆ ಬಯ್ಯುವ ಹಾಂಗೆ ಬೊಯ್ದ್‌ಬುಡುತಿತ್ತ್. ಅಪ್ಪ ಬಂದ ದಿನ ಮನೆನ ನೆಮ್ಮದಿನೇ ತಪ್ಪಿ ಹೋಗ್‌ತಿತ್ತ್.

ಬೇಜಾರಾಕನೆಲ್ಲಾ ಅಮ್ಮಣ್ಣಿ ಅವ್ಳ ಅಜ್ಜ ಹೇಳಿಕೊಟ್ಟ ಯಕ್ಷಗಾನದ ಪದಗಳ್ನ ತಾಳ ಹಾಕಿ ಅಬ್ಯಾಸ ಮಾಡ್‌ತಿತ್ತ್. ತ್ಯಾಂಪಣ್ಣ ಅದನ್ನ್ ಕೇಳಿ ತಲೆತೂಗ್‌ತಿತ್ತ್.

“ನಿನ್ನ ಅಪ್ಪ ನಾಯಿ ಬಾಲದ ಹಾಂಗೆ. ಅದರ ನೆಟ್ಟಂಗೆ ಮಾಡಿಕೆ ದೇವ್ರಿಗೂ ಆಕಿಲೆ. ಅಂವ ಹಾಳಾಗಿ ಹೋಗಲಿ. ಅಜ್ಜ ನಿಂಗೆ ದೊಡ್ಡ ಸಂಪತ್ತ್ ಕೊಟ್ಟುಟು. ಅದರ ನೀನ್ ಕಾಪಾಡಿಕಣಕ್ಕು. ನಿನ್ನ ರಾಗ ಲಾಯ್ಕುಟ್ಟು. ತಾಳ ತಪ್ಪದ ಹಾಂಗೆ ಹಾಡಿರೆ ನೀನ್ ದೊಡ್ಡ ಬಾಗವತಳಾದಿಯ ಅಜ್ಜನ ಹೆಸ್ರ ಹಾಂಗಾದ್ರ್ ಉಳಿಲಿ.”

ಅವಳ ಹೈಸ್ಕೂಲಿನ ಸ್ಕೌಟು, ಗೈಡ್ಸ್ ಟೀಚರ್ ಶಾಲಿನಿ ಅಮ್ಮಣ್ಣಿಂದ ಆಗಾಗ ಕ್ಲಾಸಿಲಿ ಹಾಡಿಸ್‌ತಿದ್ದೊ. ಅವರ ಉತ್ತೇಜನಂದ ಅವಳ್ ಹಾಡುವ ಸ್ಪರ್ದೆಗಳಲಿ ಬಾಗವಹಿಸಿ ಹೈಸ್ಕೂಲಿಗೆ ಬಹುಮಾನ ತಂದ್‌ಕೊಡ್ತಿತ್ತ್. ಹೆಡ್‌ಮಾಸ್ಟ್ರ ಗೋವಿಂದಯ್ಯನವ್ಕೆ ಕುಸಿಯಾಗಿ ಒಂದುದಿನ ಅಸೆಂಬ್ಲಿಲಿ ಅವಳ್ನ ಹೊಗಳಿಬುಟ್ಟೊ.

“ನಮ್ಮ ಶಾಲೆಯ ಅಮ್ಮಣ್ಣಿ ಒಳ್ಳೆ ಹಾಡ್‌ಗಾರ್ತಿ. ಅವಳ್ ಬಾವಗೀತೆ, ಜನಪದ ಗೀತೆ, ಬಕ್ತಿಗೀತೆ ಲಾಯ್ಕಾಗಿ ಹಾಡಿದೆ. ಬಾಗವತಿಕೆನೂ ಮಾಡ್ದೆ. ನಮ್ಮ ದೇಶದ ಸಂಸ್ಕೃತಿ ಉಳಿದು ಯಕ್ಷಗಾನದಂತ ಕಲೆಗಳ್‌ಂದ. ನಿಮ್ಮಲ್ಲಿ ಬ್ರೇಕ್‌ಡ್ಯಾನ್ಸ್,

ಕ್ಯಾಸೆಟ್ಟ್ ಕುಣ್ತದ ಹುಚ್ಚಿರೊವು ತುಂಬಾ ವಿದ್ಯಾರ್ಥಿಗೊಳರಿ. ಆ ಹುಚ್ಚು ದೇಶದ ಸಂಸ್ಕೃತಿನ ನಾಶ ಮಾಡ್ದೆ. ಒಬ್ಬಳ್ ಸಾಮಾನ್ಯ ಹುಡ್ಗಿ ನಮ್ಮ ಸಂಸ್ಕೃತಿ ಉಳ್ಸುವ ಕೆಲ್ಸ ಮಾಡ್‌ತುಟ್ಟು. ಅವ್ಳಿಗೆ ದೇವ್ರು ದೊಡ್ಡ ಸಾದನೆ ಮಾಡುವ ಶಕ್ತಿ ಕೊಡಲಿ."

ಅಂದ್‌ಂದ ಅಮ್ಮಣ್ಣಿನ ಶಾಲೆಲಿ ಎಲ್ಲವ್ರೂ ಕಣ್ಣ್‌ಬುಟ್ಟ್ ನೋಡಿಕೆ ಸುರು ಮಾಡ್ದೊ. ಶಾಲಿನಿ ಟೀಚರ್ ಯಕ್ಷಗಾನದ ಒಂದು ತಂಡ ತಯಾರ್ ಮಾಡಿ ಅಮ್ಮಣ್ಣಿನ ಬಾಗವತಿಕೆಲಿ ಶಾಲಾ ವರ್ದಂತಿಯಂದ್ ರಂಗ ಪ್ರಯೋಗ ಮಾಡಿಯೇ ಬುಟ್ಟೋ. ತಂಡ ಪ್ರದರ್ಶಿಸಿದ ಬಬ್ರುವಾಹನ ಕಾಳಗ ಬಾರೀ ಯಶಸ್ವಿ ಆತ್. ಅಮ್ಮಣ್ಣಿನ ಬಾಗವತಿಕೆಗೆ ಆಗಾಗ ಶಿಳ್ಳ್, ಕೈ ಚಪ್ಪಾಳೆ ಬೀಳ್ ತಿತ್ತ್. ಆಮೇಲೆ ಮೇಲಿನ ತರಗತಿಗಳ ಹೈದಂಗ ಅವ್ಳ ಕಾಂಬಕನ 'ಏನ್ ಬಾಗವತರೇ' ಅಂತ ಕರೆತಿದ್ದೊ. ಹುಡುಗಿಯೊಬ್ಬಳ್ ಯಕ್ಷಗಾನದ ಬಾಗವತರಾದದ್ದ್ ಊರಿಡೀ ಸುದ್ದಿಯಾಗಿಬುಟ್ಟತ್. ಶಾಲಿನಿ ಟೀಚರಿಗೆ ತುಂಬಾ ಕುಸಿಯಾಗಿತ್ತ್. ಹೆಡ್ಮಾಸ್ಟ್ರ ಗೋವಿಂದಯ್ಯನೊವು ಅವಳ್ನ 'ಅಂಬುರುಹದಳನೇತ್ರೆ' ಅಂತಲೇ ಕರೆಕೆ ಸುರುಮಾಡ್ದೋ. ಅಜ್ಜ ಹೇಳಿಕೊಟ್ಟ ಮೊದಲ ಹಾಡ್ ಅದ್.

ಅಂಬುರುಹದಳ ನೇತ್ರೆ ಶ್ರೀ ದುರ್ಗಾಂಬಿಕೆಯ
ಬಲಗೊಂಡು ಭಕ್ತಿಯೊಳಂಬಿಕಾ ಸುತ
ವಿಘ್ನರಾಜನ ಪಿರಿದು ಸಂಸ್ತುತಿಸಿ
ಅಂಬನಿಧಿಯಾತ್ಮಜೆಗೆ ಕೈ ಮುಗಿದು
ಅಂಬುಜಾಸನ ವಾಣಿಯರ
ಪಾದಾಂಬುಜಕೆ ಪೊಡಮಡುತ ವರ್ಣಿಪೆನೀಕಥಾಮೃತವ.

ಯಕ್ಷಗಾನ ಪ್ರಸಂಗ ಸುರುಮಾಡಿಕಾಕನ ಹಾಡುವ ನಾಂದಿ ಪದ ಅದ್. ಅದ್ ನೀರ್ಲಿ ಹುಟ್ಟುವ ಕಮಲನ ದೇವರೊಟ್ಟಿಗೆ ಸಮೀಕರಿಸುವ ಹಾಡ್. ಅದರ ಅರ್ತನ ಅಜ್ಜ ಎಲ್ಲಿ ಕಲ್ತಿತ್ತೊ? ಅಂವ ಹೇಳಿತ್ತ್ "ಕಮಲ ನೀರ್ಲಿ ಹುಟ್ಟಿದೆ. ನೀರಿಲ್ಲದಿದ್ದರೆ ನಾವೇನ್ ದೇವ್ರೂ ಇಲ್ಲೆ. ಅದಕ್ಕೆ ನಾನ್ ತಪಸ್ವಿನಿನ ಪಕ್ಕಲಿ ಮನೆ ಮಾಡ್ದ್."

ಶಾಲೆಲಿ ಯಕ್ಷಗಾನ ಅಬ್ಯಾಸ ಮಾಡ್ಸಿಕೆ ಬಂದೊವು ಮಾಲಿಂಗ ಮದ್ದೆಗಾರ್ರ್. ಅವ್ಕೆ ಚೆಂಡೆ, ಮದ್ದೆ ಮತ್ತು ಕುಣಿಯಕೆ ಲಾಯ್ಕ ಗೊತ್ತಿತ್ತ್. ಸಹಾಯ ಮಾಡಿಕೆ ಬರ್ತಿದ್ದ ಹೈದನ ಅವು ಸತ್ಯಣ್ಣ ಅಂತ ಕರೆತಿದ್ದೊ. ಸತ್ಯಣ್ಣ ಬಾರೀ ಲಾಯ್ಕ್ ಚಂಡೆ ಬಾರಿಸ್‌ತಿತ್ತ್. ಅಮ್ಮಣ್ಣಿ ತಪ್ಪಿಕಾಕನ ಅವು ಇಬ್ಬರ್ ಸರಿಮಾಡ್‌ತಿದ್ದೊ. ಮಾಲಿಂಗ ಮದ್ದೆಗಾರರ್ ಸುರೂನ ಅಬ್ಯಾಸದ ನಂತ್ರ ಹೇಳ್ದೊ.

"ನೀನ್ ಕಪ್ಪು ಮೂರರ್ಲಿ ಸಲೀಸಾಗಿ ಹಾಡಿಯಾ. ಯಕ್ಷಗಾನದ ಎಷ್ಟೋ ಬಾಗವತರ್‌ಗ ಬಿಳಿ ಎರಡರ್ಲೇ ಒದ್ದಾಡಿವೆ. ಚಂಡೆ, ಮದ್ಲೆ, ಜಾಗಟೆಗ ರಣವಾದ್ಯಗ. ಕಪ್ಪು ಮೂರು ಅವುಗಳ್ಗೆ ಒಪ್ಪುವ ಶ್ರುತಿ. ಅದಕ್ಕಿಂತ ಕಡ್ಮೆ ಮಾಡ್ರೆ ಯಕ್ಷಗಾನ ಕಳೆಕಟ್ಟುದ್ಲೆ. ನಿಂಗೆ ಒಳ್ಳ ಕಂಠ ಉಟ್ಟು. ಅದ್ ಸರಿ ಪಳಂಗೊಕು. ಪ್ರಸಂಗ ಮಾಹಿತಿ ಮತ್ತು ರಂಗದ ಅನುಬವ ಸಿಕ್ಕಿರೆ ನೀನ್ ತುಂಬಾ ಎತ್ತರಕ್ಕೆ ಬೆಳ್ದ್ ಬುಟ್ಟಿಯಾ ನೋಡು. ನಿಂಗೊಬ್ಬ ಗುರು ಸಿಕ್ಕಿರೆ ಎಲ್ಲಾ ಸರಿ ಹೋದೆ. ನೋಡೋನೊ ನಿನ್ನ ಯೋಗ ಮತ್ತು ಬಾಗ್ಯ ಹೇಂಗುಟ್ಟೋಂತ."

ಒಂದು ಆದಿತ್ಯವಾರ ಮಾಲಿಂಗ ಮದ್ಲೆಗಾರರ್ ಮನೆ ಹುಡ್ಕಿಕಂಡ್ ಬಂದೊ. ಅಂದ್ ಅಪ್ಪ ಮನೆಲಿತ್ತ್. ತ್ಯಾಂಪಣ್ಣ ತೀರ್ತ ತಂದಿತ್ತ್. ಮಾಲಿಂಗನವೂ ತೀರ್ತ ಸೇವನೆ ಮಾಡಿ ಕುಸಿಂದ ನಗಾಡ್ದೋ.

"ನಾನ್ ಇದನ್ನ ತಕೊಂಬೊದು ಬಾರೀ ಕಡ್ಮೆ. ನಮ್ಮಲ್ಲಿ ಪಾನ ನಿಷೇದ ಉಟ್ಟಲ್ಲ? ಹಾಂಗಂತಲ್ಲ ಚಟ ಆಕೆ ಆಗದ್‌ಂತ. ಇಷ್ಟ್ ಒರಿಜನಲ್ಲ್ ಸಿಕ್ಕಿಕಾಕನ ರುಚಿ ನೋಡ್ವ ಮನಸಾತ್. ಸಮಾನ ಚಟವಿದ್ದವರ್ಲಿ ಸ್ನೇಹಾಚಾರ ಬೆಳ್ದದೆ. ನನ್ನನ್ ಇಲ್ಲಿವರೇಗೆ ಬರುವ ಹಾಂಗೆ ಮಾಡ್ದ್ ಅಮ್ಮಣ್ಣಿನ ಬಾಗವತಿಕೆ. ದಾಸಪ್ಪಣ್ಣನ ಪರಿಚಯ ಇತ್ತ್. ಅವರ ಹಾಡಿಗೆ ಚೆಂಡೆ ಬಡ್ದವ ನಾನ್. ಈಗ ಅವರ ಮೊಮ್ಮಗಳ ಬಾಗವತಿಕೆಗೆ ಮದ್ದಲೆ ಬಾರಿಸುವಂತಾತ್ ಇದೊಂದು ಯೋಗಾನುಯೋಗ."

ಅಪ್ಪ ಅಂದ್ ಒಳ್ಳೆ ಲಹರಿಲಿ ಇತ್ತ್. ತ್ಯಾಂಪಣ್ಣನದ್ ಯೂಗೋಳು ಹಾಸ್ಯದ ಮಾತ್‌ಗಳೆ. ಮಾತಿನ ಮದ್ಯೆ ಅಮ್ಮಣ್ಣಿ 'ಮಾಲಿಂಗ ಮಾಮ' ಅಂತ ಹೇಳಿಬುಟ್ಟತ್. ಅವುಕೆ ನಗೆ ಬಾತ್.

"ನಂಗೊಬ್ಬ ಗುರುಗೊಳೊ. ಅವು ನಂಗೊಂದು ಹೆಸ್ರ್ ಇಸಿಯೊಳೊ ಮಾಮಾ ಅಂತ. ಮಾಮಂತೇಳಿರೆ ಮಾಲಿಂಗ ಮದ್ಲೆಗಾರ್ ಎಂಬುದರ ಇನ್ನೊಂದು ಹೆಸ್ರ್. ನಂಗೆ ಇಬ್ಬರ್ ಗಂಡ್ ಮಕ್ಕಳೊಳೊ. ನಾನ್ ಮಳೆಯಾಳಿ. ಅಳಿಯಕಟ್ಟ್ ಸಂಪ್ರದಾಯದಂವ. ನೀವ್ ಕನ್ನಡ, ಮಕ್ಕಳ ಸಂಪ್ರದಾಯಕ್ಕೆ ಸೇರ್ದವಲ್ಲಾ? ಇದೆಲ್ಲಾ ನಾವೇ ರೂಡ್ಸಿಕಂಡದ್ದ್. ದೇವ್ರ ಚಿತ್ತ ಹಾಂಗಿದ್ದರೆ ನಾನ್ ನಿಜಕ್ಕು ನಿನ್ನ ಮಾವ ಆಕೂ ಸಾಕ್. ನಮ್ಮ ಹಣೇಲಿ ಏನ್ ಬರ್ದುಟ್ಟೋಂತ ಆ ಪರಬ್ರಹ್ಮಂಗೇ ಗೊತ್ತು."

ಆ ಮಾತ್‌ಗಳ್ನ ಕೇಳಿ ಅಮ್ಮಣ್ಣಿಗೆ ನಾಚಿಕೆಯಾಗಿ ಕೆನ್ನೆ ಕೆಂಪೇರ್ತ್. ತಾನೀಗ ನಿಜಕ್ಕೂ ದೊಡ್ಡವಳಾಗಿಬುಟ್ಟೇಂತ ಅವ್ಳಿಗೆ ಆ ಕ್ಷಣಕ್ಕೆ ಅನ್ನಿಸಿತ್.

ಮಾಲಿಂಗ ಮಾವನ ಹೆಗ್‌ಲ್‌ಲಿ ಸಾಮಾನ್ಯಾಗಿ ಬಟ್ಟೆ ಚೀಲೊಂದು

ನೇತಾಡ್‌ತಿದ್ದದೆ. ಒಮ್ಮೆ ಅದರೊಳಗೆ ಏನುಟ್ಟೂಂತ ಬುಡ್ಸಿ ನೋಡ್ತ್. ಏಳೆಂಟ್ ಯಕ್ಷಗಾನ ಪ್ರಸಂಗ ಪುಸ್ತಕಗ, ಚಂಡೆ ಬಾರ್ಸುವ ಎರ್ಡ್ ಕೋಲುಗ, ಒಂದು ಜಾಗಟೆ, ಜಾಗಟೆ ಬಡಿವ ದಪ್ಪದ ಕೋಲು, ಮದ್ದೆ ಸುಲ್ತಾನ್ ಮಾಡುವ ಒಂದು ಸುತ್ತಿಗೆ, ಮರದ ಕುಟ್ಟಿ, ಮದ್ದ್ಲೆನ ಸ್ವರ ಹೆಚ್ಚಿಸಿಕೆ ಬೇಕಾದ ಚಾಳೆ ಕಡ್ಡಿಗ, ಒಂದು ಬೀಡಿ ಕಟ್ಟ್, ಕಿಚ್ಚಿನ ಪೆಟ್ಟಿಗೆ, ಒಂದು ಎಲೆ ಅಡಿಕೆ ಪಾಕ್, ಪಾಕ್‌ನ ಒಳಗೆ ಅಡ್ಕೆ ಚೂರು, ಎಲೆ, ಹೊಗೆ ಸೊಪ್ಪು, ಸುಣ್ಣ, ನಾಲ್ಕ್ ಯಾಲಕ್ಕಿ ಮತ್ತು ಒಂದಷ್ಟ್ ಒಳ್ಳೆ ಮೆಣ್ಸ್ ಇದೆಲ್ಲ ಇತ್ತ್.

"ಯಕ್ಷಗಾನದವುಕೆ ಇದೆಲ್ಲಾ ಬೇಕಾದೆ ಅಮ್ಮಣ್ಣಿ. ನೀನಂತೂ ಸ್ವರನ ಲಾಯಕ್ಕಾಗಿ ಕಾಪಾಡಿಕಂಡ್ ಬರೊಕು. ಬೊಳ್ಪಿಗೊಮ್ಮೆ ಹಿಂಬೊತ್ತಿಗೊಮ್ಮೆ ಬಿಸಿ ನೀರ್ಲಿ ಉಪ್ಪು ಕಲ್ಸಿ ಗಂಟ್ಲ್‌ನ ಗೊಳೊ ಗೊಳೊ ಮಾಡಿ ಮುಕ್ಕ್‌ಳ್ಸ್. ಮತ್ತೆ ಒಳ್ಳೆಮೆಣ್ಸ್ ಮತ್ತು ಕಲ್‌ಸಕ್ಕರೆ ಆಗಾಗ ತಿನ್ತಿರ್. ಇದೆಲ್ಲ ಸ್ವರನ ಸರಿ ಕಾಪಾಡಿಕೆ ಸಹಾಯ ಮಾಡ್ದೆ. ನಾವ್ಗೆಲ್ಲಾ ಒಂದು ಸ್ಟ್ರಾಂಗ್ ಚಾ ಸಿಕ್ಕಿರೇನೇ ಚಂಡೆ ಬಾರ್ಸಿಕೆ ಪ್ರಾಣ ಬಾದು. ಒಮ್ಮೊಮ್ಮೆ ತ್ಯಾಂಪಣ್ಣ ಕೊಟ್ಟಂತ ತೀರ್ಥ ಸಿಕ್ಕಿರೆ ನಾಲ್ಕ್ ಪೆಟ್ಟ್ ಹೆಚ್ಚೇ ಬಡಿಯಕ್ಕಾದೆ. ಅದ್ ಮಾತ್ರ ನಿಂಗೆ ಬೇಡ.

ಮಾಲಿಂಗ ಮಾವ ಲಾಯ್ಕಾಗಿ ಕನ್ನಡ ಮಾತ್ರ ಅಲ್ಲ, ಅರೆಕನ್ನಡ ಸಹ ಮಾತಾಡ್‌ತಿದ್ದೊ. ಅವರ ಕನ್ನಡ ಕೇಳಿರೆ ಮನೆಮಾತ್ ಮಲೆಯಾಳಂತ ಅನ್ನಿಸುದೇ ಇಲ್ಲೆ.

"ಕಾಸರಗೋಡು ಪ್ರಾಂತ್ಯಕ್ಕೆ ಸೇರ್ದೊವು ನಾವು. ನಿಮ್ಮ ಲೆಕ್ಕಲಿ ಮಲೆಯಾಳಿಗ. ಕೇರಳದೊವು ನಮ್ಮನ ಕನ್ನಡಿಗರ್‌ಂತ ಗುರ್ತಿಸುವೆ. ನಾವ್ ಎರ್ಡ್ ಕಡೆಗೂ ಬೇಡದೊವು. ಯಕ್ಷಗಾನ ಹುಟ್ಟಿದ್ ಕುಂಬಳೆಲಿ. ಅದನ್ನ್ ಹುಟ್ಟು ಹಾಕಿ ಬೆಳ್ಸಿದೊವು. ಮಲೆಯಾಳ ಮನೆಮಾತಿನ ಬಡ ಶೂದ್ರ, ಕನ್ನಡಿಗರ್. ಇಡೀ ಕಾಸರಗೋಡು ಜಿಲ್ಲೆ ನಿಜವಾಗಿ ಕರ್ನಾಟಕಕ್ಕೇ ಸೇರಕ್ಕಾಗಿತ್. ಯಾರ್‍ಯಾರೋ ಅನ್ಯಾಯ ಮಾಡಿಬುಟ್ಟೋ. ಈ ಯಕ್ಷಗಾನ ಕಲೆ ಉಟ್ಟಲ್ಲಾ ಇಂತದೊಂದು ಕಲೆ ವಿಶ್ವಲೇ ಇಲ್ಲೆಂತ ಕತಕ್ಕಳಿಯ ಕಲಾವಿದರೂ ಒಪ್ಪಿಕಂಡವೆ. ಈ ಗಂಡ್‌ಕಲೆ ಹೆಣ್ಣಾದ ನಿಂಗೂ ಒಲ್ದದ್ ವಿಶೇಷನೆ. ನಿಜ ಹೇಳ್ದುತ್ತಾದರೆ ಕಲೆಗೆ ಜಾತಿ, ಬಾಸೆ, ಗಂಡ್, ಹೆಣ್ಣ್‌ಂತ ಬೇದ ಇಲ್ಲೆ. ನನ್ನ ಗುರುಗಳಲ್ಲಿಗೆ ನಿನ್ನ ಕರ್ಕಂಡ್ ಹೋನೆಲ್ಲಾ, ಆಗ ನಿಂಗೆ ಅದ್ ಎಲ್ಲ ಗೊತ್ತಾದೆ."

ಮಾಲಿಂಗ ಮಾವನ ಗುರು, ಮಂಜುನಾಥ ಬಾಗವತರ್ ಕೇರಳದ ಗಡಿಲಿ ಕಲಾಶಾಲೆ ನಡ್ಸ್‌ತಿದ್ದೊ. ಅರ್ವತ್ತರ ಆಸುಪಾಸಿನ ಗುರುಗ ಎತ್ತರಾಗಿ ಗಟ್ಟಿಮುಟ್ಟಾಗಿದ್ದೊ.

ಕುತ್ತಿಗೆಲಿ ರುದ್ರಾಕ್ಷಿ ಮಾಲೆ, ಹಣೆಲಿ ಶ್ರೀಗಂದದ ಅಡ್ಡನಾಮ. ನಡೂಲೊಂದು ಕುಂಕುಮದ ಬೊಟ್ಟು. ಕಣ್ಣ್‌ಗಳ್ಲಿ ಹೊಳ್ಪಿತ್ತ್. ಅವರ ಗನಗಂಬೀರ ವ್ಯಕ್ತಿತ್ವ ನೋಡಿ ಅಮ್ಮಣ್ಣಿ ಕಾಲಿಗೆ ಅಡ್ಡಬಿದ್ದ್ ನಮಸ್ಕಾರ ಮಾಡ್ತ್.

"ಏನ್ ಮಾಲಿಂಗ ಇದ್. ಆಗಲೇ ಕಾಲಿಗೆ ಬೀಳಿಕೆ ತಯಾರ್ ಮಾಡಿಯೊಳ. ಕೂಸಿನ ಮುಕ ಲಕ್ಷಣ ಪೊರ್ಲುಟ್ಟು. ಏನ್ ಓದುತ್ತೊಳ ಮಗಳೇ?"

"ಇವ್ಳ ಎಲ್ಲಾ ವಿಷಯನ ಹೇಳ್ತಿಲೆ ಗುರುಗಳೇ. ಇವಳ ಶಾಲೆಲಿ ಮೊನ್ನೆ ಮಕ್ಕಳ್ದೇ ಒಂದು ಯಕ್ಷಗಾನ ಆತ್. ತಂಡ ತಯಾರ್ ಮಾಡ್ದ್ ನಾನ್. ಇವಳ್ದ್ ಬಾಗವತಿಕೆ. ಕಪ್ಪು ಮೂರರ್ಲಿ ಸಲೀಸಾಗಿ ಹಾಡ್ದೆ. ಇಷ್ಟ್ ವರ್ಷದ ಅನುಬವಲಿ ನನ್ನ ಕಂಠ ಬಿಳಿ ಎರಡನ್ನ ದಾಟಿತ್ಲೆ. ಇವ್ಳ ಕಲಾಶಾಲೆಲಿ ಪಳಗಿರೆ ಬಿಳಿ ಐದಕ್ಕೂ ಏರಿಬುಡ್ದ್."

ಮಂಜುನಾಥ ಬಾಗವತರ್ ಅವಳ ಮೋರೆನ ನೋಡ್ದೊ.

"ಒಳ್ಳೆದ್ ಮಗಳೇ, ಈ ಮೂರ್ತಿನ ಒಮ್ಮೆ ನೋಡು. ಇಂವ ಮುರಳೀ ಗೋಪಾಲ. ಇವನ ಹೆಸ್ರ್‌ಲಿ ಕಲಾಶಾಲೆ ನಡ್ಸ್‌ತೊಳೆ. ಇವನ ನಾನ್ ಗರ್ಬಗುಡಿನ ಕತ್ತಲೆಲಿ ಕೂಡಿ ಹಾಕಿತ್ತ್‌ಲೆ. ದೇವರ್‍ನ ಎಲ್ಲವೂ ಮುಟ್ಟಿ ಆನಂದಿಸೊಕು. ಕಲಾ ಶಾಲೆಗೆ ಇವನ ಹೆಸ್ರ್ ಇಸಿದ್ ಯಾಕೆ ಗೊತ್ತೊ? ಇಂವ ಕೊಳಲ್ ಕಂಡ್ ಹಿಡ್ದಂವ. ಅದರ್ಲಿ ಸಪ್ತಸ್ವರಗಳ ಹೊರ್ಡ್‌ಸ್‌ಕ್‌ಂತ ತೋರ್ಸಿಕೊಟ್ಟಂವ. ನಾದ ಇರ್ದು ಪ್ರಕೃತಿಲಿ. ಅದನ್ನ್ ಕೊಳಲ್ಲ್‌ಂದ ಹೊರ್ಡುಸುದು ದೊಡ್ಡ ಸಾದನೆ. ಗೊಲ್ಲರ ಹೈದ ನಿಸರ್ಗದ ನಾದಕ್ಕೆ ಕೊಳಲಾತ್. ನಾದಕ್ಕೆ ಒಲಿಯದೊವು ಯಾರ್ ಹೇಳ್? ಗೋವುಗಳ್ನ ಒಲ್ಸಿತ್. ಗೋಪಿಕೆಯರ ಹೃದಯನ ಗೆದ್ದತ್. ಈ ನಾದ ಉಟ್ಟಲ್ಲ ಅದಕ್ಕೆ ಎರ್ಡ್ ಆಯಾಮಗೊಳೊ ಮಗಳೇ. ಒಂದು ಬಾವ ಇನ್ನೊಂದು ಬಕ್ತಿ. ಬಾವ ಇಲ್ಲದೊವು ಬಕ್ತರಾಕೆ ಸಾದ್ಯನೇ ಇಲ್ಲೆ ನೋಡು."

ಅಮ್ಮಣ್ಣಿ ಬುಟ್ಟ ಕಣ್ಣಿಂದ ಗುರುಗಳ್ನ ನೋಡ್‌ತಿತ್ತ್.

"ನಿನ್ನ ವಯಸ್ಸಿಗೆ ನಾನ್ ಹೇಳ್ದ್ ಹಂಙ ಹೆಚ್ಚಾತೇನೋ? ಯಕ್ಷಗಾನ ಉಟ್ಟಿಲ್ಲಾ, ಅದ್ ಮೂಲತ ಒಂದು ಜಾನಪದ ಕಲೆ. ಓದು ಬರಹ ಇಲ್ಲದ ನಾದಪ್ರಿಯ ಶೂದ್ರ ಬಕ್ತರ್‌ಂದ ಹುಟ್ಟಿದ್ ಅದ್. ನೀನ್ ಕವಿರಾಜ ಮಾರ್ಗದ ಹೆಸ್ರ್ ಕೇಳಿರುವ. ಅದರ್ಲಿ 'ಪದನರಿದು ನುಡಿಯಲುಂ, ನುಡಿದುದನರಿದಾರಯಲು ಮಾಳ್ಪರಾ ನಾಡವರ್ಗಳ್ ಚದುರರ್ ನಿಜದಿಂ ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣಿತ ಮತಿಗಳ್' ಎಂಬ ಸಾಲ್‌ಗ ಬಂದದೆ. ಯಕ್ಷಗಾನದ ಕಲಾವಿದರ ಬಗ್ಗೆ

ಹೀಂಗೆ ಹೇಳ್ದ್‌ಗಡ. ಪದನ ನೆನಪಿಟ್ಟ್‌ಕಂಡ್ ಅರ್ಥನ ತರ್ಕಿಸಿಕಂಡ್ ಬೆಳ್ಸಿಕೆ ಅವಕಾಶ ಕೊಡುವ ಮಹಾಕಲೆ ಇದ್. ಯಕ್ಷಗಾನ ಸುರುಮಾಡಿಕಾಕನ "ಗಜಮುಖದವಗೆ ಗಣಪಗೇ" ಅಂತ ಸ್ತುತಿ ಮಾಡುವೆ. ಗಣಪತಿ ಮನುಷ್ಯ ಮತ್ತು ಪ್ರಕೃತಿನ ಸಾಮರಸ್ಯದ ಸಂಕೇತ. ಕತೆ ಸುರುಮಾಡಿಕೆ ಮುಂದೆ 'ಅಂಬುರುಹದಳನೇತ್ರೆ' ಬಾಮಿನಿನ ಹಾಡಿವೆ. ಕಣ್ಣ್‌ನ ಕಮಲಕ್ಕೆ ಹೋಲ್ಸಿವೆ. ಜ್ಞಾನದ ಕಣ್ಣ್ ತೆರೆಕುಂತಾದರೆ ಪ್ರಕೃತಿನ ಅರ್ತ ಮಾಡಿಕಣಕು. ಮತ್ತು ಆರಾದಿಸೊಕು. ಕಲೆ, ಕುಣಿತ ಎಲ್ಲ ಪ್ರಕೃತಿನ ಕೊಡುಗೆಗ. ಬುದ್ಧಿವಂತರ್ ಶಾಸ್ತ್ರ ರಚಿಸಿ ಅದರೊಳಗೆ ಕಲೆನ ಮತ್ತು ಕುಣಿತನ ಬಂದಿಸಿಡಿಕೆ ಯತ್ನಿಸೊಳೊ. ಸಾಗರನ ಕೊಡಪಾನದ ಒಳಗೆ ತುಂಬಿಸುವ ಒಂದು ವ್ಯರ್ತ ಪ್ರಯತ್ನ ಅದ್."

"ಗುರುಗಳೇ, ನೀವ್ ಹೀಂಗೆಲ್ಲಾ ಹೇಳಿರೆ ಅಮ್ಮಣ್ಣಿಗೆ ಪಾಠ ಹೇಳ್ಸಿಕಂಬಕೆ ಬಾಕೆ ನಿಜಕ್ಕೂ ಹೆದ್ರಿಕೆ ಆದು."

"ಹೌದಲ್ಲಾ ಮಾಲಿಂಗ, ಎಲ್ಲಿ ಆ ಶ್ರುತಿಪೆಟ್ಟಿಗೆ ತಾ ಇಲ್ಲಿ. ಮದ್ದಲೆನ ಕಪ್ಪು ಮೂರಕ್ಕೆ ಸುಲ್ತಾನ್ ಮಾಡಿ ಇಸಿಯಳೆ. ಸರಿ, ಸುರುಮಾಡ್ ಮಗಳೇ."

"ಅಮ್ಮಣ್ಣಿ 'ಗಜಮುಖದವಗೆ' ಸ್ತುತಿ ಹಾಡ್ತ್. ಅಷ್ಟ್ ದೊಡ್ಡ ಗುರುಗಳ ಹತ್ರ ಕುದ್ದ್ ಹಾಡಿಕಾಕನ ಅವ್ಳಿಗೆ ಹೆದ್ರಿಕೆಯಾಗ್‌ತಿತ್ತ್. ಮದ್ದಲೆ ಬಾರ್‍ಸ್‌ತಿದ್ದ ಗುರುಗ ಕಣ್ಣ್‌ಮುಚ್ಚಿಕಂಡ್ ರಾಗನ ಆಸ್ವಾದಿಸ್‌ತಿದ್ದೊ.

"ಇದ್ ಚೌಕಿಯ ಹಾಡ್. ಮದ್ಯಮಾವತಿ ತ್ರಿವುಡೆಗಿಂತ ದಾಟಿ ಜಂಪೆಲಿ ಗಣಪತಿಗೆ ಸಂಬಂದಿಸಿದ ತುಂಬಾ ಸ್ತುತಿಗೊಳೊ. ಮದ್ಯಮಾವತಿ ತ್ರಿವುಡೆಗೆ ವೀರರಸದ ಓಗ ಉಟ್ಟು. ಪ್ರಸಂಗದ ಸುರೂಗೆ ದಾಟಿ ಜಂಪೆನೇ ಒಳ್ಳೆದ್. ಅದ್ ಬಕ್ತಿರಸಕ್ಕೆ ಸರಿ ಹೊಂದುವ ರಾಗ. ಇರ್ಲಿ ಇನ್ನೂ ಒಂದು ಹಾಡಿಬುಡು."

ಅವ್ಳ್ ಪಂಚವಟಿ ಪ್ರಸಂಗದ "ನೋಡಿ ನಿರ್ಮಲ ಜಲಸಮೀಪದಿ ಮಾಡಿಕೊಂಡರು ಪರ್ಣಶಾಲೆಯ" ಎಂಬ ಪದನ ಹಾಡ್ತ್. ನಿದಾನ ತ್ರಿವುಡೆಲಿ ಎತ್ತ್‌ಗಡೆ ಮಾಡಿ, ಏಕತಾಳಕ್ಕೆ ಬದಲಾಯಿಸಿ ತಿತ್ತಿತ್ತೈಗೆ ಹೋಗಿ ಏಕತಾಳಲಿ ಮುಕ್ತಾಯ ಮಾಡ್ತ್.

"ಸ್ತುತಿಯದ್ದೇ ರಾಗ ಮತ್ತು ತಾಳಲಿ ಹಾಡ್ಯೊಳ. ತಾಳ ಇನ್ನೂ ಸ್ವಲ್ಪ ಸ್ಪಷ್ಟ ಆಕು. ಹುಸಿ ಪೆಟ್ಟ್‌ಂದ ಎತ್ತ್‌ಗಡೆ ಮಾಡ್ಬಡ. ಗಾತಂದ ಎತ್ತಿಕ. ತ್ರಿವುಡೆಗೆ ಕುದುರೆನ ಕರಪುಟದ ಲಯ ಉಟ್ಟು. ಹಾಡಿಕೆ ಮುಂದೆ ಒಮ್ಮೆ ಬಾಯಿ ತಾಳ ಹಾಕಿಕ. ತಿಕ್ಕಿಟ ತಕಧಿಮಿ ಮಾತ್ರೆಗ ಎಂಟ್ ಉಟ್ಟು, ತಾಳಲಿ ಮೂರು ಗಾತಗಳುಟ್ಟು. ಆದಷ್ಟ್

ನೆನ್ಪು ಇಸಿಕಂಡರೆ ತಾಳ ತಪ್ಪುವ ಪ್ರಸಂಗ ಬಾದುಲೆ. ತ್ರಿವುಡೆ ನಿನ್ನ ಇಷ್ಟ
ತಾಳ ಅಂತ ಕಂಡದೆ. ಕಲಾವಿದರ್ ತುಂಬಾ ಇಷ್ಟ ಪಡುವ ತಾಳ ಅದ್. ನೃತ್ತ
ವೈವಿಧ್ಯಕ್ಕೆ ಅಷ್ಟೊಂದು ಅವಕಾಶಕೊಡುವ ತಾಳ ಇನ್ನೊಂದಿಲ್ಲೆ. ಏಕ, ತಿತ್ತಿತ್ತೆ
ತ್ವರಿತ, ಅಷ್ಟ ಹೀಂಗೆ ನಾಲ್ಕ ತಾಳಗಳಿಗೆ ಬದಲಾಯ್ಸಿಕಣಕ್. ಆದಿತಾಳ ಮತ್ತು ಚೌ
ತಾಳ ಅಂತ ಉಟ್ಟು. ಆದಿತಾಳಕ್ಕೆ ಏಳ್, ಮೂರು ಒಟ್ಟು ಹದಿಮೂರು ಪೆಟ್ಟ್‌ಗ
ಚೌ ತಾಳಕ್ಕೆ ಒಂದು, ಮೂರು, ಮೂರು, ಐದು ಒಟ್ಟು ಹನ್ನೆರಡ್ ಪೆಟ್ಟ್‌ಗ. ಇದ
ಪೂರ್ವರಂಗಲಿ ಹೆಚ್ಚ್ ಬಳಕೆ ಆದೆ. ಯಕ್ಷಗಾನದ ಮೂಲ ಪುರುಷ ಕುಂಬಳೆ
ಪಾರ್ತಿಸುಬ್ಬ ಪಂಚವಟಿ ಪ್ರಸಂಗ ರಚಿಸಿದಂವ. ಅವನ ಒಂದು ಹಾಡ್ ಆದಿ
ತಾಳಲಿ ಉಟ್ಟು. 'ರಾಘವ ನರಪತೆ ಶೃಣು ಮಾಮ ವಚನಂ'. ಹೆಚ್ಚಿನ ಬಾಗವತರ್
ಆದಿತಾಳ ಕಷ್ಟ ಆಗಿ ಅದನ್ನ್ ಬೇರೆ ಯಾವುದೋ ಸುಲಬ ತಾಳಲಿ ಹಾಡಿ
ಹೇಂಗೋ ಮುಗ್ಸಿಬುಟ್ಟವೆ. ಮುಂದಿನ ಸರ್ತಿ ಬಾಕನ ನಿಂಗೆ ಇವೆರಡ್ ತಾಳಗಳ್ನ
ಕಲ್ಸಿನೆ. ಯಾಗೋಳು ಒಂದೇ ತಾಳಕ್ಕೆ ಅಂಟಿಕಂಬುದು ಬೇಡ. ವೈವಿಧ್ಯವೇ ಜೀವನ.
ಗುರುಗ ಮದ್ಲೆ ಕಟ್ಟಿ ಇಸಿದೊ.

"ನೀನ್ 'ನೋಡಿ ನಿರ್ಮಲ ಜಲಸಮೀಪದಿ' ಹಾಡ್ದಲ್ಲಾ, ಪಾರ್ತಿಸುಬ್ಬನ
ಪಂಚವಟಿಂದ, ರಾಮ ಲಕ್ಷ್ಮಣರ್ ವನವಾಸ ಕಾಲಲಿ ಪಂಚವಟಿ ಪ್ರದೇಶಲಿ
ಪರ್ಣಕುಟೀರ ಕಟ್ಟಿ ವಾಸಿಸಿದ ಕತೆ ಅದ್. ಆದರೆ ನಿರ್ಮಲ ಜಲದ ಹತ್ತಿರಲೇ
ಪರ್ಣಕುಟೀರ ಕಟ್ಟಿದ್ ಯಾಕಿರ್ದು?"

ಅವ್ಳಿಗೆ ಅಜ್ಜ ತಪಸ್ವಿನಿನ ಬಗ್ಗೆ ಹೇಳ್ತಿದ್ದದ್ ನೆನ್ಪಾತ್. ದೇವಸ್ತಾನದ ಕೆಳಗಡೆ
ತಪಸ್ವಿನಿ ಕೊಳ್ಕಾಗ್‌ತಿದ್ದದ್, ವಿಜ್ಞಾನದ ಮಾಸ್ಟ್ರ ಜಲಮಾಲಿನ್ಯಂದಾಗ್‌ತಿದ್ದ
ತೊಂದರೆಗಳ ಬಗ್ಗೆ ಹೇಳ್‌ತಿದ್ದದ್ ಕೆಬಿಲಿ ಗುನುಗುಟ್ಟಿದಾಂಗಾತ್. ನೀರ್‍ನ ಮಹತ್ವ,
ಈಜುದರ ಪ್ರಾಮುಖ್ಯತೆ ಎಲ್ಲದರ್‍ನೂ ಅವಳ ಮಾತಿಲಿ ಹೇಳ್ತ್.

ಅವಳ ಮಾತಿಗೆ ಗುರುಗ ತಲೆದೂಗಿದೊ. "ಸರಿಯಾಗಿ ಹೇಳ್ದ. ನಮ್ಮ
ಮುರಳೀ ಗೋಪಾಲ ಇಷ್ಟಪಡ್‌ತಿದ್ದದ್ ನೀರ್‍ನ, ಕೊಳಲ್‌ನ ಮತ್ತು ಗೋವುಗಳ್ನ
ಕಾಳಿಂಗ ಮರ್ದನ ಮತ್ತು ರಾಸಕ್ರೀಡೆ ಕೇಳಿಯೊಳನ? ಸಿಂದೂ ಕಣಿವೆನ ನಾಗರಿಕತೆ
ನಿನ್ನ ಪಾಠಲಿರೋಕು. ನಾಗರಿಕತೆ ಅರ್‍ಳುದೇ ಹಳ್ಳಗಳ ಬದಿಗಳಲಿ. ಯಾಗ ಮನ್ಸ
ಹಳ್ಳನ ಗೊಜ್ಜೆ ಮಾಡ್ದೆನೋ ಆಗ ಅದೇ ಹಳ್ಳ ನಾಗರಿಕತೆನ ನುಂಗಿ ಹಾಕಿಬುಟ್ಟದೆ."
ಮಾಲಿಂಗ ಮಾವ ಕೇಳ್ದೊ.

"ಗುರುಗಳೇ, ಅಮ್ಮಣ್ಣಿ ಯಾಗಂದ ಶಾಲೆಗೆ ಬರಕ್? ಅಪ್ಪಣೆ ಆಕು."

"ಏನೇನೋ ಮಾತಾಡಿ ಮುಖ್ಯ ವಿಷಯನೇ ಮರ್ತ್‌ಬುಟ್ಟೆ. ಈ ಮಾಲಿಂಗ ಪ್ರತಿ ಶನಿವಾರ ಹಿಂಬೊತ್ತು ಇಲ್ಲಿಗೆ ಬಂದದೆ. ಆದಿತ್ಯವಾರ ಮದ್ಯಾಹ್ನ ಹೋದೆ. ಶನಿವಾರ ಇಲ್ಲಿ ತಾಳಮದ್ದಳೆ ನಡ್ದದೆ. ಕುದ್ದು ಅರ್ತ ಹೇಳ್ದು. ಇಷ್ಟ ಇದ್ದರೆ ನಿನ್ನ ತಂಗೆನ ಕರ್ಕಂಡ್ ಬಾ. ಈ ಮಾಲಿಂಗಂಗೆ ಏನ್ ಕಡಿಮೆ ಗೊತ್ತಿರ್ದಂತ ಗ್ರಹಿಸಿಯೊಳ? ಮುರಳೀ ಗೋಪಾಲಂಗೆ ಪೂಜೆ ಮಾಡ್ಕನ ನಾನ್ ಹೇಳ್ವ ಅಷ್ಟೂ ಮಂತ್ರಗ ಅವಂಗೆ ಬಂದದೆ. ನನ್ನ ನಂತರ ಈ ಕಲಾ ಶಾಲೆನ ಗುರು ಅವನೇ ಆಕೂಂತ ನನ್ನ ಆಸೆ."

ಅಮ್ಮಣ್ಣಿ ಮಾಲಿಂಗ ಮಾಮನ ಮೋರೆ ನೋಡ್ತ್. "ಅರ್ತ ಆತ್ ಕೂಸು. ನಿನ್ನ ಹಾಂಗಿರುವ ನಾಲ್ಕ್ ಜನ ಗೂಡೆಗ ಶನಿವಾರ ಇಲ್ಲಿ ಬಂದ್ ಉಳ್ಕಂಡವೆ. ನೀನ್ ಯಾವ ಕಾರಣಕ್ಕೂ ಹಿಂಜರಿಯೋಕೂಂತ ಇಲ್ಲೆ. ಹಣ ಎಷ್ಟ್ ಉಟ್ಟೋ ಅಷ್ಟ್ ಕೊಟ್ಟರೆ ಸಾಕ್. ಕೊಡಿಕೆ ಆಗದಿದ್ದರೂ ಬೇಜಾರಿಲ್ಲೆ. ಆ ತೋಟ ಮತ್ತು ಮನೆ ನನ್ನದೆ. ನನ್ನ ಅಜ್ಜಿ ಎಲ್ಲವ್ಕೆ ಅಡ್ಗೆ ಮಾಡಿ ಹಾಕಿದೆ. ನನ್ನ ಅಪ್ಪ ಮಡಿ ಬ್ರಾಹ್ಮಣ ಆಗಿದ್ದೊ. ಅವು ತೀರಿ ಹೋದ ಮೇಲೆ ನಾನ್ ಜನಿವಾರ ತೆಗ್ದ್‌ಬುಟ್ಟೆ. ಮಾನವ ಸಂಬಂದಗಳಿಗೆ ಅದೊಂದು ನೂಲು ಅಷ್ಟೆ. ನನ್ನ ದೊಡ್ಡಮಂಜಂಗೆ ಉಪನಯನನೇ ಮಾಡ್ಲಿತ್ಲೆ. ಸಣ್ಣಂವ ಬೇಕೇ ಬೇಕೂಂತ ಹಟ ಹಿಡ್ತ್. ಅವಂಗೆ ಶಾಸ್ತ್ರ ಪ್ರಕಾರ ಉಪನಯನ ಮಾಡ್ಸಿಬುಟ್ಟೆ. ಅವರವರ ಸ್ವಾತಂತ್ರ್ಯ ಅವ್ಕೆವ್ಕೆ. ನಿನ್ನಲ್ಲಿ ಪ್ರತಿಬೆ ಉಟ್ಟು. ಇನ್ನ್ ಸಾದನೆಂದ ಮೇಲೆ ಬರೋಕು. ನಿಂಗೆ ಈ ಕ್ಷೇತ್ರಲಿ ಒಳ್ಳೆ ಬವಿಷ್ಯ ಉಟ್ಟೂಂತ ಆ ಮುರಳೀಗೋಪಾಲ ನನ್ನ ಬಾಯಿಲಿ ಹೇಳ್ಸ್‌ತುಟ್ಟು. ಒಳ್ಳದ್ ಹೋಗಿ ಬಾ ಮಗಳೆ."

ಗುರುಗಳ ಮಾತ್‌ಂದ ಅವ್ಳ ಬಾವುಕಳಾಗಿ ಕಣ್ಣ್‌ಲಿ ನೀರ್ ತುಂಬಿತ್. ಅವ್ಳ ಬಗ್ಗಿ ಪಾದಕ್ಕೆ ನಮಸ್ಕಾರ ಮಾಡ್ತ್. ಮನೆಗೆ ಹಿಂತಿರಿಗಿ ಬಾಕಾಕನ ಮಾಲಿಂಗ ಮಾಮ ಹೇಳ್ದೊ.

"ಎಲ್ಲರ್ನ ಸಮಾನಾಗಿ ಕಾಂಬವನೇ ನಿಜವಾದ ಗುರು. ನಮ್ಮ ಗುರುಗಳಿಗೆ ಜಾತಿ ಬೇದನೇ ಇಲ್ಲೆ. ಕಲಾಶಾಲೆಲಿ ನಾಲ್ಕ್ ಗೂಡೆಗ ಪಾಠ ಹೇಳ್ಸಿಕಣ್‌ತ್ತೊಳ. ಗುರುಗಳ ಶಿಷ್ಯರ್ಲಿ ಬ್ರಾಹ್ಮಣರ್, ಶೂದ್ರರ್, ಮೂರು ಜನ ದಲಿತರೊಳೊ. ಆಶ್ಚಯಂತೇಳಿರೆ ಇಬ್ಬರ್ ಮುಸ್ಲಿಮರ್, ಒಬ್ಬ ಕೊಚ್ಚೆ ಕ್ರಿಶ್ಚಿಯನ್. ಬಂದೊವ್ಕೆಲ್ಲಾ ಹೇಳಿಕೊಡುದು ತನ್ನ ದರ್ಮಂತ ಗುರುಗ ತಿಳ್ಕೊಂಡೊಳೊ. ಯಕ್ಷಗಾನಕ್ಕೆ ಎಲ್ಲರ್ನ ಒಗ್ಗೂಡ್ಸುವ ಶಕ್ತಿಯುಟ್ಟು. ಬಡವರ್‌ಂದ ಗುರುಗ ಒಂದು ಪೈಸೆ ತಕಂಬೊದಿಲ್ಲೆ.

ನಿಂಗೆ ಹಂಞ ದೂರಾದೆ. ಇಲ್ಲಿ ತಪಸ್ವಿನಿನ ದೋಣಿಲಿ ದಾಟೋಕಾದೆ. ನಿ
ತಂಗೆನೂ ಬರ್ಲಿ. ಒಬ್ಬಳ ಬದ್‌ಲ್ ಇಬ್ಬರಿದ್ದರೆ ಒಳ್ಳದೆ.

ಆಗ ಅಪ್ಪಂಗೆ ಎರಡ್ನೆ ಮದುವೆ ಇನ್ನೂ ಆಗಿತ್ಲೆ. ಶನಿವಾರ ಮಾಲಿಂ
ಮಾಮ ಕಜೆ ಮನೆಗೆ ಬಂದ್ ಅಮ್ಮಣ್ಣಿ ಮತ್ತು ಬಾಳಕ್ಕನ ಕಲಾಶಾಲೆಗೆ ಕರ್ಕಂಡ
ಹೋಗುವಂತದ್ ಮಾಮೂಲಾತ್. ಮಾಲಿಂಗ ಮಾವ ಬರುವಂದ್ ತ್ಯಾಂಪಣ
ತೀರ್ತದೊಟ್ಟಿಗೆ ಹಾಜರಾಗ್‌ತಿತ್ತ್. ಅಪ್ಪನೂ ಅವರೊಟ್ಟಿಗೆ ಸೇರಿಕಣ್‌ತಿತ್ತ್. ಒಂದ
ಸರ್ತಿ ಯಾರೂ ಇಲ್ಲದಾಕನ ಅಪ್ಪ ಹೇಳ್ತ್.

"ಎಂತದ್ ನಿನ್ನ ಬಾಗವತಿಕೆ? ನಮ್ಮ ಕುಲಲೇ ಇಲ್ಲದ್? ಈ ಸೀಮೆಲ್ಲ
ನೋಡು. ನಮ್ಮ ಜಾತಿಲಿ ಒಬ್ಬ ಸಹ ಯಕ್ಷಗಾನ ಕಲಾವಿದರಿಲ್ಲೆ. ನಿಂಗೆ ಯಾಕೆ ಈ
ಹುಚ್ಚು ಹಿಡ್ತೋ? ನೀನೊಬ್ಬಳ್ ಗೂಡೆ ಆಗಿ ಅಷ್ಟ್ ಜನ ಗಂಡ್‌ಗಳ ನಡ್ವೆ ಕುದ್
ಹಾಡಿಕೆ ನಿಂಗೆ ಮನಸ್ಸ್ ಹೇಂಗೆ ಬಂದದೆ? ನಿನ್ನ ಯಕ್ಷಗಾನನೂ ಬೇಡ
ಮಣ್ಣಂಗಟ್ಟಿಯೂ ಬೇಡ. ನೆಟ್ಟಗೆ ಓದಿಬುಟ್ಟ್ ಮೆಟ್ರಿಕ್ ಪಾಸ್ ಮಾಡಿಕ. ಒಂದು
ಹೈದ ಬಂದರೆ ಈಗಳೆ ಶನಿನ ಕಳ್ಸಿಬುಡೋಕುಂತೊಳೆ."

ಅಪ್ಪನೆದ್‌ರ್ ಅವ್ಳ್ ಏನೂ ಹೇಳ್ತಿಲೆ. ತ್ಯಾಂಪಣ್ಣ ಬಾಕನ ವರದಿ ಒಪ್ಪಿಸಿತ್
ಎರ್ಡ್ ದಿನ ಕಳ್ದ್ ಮತ್ತೆ ತ್ಯಾಂಪಣ್ಣ ಬಾಕನ ಅವನ ಕೈಲಿ ಎರ್ಡ್ ತೀರ್ತದ ಬಾಟ್ಲಿಗಿತ್ತ್
ಅದರ ಕುಡ್ದ್ ಒಳ್ಳ ಲಹಿರಿಲಿರಿಕಾಕನ ತ್ಯಾಂಪಣ್ಣ ಹೇಳ್ತ್.

"ಚಿನ್ನಪ್ಪಾ, ಇಡೀ ಸೀಮೇಲಿ ನಿನ್ನ ಕುಟುಂಬಕ್ಕೆ ಗೌರವ ಅಂತ ಬಂದಿದ್ದರ
ಅದ್ ದಾಸಪಣ್ಣಂದ. ಇದೇ ಜಾತಿಲಿ ಅವರ್ನ ಬುಟ್ಟರೆ ಒಬ್ಬನೇ ಒಬ್ಬ ಕಲಾವಿದ
ತಯಾರಾತಿಲ್ಲೆ. ಈಗ ಅವೂ ಹೋಗಿ ಬುಟ್ಟೋ. ನಾನ್ ಕಾಸಿನೆ. ನೀನ್ ನಿನ್ನ
ಅಪ್ಪ ಮಾಡಿಸಿದರ್ನ ಕೋಳಿಕಟ್ಟಕ್ಕೋ, ಜುಗಾರಿಗೋ ಹೋಗಿ ಮುಗ್ಸಿಯ. ಒಂದು
ಜಾತಿಗೆ ಮರ್ಯಾದೆ ಬಾದು ಯಾರ್‌ಂದ ಹೇಳ್? ಸಾಹಿತಿಗಳ್‌ಂದ, ಕಲಾವಿದರ್‌ಂದ
ನನ್ನ ಕೆಲಸಂದ, ನಿನ್ನ ಚಟಗಳ್‌ಂದ ನಮ್ಮ ಜಾತಿಗೆ ಒಳ್ಳ ಹೆಸ್ರ್ ಬಾಕೆ ಸಾದ್
ಉಟ್ಟೋ? ನಮ್ಮ ಹಿಂದೂ ಸಮಾಜಲಿ ಬ್ರಾಹ್ಮಣರಿಗೆ ಯಾಕೆ ಅಷ್ಟ್ ಗೌರವ
ಉಟ್ಟು ಹೇಳ್? ಅವ್ಕೆ ಓದುವ ಹುಚ್ಚು ಉಟ್ಟು. ಅವರ್ಲಿ ಸಾಹಿತಿಗೊಳೊ
ಕಲಾವಿದರೊಳೊ, ನಮ್ಮಲ್ಲಿ? ಅಮ್ಮಣ್ಣಿ ಬಾಗವತಳಾಗ್ಲಿ. ಬಾಳಕ್ಕನೂ ಯಕ್ಷಗಾನ
ಕಲೀಲಿ. ಆಗಾದ್ರ್ ಹೊಲ್ಸ್ ಜಾತಿ ರಾಜಕೀಯ ಮಾಡಿಕಂಡ್ ಬೂಮಿಗೆ ಬಾ
ಆಗಿ ಯಾಗೋಳು ಉಂಡಾಡಿಗಳಾಗಿ ಅಲ್ದ್‌ಕಂಡಿರೊವುಕೆ ಬುದ್ದಿ ಬಾದು. ನಿನ್ನಂದ
ಆತ್ಲೆ. ನಿನ್ನ ಮಕ್ಕ ಆದ್ರೂ ಯಕ್ಷಗಾನ ಕಲೀಲಿ."

ತ್ಯಾಂಪಣ್ಣನ ಮಾತಿಗೆ ಅಪ್ಪ ಹಾಂತ್ಲೂ ಹೇಳ್ತಿಲೆ ಹೂಂತ್ಲೂ ಹೇಳ್ತಿಲೆ. ಯಕ್ಷಗಾನ ಕಲಿದು ಬೇಡಂತ್ಲೂ ಬಾಯಿಬುಟ್ಟು ಹೇಳ್ತಿಲೆ. ಅವ್ಳ ತಂಗೆನ ಕರ್ಕಂಡ್ ಹೋಕಾಕನ ತಡ್ತೂಲೆ.

ಮಾಲಿಂಗ ಮಾವ ಮನೆಗೆ ಬಾಕನ್ನೆಲ್ಲ ಅವ್ಳ ಹಾಡ್ತಿತ್ತ್. ಮಾವ ಮಣೆ ತಕಂಡ್ ಚಂಡೆ ಬಾರ್ಸ್ತಿದ್ದೊ. ಬಾಳಕ್ಕ ಡೀಂಗಣ ಹಾಕ್‌ತಿತ್ತ್. ಅವ್ಳ ಪುಟ್ಟ ತಂಗೆ ಶಾರದ ಕಣ್ಣ್‌ಬುಟ್ಟು ನೋಡ್ತಿತ್ತ್. ಅವ್ವ ಪ್ರೋತ್ಸಾಹದ ಮಾತ್ ಹೇಳ್ತಿತ್ತ್. ತ್ಯಾಂಪಣ್ಣ ಏನೇನೊ ಅರ್ತ ಹೇಳ್ತಿತ್ತ್. ಅಪ್ಪ ಮನೆಲಿದ್ದರೆ ಸೀದಾ ಎದ್ದ್ ಹೊರ್ಕಡೆ ಹೋಗ್‌ತಿತ್ತ್.

ಪ್ರತಿ ಶನಿವಾರ ಗುರುಗಳ ಕಲಾಶಾಲೆಲಿ ನಡೆವ ತಾಳಮದ್ದ್ಲೆ ಕಾರ್ಯಕ್ರಮಲಿ ಅವ್ಳ ಬಾಗವಹಿಸ್‌ತಿತ್ತ್. ಗುರುಗಳ ಮಾತ್ನ ಕೇಳಿಕಾಕನ ಅವು ಯಕ್ಷಗಾನನೇ ಉಸಿರಾಡ್‌ತ್ತೊಳಂತನೇ ಅವ್ಳಿಗೆ ಅನ್ನಿಸ್‌ತಿತ್ತ್.

"ಯಕ್ಷಗಾನದ ಬಗ್ಗೆ ಮೂಕ್‌ಮುರಿಯೊವು ಕಲೆಂತೇಳಿರೆ ಏನ್‌ಂತ ತಿಳ್ಕಣದ ಮೂಡಂಗ. ಒಮ್ಮೆ ಕಲೆನ ರುಚಿ ಸಿಕ್ಕಿರೆ ಅವು ಬದಲಾದವೆ. ಇದ್ ಆಸ್ತಿ ಪಾಸ್ತಿ ಇಲ್ಲದ ಸಮಾಜಲಿ ಕೆಳಹಂತಲಿದ್ದ ಬಡವರ್‌ಂದ ಹುಟ್ಟಿಕಂಡ ಅಚ್ಚ ಜಾನಪದ ಕಲೆ. ಯಕ್ಷಗಾನ ಸೃಷ್ಟಿಸುವ ಪೌರಾಣಿಕ ಲೋಕನ, ಬಣ್ಣದ ಮತ್ತು ಅರ್ತದ ವೈಬವನ ಬೇರೆ ಯಾವ ಕಲೆಂದಲೂ ಸೃಷ್ಟಿಸಿಕೆ ಸಾದ್ಯ ಇಲ್ಲೆ. ನಿನ್ನ ಅಜ್ಜ ಆಗಾಗ ಇಲ್ಲಿಗೆ ಬಾತಿತ್ತ್. ಅವಂಗೆ ತುಂಬಾ ಪ್ರಸಂಗ ಬಾಯಿಪಾಠ ಬಾತಿತ್ತ್. ನಿತ್ಯ ವ್ಯವಹಾರಲಿ ನಮ್ಮಲ್ಲಿ ಹೆಚ್ಚಿನವು ಸ,ಶ,ಷ ವ್ಯತ್ಯಾಸ ಮಾಡ್ತುದ್ದಲೆ. ಉಷಾ ಅಂತ ಇಲ್ಲಿ ಒಬ್ಳು ಮದ್ದ್ಲೆ ಕಲಿತುಟ್ಟು. ನಿಶಾ ನೃತ್ಯ ಕಲ್ತದೆ. ಅವರ್ನ ಹೆಚ್ಚಿನವು ಉಸ, ನಿಸ, ಅಂತ ಹೇಳ್ವೆ. ಯಕ್ಷಗಾನದಿಂದಾಗಿ ನಿನ್ನ ಅಜ್ಜ ಮಾತಾಡಿಕಾಕನ ಉಚ್ಚಾರ ದೋಷ ಆಗ್‌ತಿತ್ಲೆ. ಸಾಮಾನ್ಯ ಜನ ತಪ್ಪು ಮಾಡಿರೂ ಚಿಂತೆ ಇಲ್ಲೆ. ಶಾಲಾ, ಕಾಲೇಜ್‌ಗಲ್ಲಿ ಕಲ್ಸುವ ಮಾಸ್ಟ್ರಗ ತಪ್ಪು ಮಾಡಿಕಾಗದ್. ಬಾಷಾ ಶುದ್ದಿ ಇಲ್ಲದೊವು ಪಾಠಮಾಡಿರೆ ಶಿಷ್ಯರ ಕತೆ ಏನಾದು ಹೇಳ್?ಮಗಳೇ.

ಅವ್ಳಿಗೆ ಕನ್ನಡ ಮಾಸ್ಟ್ರ ನೆನ್‌ಪಾತ್. ಬಾವನೆಗಳೇ ಇಲ್ಲದ ನೀರಸ ಏಕಸ್ವರಲಿ ಅವು ಗಂಟೆ ಪೂರ್ತಿ ಕುದ್ದ್‌ಕಂಡೇ ಪಾಠ ಮಾಡ್ತಿದ್ದೊ. ಕನ್ನಡ ಕಾವ್ಯ ಪಾಠನ ಅವು ನೀರಸ ಗದ್ಯದ ಹಾಂಗೆ ಮಾಡ್‌ತಿದ್ದೊ. ಕೃತಜ್ಞತೆ ಎಂಬುದರ್ನ ಕೃತಗ್ನತೆ ಅಂತ ಹೇಳ್‌ತಿದ್ದೊ. ವಿಜ್ಞಾನ ಅವರ ಬಾಯಿಲಿ ವಿಗ್ನಾನ ಆತಿತ್ತ್. "ಏಳು ಜನ ಗ್ನಾನಪೀಟ ವಿಜೇತರ್ನ ನೀಡ್ದ ಬಾಸೆ ನಮ್ದು. ಒಟ್ಟೆಗೆ ಯಿಟ್ಟ್ ಇದ್ದಂಗೆ ಸೊಂಸ್ಕ್ರಿತಿಗೆ ಬಾಸೆ. ನಮ್ಮ ಬಾಸೆನ ಯೀಗ ನಾವ್ ಓರಾಟ ಮಾಡಿ ಉಳ್ಸಿಕಂಕು." ಅಂತ

ಆಗಾಗ ಕನ್ನಡದ ಬಗ್ಗೆ ಉಗ್ರ ಅಬಿಮಾನನ ಪ್ರಕಟಿಸ್‌ತಿದ್ದೊ. ಅಬ್ದುಲ್ಲ ಕುಂಞಿನ ಅವು ಅಬ್ದುಲುಕುಯಿಂ ಅಂತನೂ ಕಂಞಪ್ಪ ಗೌಡನ ಕೊಯ್ಯಂಪ ಗೌಡಂತ್ಲೂ ಕರ್ದ್ ನಗೆಪಾಟಲಿಗೆ ಈಡಾಗ್‌ತಿದ್ದೊ. ಅವು ಗುರುಗಳ ಕಲಾಶಾಲೆಗೆ ಬಂದರೆ ಸರಿ ಹೋವೋಂತ ಅವ್ಳಿಗೆ ಅನ್ನಿಸಿತ್.

ಕನ್ನಡ ಮಾಸ್ಟ್ರ ಎಷ್ಟ್ ಮಾತ್ರಕ್ಕೂ ಬಾಕೆ ಒಪ್ಪಿತ್ಲೆ. “ಅಯ್ಯಯಪ್ಪೋ, ಏನ್ ಮಾತ್‌ಂತ ಆಡಿಯಾ ಉಡ್ಗೀ? ಅಲ್ಲಿಗ್ಬಂದ್ ನಿದ್ರೆಗೆಟ್ಟ್ರೆ ನನ್ನ ಎಲ್ತ್ ಏನಾದು ಗೊತ್ತೋ? ನೀನ್ ಸ್ಕೂಲ್ದೇಗೆ ಆಡೀದನ್ನ ಕೇಳಿಯೊಳೆಲ್ಲಾ? ನಿಮ್ಮ ಆಟ ನೋಡ್ಯೋಳೆಲ್ಲ? ಸಿವಾ ಸಿವಾ, ನಿಮ್ಮ ಬಣ್ಣನೋ, ಚೆಂಡೆನೋ, ಆ ಬೊಬ್ಬೆನೋ ಆ ಯಿಂಸೆ ನನ್ನ ಸತ್ರೂಗೂ ಬ್ಯಾಡಪ್ಪ.”

ಕನ್ನಡದ ಮಾಸ್ಟ್ರ ಮಾತ್‌ನ ಗುರುಗಳಿಗೆ ಹೇಳ್ದಕ್ಕೆ ಅವು ಹೇಳ್ದೋ “ಸಾಹಿತ್ಯ ಮತ್ತು ಕಲೆನ ಸವಿಯಕ್ಕೆ ಸಂಸ್ಕಾರ ಬೇಕು. ವಿಶ್ವದ ಶ್ರೇಷ್ಠ ಕಲೆಯಿದ್. ನಮ್ಮದ್‌ಂತೇಳುವ ಅಬಿಮಾನಂದ ನಾನಿದನ್ನ್ ಹೇಳುತ್ತೊಳೇಂತ ಗ್ರಹಿಸ್ಬಡ. ಕೆಲವು ವರ್ಷಗಳ ಹಿಂದೆ ಯಕ್ಷಗಾನದ ಬಗ್ಗೆ ಸಂಶೋದನೆ ಮಾಡೊಂಕೂಂತ ಅಮೆರಿಕದ ಹೆಣ್ಣ್‌ಮಗಳೊಬ್ಬಳ್ ಇಲ್ಲಿಗೆ ಬಂದಿತ್ತ್. ಅವ್ಳ್ ಆಪ್ರಿಕ, ಯುರೋಪು, ಏಷ್ಯಾ, ದಕ್ಷಿಣ ಅಮೇರಿಕಾ ಹಿಂಗೆ ಪ್ರಪಂಚದ ಅನೇಕ ಕಡೆಯೆಲ್ಲಾ ತಿರ್ಗಿ ಕಲಾಪ್ರಕಾರಗಳ್ನ ಅದ್ಯಯನ ಮಾಡಿ ಬಂದವಳ್. ಇಲ್ಲಿ ಮೂರು ತಿಂಗ್ಳ್ ಇದ್ದ್ ಏನೇನೋ ಬರ್ದ್‌ಕಣ್ತಿತ್ತ್. ನಾನ್ ಕನ್ನಡಲಿ ಹೇಳ್‌ತಿದ್ದ್‌ದನ್ನ್ ನನ್ನ ಇಂಜಿನೀಯರ್ ಮಂಜ ಇಂಗ್ಲೀಷಿಗೆ ತರ್ಜುಮೆ ಮಾಡಿ ಅವ್ಳಿಗೆ ತಿಳಿಸ್‌ತಿತ್ತ್. ಅದ್ಯಯನ ಮುಗ್ಸಿ ಅವ್ಳ ದೇಶಕ್ಕೆ ಹೋಗಿ ಯಕ್ಷಗಾನದ ಬಗ್ಗೆ ದೊಡ್ಡ ಪುಸ್ತಕ ಬರ್ದ್ ನಂಗೆ ಕಳ್ಸಿಕೊಟ್ಟತ್. ಅವ್ಳ ಇಂಗ್ಲೀಷ್ ನಂಗೆಲ್ಲಿ ಅರ್ತ ಆಕು ಹೇಳ್? ಮಂಜ ಓದಿ ಸಾರಾಂಶ ತಿಳ್ಸಿತ್. ಅವ್ಳ್ ಬರ್ದದ್ ಏನ್‌ಂತ ಗೊತ್ತೋ? ‘ಯಕ್ಷಗಾನ ವಿಶ್ವದ ಶ್ರೇಷ್ಠ ಕಲೆ’ ಅಂತ. ಇದ್ ನಮ್ಮ ದೇಶದ ಪ್ರತಿಯೊಬ್ಬ ಪ್ರಜೆನೂ ಹೆಮ್ಮೆ ಪಡಕಾದ ಮಹಾನ್ ಕಲೆ. ಆದರೆ ಮಗಳೇ, ದೀಪದ ಕೆಳಗೆ ಯಾಗೋಳು ಕತ್ತಲೆಯಿದ್ದದೆ.”

ನಾಲ್ಕೈದ್ ಬಯಲಾಟಗಳ್ಲಿ ಬಾಗವತಳಾಗಿ ನಿರ್ವಹಿಸಿದ ಮೇಲೆ ಅಮ್ಮಣ್ಣಿಗೆ ಗುರುಗಳ ಮಾತಿನ ಸತ್ಯ ಹಂಞಂಞ ಗೊತ್ತಾಗ್‌ತಾ ಬಾತ್. ಯಕ್ಷರಾತ್ರಿಗಳ್ಲಿ ವಿಸ್ಮಯಕಾರಿ ಬವ್ಯಲೋಕವೊಂದರ ಸೃಷ್ಟಿಯಾಗ್‌ತಿತ್ತ್. ಹಗಲ್ ಕೂಲಿ ಕೆಲ್ಸಮಾಡಿ ಬದ್ಕುವ ಜನಗ ರಾತ್ರಿ ಸ್ವರ್ಗದ ಒಡೆಯ ದೇವೇಂದ್ರನೋ, ಸೃಷ್ಟಿಕರ್ತ ಬ್ರಮ್ಮನೋ, ಪಾಲನ ಕರ್ತ ವಿಷ್ಣುವೊ, ಕೈಲಾಸದ ಶಿವನೋ ಆಗಿ ಮೆರೆಯುದರ್ನ ನೋಡಿ

ಅವ್ಳಿಗೆ ವಿಸ್ಮಯ ಆಗ್‌ತಿತ್ತ್. ಸುರುಸುರಿಗೆ ಅವಳ್‌ಂದ ಬಾಗವತಿಕೆ ಮಾಡ್ಸಿದೊವು ಚಿಕ್ಕಾಸ್ ಕೊಡ್ತಿತ್ಲೆ. ಗೂಡೆಗೊಬ್ಬಳಿಗೆ ಅವಕಾಶ ಕೊಟ್ಟದೇ ದೊಡ್ಡದ್‌ಂತ ಗ್ರಹಿಸಿ ಬೀಗ್‌ತಿದ್ದೋ. ಮಾಲಿಂಗ ಮಾವನ ಮದ್ಯಸ್ತಿಕೆಯಿಂದಾಗಿ ಕೈಯಿಲಿ ನಾಲ್ಕ್ ಕಾಸ್ ಓಡಾಡುವಂಗಾತ್.

ಶಾಲೆಲಿ ಮಾಸ್ಟ್ರಗ ಅವಳ್ನ ವಿಸೇಷ ವಾತ್ಸಲ್ಯಂದ ನಡ್ಸಿಕಣ್‌ತಿದ್ದೊ. ಬಾಳಕ್ಕನೇ ಮುಂದೆ ನಿಂತ್ ಶಾಲೆಲಿ ಗೂಡೆಗಳ್ದೇ ಒಂದು ಯಕ್ಷಗಾನ ತಂಡನ ಕಟ್ಟಿತ್. ಹೈದಂಗ ನಾವೇನ್ ಕಡ್ಮೆಂತ ಪಂತಕಟ್ಟಿ ಮಾಲಿಂಗ ಮಾವಂದ ಕುಣ್ತ ಕಲ್ತ್ ತಮ್ಮದೇ ತಂಡ ತಯಾರ್ ಮಾಡಿಕಂಡೊ. ಶಾಲಾ ಹಬ್ಬದಂದ್ ರಾತ್ರಿ ಎಲ್ಲಾ ಯಕ್ಷಗಾನನೆ. ಹೆಸ್ರೇ ಇಲ್ಲದ ಶಾಲೆನ ಯಕ್ಷಗಾನಂದಾಗಿ ಜನಗ ಗೌರವಿಸುದರ್ನ ಹೆಡ್‌ಮಾಸ್ಟ್ರ ಗೋವಿಂದಯ್ಯನವರ ಗಮನಕ್ಕೆ ಬಂದ್ ಉಬ್ಬಿ ಹೋದೋ. ಶಾಲೆನ ವಾತಾವರಣವೇ ಬದ್ಲಾತ್. ಡಿಸ್ಕೋ, ಬ್ರೇಕ್, ಕ್ಯಾಸೆಟ್ಟ್ ಕುಣ್ತಂತೇಳಿರೆ ವಿದ್ಯಾರ್ತಿಗಳೇ ಮೂಕುಮುರಿಯಕ್ಕೆ ಸುರುಮಾಡ್ದೋ. ವಿದ್ಯಾರ್ತಿಗಳ ಜ್ಞಾನಮಟ್ಟ ಹೆಚ್ಚಾಗಿ ಬಾಷಾಶುದ್ದಿಯಾಗುತ್ತಿರುದು ಮಾಸ್ಟ್ರಗಳ ಗಮನಕ್ಕೂ ಬಾತ್. ಉಚ್ಚಾರ ಸುದ್ದ ಇಲ್ಲದ ಕನ್ನಡ ಮಾಸ್ಟ್ರ ಒಬ್ಬರ್ನ ಬುಟ್ಟರೆ, ಪ್ರತಿಯೊಂದು ಕಾರ್ಯಕ್ರಮದ ಕೊನೆಲಿ ಸಣ್ಣದೊಂದು ಯಕ್ಷಗಾನ ಪ್ರಸಂಗ ಇಸಿಕಣಕ್ಕೂಂತ ಒತ್ತಾಯ ಮಾಸ್ಟ್ರಗಳ್‌ಂದ ಬಾಕೆ ಸುರಾತ್.

ಹೈಸ್ಕೂಲಿನ ಕಡೇ ವರ್ಸದ ತರಗತಿನ ಯಾರಾದರ್ ಒಬ್ಬರ್ನ ವರ್ಸದ ವಿದ್ಯಾರ್ತಿಂತ ಗುರ್ತಿಸಿ ಶಾಲಾ ವರ್ದಂತಿಯಂದ್ ಗೌರವಿಸುದು ಹೆಡ್‌ಮಾಸ್ಟ್ರ ಗೋವಿಂದಯ್ಯನವರ ಕ್ರಮ ಆಗಿತ್ತ್. ಹೆಚ್ಚಾಗಿ ಅದ್ ತುಂಬಾ ಮಾರ್ಕ್ ತೆಗಿಯುವುಕೆ ಸಿಗ್‌ತಿತ್ ಈ ಸರ್ತಿ ಅಮ್ಮಣ್ಣಿಗೆ ಸಿಕ್ಕಿತ್. ಗೋವಿಂದಯ್ಯನವರ್ನ ಜಾತಿವಾದಿಂತ ಮಕ್ಕ ಬೈತಿದ್ದ್‌ದರ್ನ ಅವಳ್ ಗಮನಿಸಿತ್ತ್. ಅವು ಜಾತಿವಾದಿಯಾಗಿದ್ದಿದ್ದರೆ ಆ ಗೌರವ ಅಮ್ಮಣ್ಣಿಗೆ ಸಿಕ್ಕ್‌ತಿತ್ಲೆ. ಒಳ್ಳದರ್ನ ಗುರ್ತಿಸುವ ಹೆಡ್‌ಮಾಸ್ಟ್ರ ದೊಡ್ಡತನ ಅವಳ ಕಣ್ಣ್‌ಲಿ ನೀರ್ ಬರ್ಸಿತ್. ಅವ್ಳ್ ಪ್ರಸಸ್ತಿ ತೆಕಂಡ್ ಗೋವಿಂದಯ್ಯನವರ ಕಾಲ್ ಹಿಡ್ದ್ ನಮಸ್ಕಾರ ಮಾಡ್ತ್. ಅವು ಅಮ್ಮಣ್ಣಿ ಬಗ್ಗೆ ಎರ್ಡ್ ಮಾತಾಡ್ದೋ.

"ಈ ಶಾಲೆಲಿ ಇದ್ ನನ್ನದ್ ಮೂವತ್ತನೇ ವರ್ಷದ ಸರ್ವಿಸ್ಸ್. ಎಂತೆಂತಹಾ ಮೇದಾವಿಗ ಇಲ್ಲಿ ಇದ್ದೊ. ಆದರೆ ಶಾಲೆಗೆ ಶಾಲೆನೇ ಬದಲಾಯಿಸ್ಕೆ ಯಾರ್‌ಂದಲೂ ಆತ್ಲೆ. ಒಬ್ಬಳ್ ಹೆಣ್ಣ್ ಮಗಳ್ ಅದನ್ನ್ ಮಾಡಿ ತೋರ್ಸಿತ್. ನೀವೆಲ್ಲಾ ಯಕ್ಷಗಾನ ಕಲ್ತ್ ನಮ್ಮ ದೇಶದ ನಿಜವಾದ ಸಾಂಸ್ಕೃತಿಕ ಸಂಪತ್ತೇನ್‌ಂತೇಳುದರ ಜಗತ್ತಿಗೆ ತೋರ್ಸಿ ಕೊಡೊಕು." ಎಲ್ಲವು ಜೋರಾಗಿ ಚಪ್ಪಾಳೆ ತಟ್ಟಿದೊ.

ಅಮ್ಮಣ್ಣಿ ಹೈಸ್ಕೂಲು ಮುಗ್ದಮೇಲೆ ಪೇಟೆಲಿರುವ ಜೂನಿಯರ್ ಕಾಲೇಜಿಗೆ ಸೇರ್ತ್. ಹೈಸ್ಕೂಲಿನ ಆತ್ಮೀಯ ವಾತಾವರಣ ಅಲ್ಲಿ ಅವಳ ಗಮನಕ್ಕೆ ಬಾತ್ಲೆ. ಒಂದೊಂದು ಕ್ಲಾಸಿಲಿ ಐದೈದ್ ಡಿವಿಜನ್‌ಗ. ಪ್ರತಿ ಡಿವಿಜನಿಲಿ ನೂರರಷ್ಟ್ ಮಕ್ಕ. ವಯಸ್ಸಾದ ಮಾಸ್ಟ್ರಗ ಕ್ಲಾಸಿಗೆ ಬಾಕನ ಕೆಲವು ಪಡ್ಡೆ ಹುಡ್ಗರ್ ಕಿಟಿಕಿಂದ ಹಾರಿ ಪರಾರಿಯಾಗ್‌ತಿದ್ರೊ. ದೊಡ್ಡ ಕಿಟಿಕಿಗಳಿಗೆ ಸರಳ್‌ಗಳೇ ಇತ್ಲೆ. ಒಬ್ಬ ಮಾಸ್ಟ್ರ ಮೂರು ವಿಸಯಗಳ ಪಾಟ ಮಾಡ್ತಿದ್ರೊ. ಅವು ಯಾವ ವಿಸಯದ ಬಗ್ಗೆ ಹೇಳ್ತಿದ್ರೊಂತ ಯಾರಿಗೂ ಗೊತ್ತಾಗ್‌ತಿತ್ಲೆ. ಸುಮ್ಮನೆ ದಿನಗ ಕಳ್ದ್ ಹೋಗುತ್ತಿರುವಾಂಗೆ ಅವ್ಳಿಗೆ ಅನಿಸ್‌ತಿತ್ತ್.

ಜೂನಿಯರ್ ಕಾಲೇಜಿನ ವರ್ದಂತಿ ದಿನ ಬಾತ್. ಕಾರ್ಯಕ್ರಮ ಬೆಳಿಗ್ಗೆ ಹತ್ತ್ ಗಂಟೆಗೆ ಸುರು ಆತ್. ಯಾರ್‍ಯಾರೋ ರಾಜಕಾರಿಣಿಗ ಎರ್ಡ್ ಗಂಟೆಗಳ ಕಾಲ ಬಾಷಣಗಳ ಸುರಿಮಳೆ ಸುರ್ದ್ ತಲೆಚಿಟ್ಟ್ ಹಿಡ್ಸಿಬುಟ್ರೊ. ಮತ್ತೆ ಒಂದು ಗಂಟೆ ಕಾಲ ಬಹುಮಾನ ವಿತರಣೆ ನಡ್ತ್. ಒಂದು ಗಂಟೆಗೆ ಲಾಂಗ್ ಬೆಲ್ಲ್ ಹೊಡ್ದ ಮೇಲೆ ಎಲ್ಲವು ಮನೆಗೆ ಹೊರ್‍ಟೊ. ಒಂದಷ್ಟ್ ಪಡ್ಡೆ ಹುಡುಗರ್ ಕೊಳ್ಕ್ ಸಿನಿಮಾ ಹಾಡಿಗೆ ಅಶ್ಲೀಲ ರೀತಿಲಿ ಕುಣ್ದೊ. ಅಮ್ಮಣ್ಣಿಗೆ ಅದನ್ನೆಲ್ಲಾ ಸಾಂಸ್ಕೃತಿಕ ಕಾರ್ಯಕ್ರಮಂತ ಒಪ್ಪಿಕಂಬಕೆ ಮನ್ಸಾತ್ಲೆ. "ಕಾಲೇಜ್ ಡೇಗೆ ನಾಟಕ, ಯಕ್ಷಗಾನ ಎಲ್ಲಾ ಇರ್ದುಲ್ಲೇ ಮೇಡಮ್? ಅಂತ ಅರ್ತಶಾಸ್ತ್ರದ ದಡೂತಿ ಗಯ್ಯಾಳಿ ಉಪನ್ಯಾಸಕಿನ ಕೇಳ್ದಕ್ಕೆ ಅವಳ್ "ಅದೆಲ್ಲಾ ಮಾಡಿಕೆ ಇದೇನ್ ಎಲಿಮೆಂಟ್ರಿ ಸಾಲೆನೋ?" ಅಂತ ರೇಗಿ ಬುಡ್ತ್.

ಅಮ್ಮಣ್ಣಿಗೆ ಜೂನಿಯರ್ ಕಾಲೇಜ್ ಹೈಸ್ಕೂಲಿನ ಹಾಂಗೆ ಇಷ್ಟ ಆತ್ಲೆ. ಅಲ್ಲಿ ದೈರ್ಯ ಹೇಳಿಕೆ ಶಾಲಿನಿ ಟೀಚರ್ ಇದ್ರೊ. ಇಲ್ಲಿನ ಮಾಸ್ಟ್ರಗ ಪಾಠಕೆ ಬಂದ್ರೆ ಯಂತ್ರದ ಹಾಂಗೆ ಏನೋ ಮಂತ್ರದ ರೀತಿಲಿ ಮಂತ್ರಿಸಿ ನೋಟ್ಸ್ ಕೊಟ್ಟ್ ಪಾಠ ಮುಕ್ತ್‌ಂತ ಹೇಳ್ತಿದ್ರೊ. ಅವ್ಳಿಗೆ ಏನೂ ಅರ್ಥ ಆಗ್‌ತಿತ್ಲೆ.

ಅವ್ಳ್ ಆ ವರ್ಸ ಪಾಸಾತ್ಲೆ. "ಒಳ್ಳದಾತ್ ಇನ್ನ್ ನೀ ಹೇಂಗೆ ಹಾರಾಡಿಯಾಂತ ನೋಡ್ನೆ." ಅಂತ ಅಪ್ಪ ಹೇಳ್ತ್. ಆ ವರ್ಸ ಅವ್ವ ಗಂಡ್‌ಕೂಸ್‌ನ ಹೆತ್ತತ್. ಆದ್ರೂ ಅಪ್ಪ ಎರಡ್ನೆ ಮದುವೆ ಆಗಿಯೇ ಬುಟ್ಟತ್.

——***——

# ೮. ಆಚಾರ ಇಲ್ಲದ ನಾಲ್ಕೆ

ಅಪ್ಪ ಅಪ್ಪಿ ತಪ್ಪಿ ಕೂಡ ಚಿಕ್ಕವನ ಈ ಮನೆಗೆ ಕರ್ಕಂಡ್ ಬಾತ್ಲೆ. ಇಲ್ಲಿಂದ ಯಾರ್‍ಲೂ ಅಲ್ಲಿಗೆ ಕರ್ಕಂಡೂ ಹೋತ್ಲೆ. ಎರ್ಡ್ ದಿನಕ್ಕೊಮ್ಮೆ ಇಲ್ಲಿಗೆ ಬೊಳ್ಪಿಗೆ ಬಂದ್ ಮದ್ಯಾಹ್ನ ಉಂಡ್ ಹೋಗ್ತಿತ್. ಅಂವ ಬಂದಿರ್‌ಕನೆಲ್ಲಾ ಮನೆಲಿ ಜಗಳವೇ ಜಗಳ. ಒಂದು ದಿನ ಅದ್ ತೀರ ಮಿೂರಿ ಹೋತ್. "ಇದ್ ನನ್ನ ಜಾಗ, ನನ್ನ ಮನೆ, ನೀನ್ ನಿನ್ನ ನಾಲ್ಕ್ ಸಂತಾನದೊಟ್ಟಿಗೆ ಮನೆ ಬುಟ್ಟು ಸುಡುಕ್ಕುಳಿಗೆ ನಡಿ" ಅಂತ ಅಪ್ಪ ಜೋರ್‌ಮಾಡ್ತ್.

ಅವ್ವನ ಬಾಯಿ ಕಟ್ಟಿ ಹೋತ್. ಅಮ್ಮಣ್ಣಿಗೆ ಏನ್ ಹೇಳ್ದೂಂತ್ಲೆ ಗೊತ್ತಾತ್ಲೆ. ಅಷ್ಟ್ರಲ್ಲಿ ಕುಪ್ಪಿ ಹಿಡ್ಕಂಡ್ ತ್ಯಾಂಪಣ್ಣ ಬಾತ್. ಅವ್ನ ಕಂಡ್ ಅಪ್ಪ ಸ್ವರ ಏರ್ಸಿತ್.

"ಇದರ್ನ ಕೊಟ್ಟ್ ನನ್ನ ಕುರೆಮಾಡಿ ಇವಳ್ನ ಇಸಿಕಣಕುತ ಗ್ರಹಿಸಿಯೊಳನಾ? ನಿನ್ನ ಕೊಳ್ಕ್ ತೀರ್ತನ ತಕಂಡ್ ಹೋಗಿ ಚಾಳೆ ಹೊಂಡಕ್ಕೆ ಸುರಿ. ಇಲ್ಲದಿದ್ದರೆ ನಿನ್ನ ತಲೆಗೆ ಹೊಯ್ಕಂಡ್ ತಪಸ್ವಿನಿಗೆ ಹಾರ್."

ತ್ಯಾಂಪಣ್ಣಂಗೆ ಆ ಮನೇಲಿ ಈವರೇಗೆ ಬೊಯ್ದುವೇ ಇತ್ಲೆ. ಅಂವ ನೆಂಟ ಅಲ್ಲ, ಏನೂ ಅಲ್ಲ. ಆದ್ರೆ ನೆಂಟ್ರ್‌ಗಿಂತ ಹೆಚ್ಚಾಗಿ ಮನೆನ ಒಂದು ಬಾಗ ಆಗಿದ್ದಂವ. ಅಜ್ಜನ ಅವನಷ್ಟ್ ಹಚ್ಚಿಕಂಡವೇ ಇತ್ಲೆ. ಅಜ್ಜ ಹೋದಮೇಲೆ ಆ ಸ್ತಾನ ತುಂಬಿಸಿಕೆ ಯತ್ನಿಸ್‌ತಿದ್ದಂವ. ಅವನ ಹೃದಯ ಒಳ್ಳೆದ್. ಅಪ್ಪನ ಹೊಲ್ಸ್ ಬಾಯಿಂದ ಆಡಿಕ್ಕಾಗದ ಮಾತ್ ಬಂದಿತ್ತ್. ತ್ಯಾಂಪಣ್ಣ ಕೆಬಿ ಮುಚ್ಚಿಕಂಡ್ ಮಾತಿನ ಬೇನೆಂದ 'ಕಪಿಲೇಶ್ವರಾ'ಂತೇಳಿ ಅಲ್ಲಿನೆ ಕುದ್ದ್‌ಬುಡ್ತ್. ಅಮ್ಮಣ್ಣಿಗೆ ತಡೆಕಾತ್ಲೆ.

"ಏನ್ ಮಾತ್‌ಂತ ಹೇಳ್ತೊಳ ಅಪ್ಪಾ? ತ್ಯಾಂಪಣ್ಣ ನಾವ್ಗೆ ಅಜ್ಜನ ಹಾಂಗೆ. ಅವರ್ನ ಎಷ್ಟ್ ವರ್ಸಂದ ನೀನ್ ನೋಡ್ತಿಲ್ಲೆ? ಅವ್ವನ ಸ್ವಬಾವ ನಿಂಗೆ ಇನ್ನೂ ಗೊತ್ತಾತ್ಲೆಲೆನೊ? ಹಾಂಗಿದ್ದೂ ಇಂತ ಕೆಟ್ಟ ಮಾತ್ ಆಡಿಕೆ ನಿನ್ನ ನಾಲ್ಕೆ ಹೇಂಗೆ ಮಗ್ಚಿತ್? ಅಂದ್ ಅಜ್ಜನ ಹದ್ನಾರರ ಕುಲೆ ಕಾರ್ಯಕ್ರಮದ ದಿನ ಎರಡ್ನೆ ಮದ್ವೆ ಆದುಲ್ಲೆಂತ ಮಾತ್ ಕೊಟ್ಟಂವ ನೀನ್. ಕೊಟ್ಟ ಮಾತಿಗೆ ತಪ್ಪುವ ನಿನ್ನ ಬಾಯಿಂದ ಇಂತಹ ಹೊಲಸಲ್ಲದೆ ಒಳ್ಳ ಮಾತ್ ಹೇಂಗೆ ಬಾದು ಹೇಳ್?"

"ಸಾಕ್ ನಿನ್ನ ಅದಿಕ ಪ್ರಸಂಗ. ನಿನ್ನ ಅವ್ವನ ನಾಟಕ ನಂಗೆ ಗೊತ್ತಿಲ್ಲೆಂತ ತಿಳ್ದೊಳನ? ಹದ್ನಾರರಂದ್ ಇವ್ಳ ಮೈಮೇಲೆ ಅಜ್ಜ ಬಂದ್ ಅಸ್ಟ್ ಜನರೆದ್‌ರ್ ನನ್ನ ಮರ್ಯಾದೆ ತೆಗ್ತಲ್ಲಾ? ಆಗ ನಾನ್ ಎರಡ್ನೆ ಮದ್ವೆ ಆಗಿತ್ಲೆ. ಈಗ ಆಗಳೆ.

ದೈರ್ಯ ಇದ್ದರೆ ನಿನ್ನ ಅಜ್ಜ ಈಗ ಬರ್ಲಿ. ಇವ್ಳ್ ನಿಜಕ್ಕೂ ಪತಿವೃತಾ ಸಿರೋಮಣಿಯಾಗಿದ್ದರೆ ಅಜ್ಜ ಈಗ ಅವ್ಳ ಮೈಮೇಲೆ ಬಂದ್ ನನ್ನ ವಿಚಾರಿಸಿಕಣಲಿ."

ಅಜ್ಜ ಯಾಕೆ ಬರೋಕು? ನೀನ್ ಮಾಡ್ದ ಮಹಾ ಕಾರ್ಯನ ಮೆಚ್ಚಿಕಂಬಕೋ? ಹದ್ನಾರರ ಕುಲೆ ಕಾರ್ಯಕ್ರಮ ಆಗಿ ವೈಕುಂಟಕ್ಕೆ ಹೋದ್ರೊವು ಮತ್ತೆ ಯಾರ ಮೈಮೇಲಾದ್ರ್ ಬಂದೆವೆನೋ? ಅದರ್ಲೂ ನೀನ್ ಹೇಳ್ದಾಂಗೆಲ್ಲ ಬಾಕೆ ಅಜ್ಜ ಏನ್ಂತ ತಿಳ್ದಳ? ಅಜ್ಜಂಗೆ ಕೊಟ್ಟ ಮಾತ್ನ ನೀನ್ ಮುರ್ದದಕ್ಕೆ ಅವು ವೈಕುಂಟಲಿ ಎಷ್ಟ್ ಹಿಂಸೆ ಅನುಬವಿಸುತ್ತೊಳೊನೋ ಏನೋ? ಕೊಟ್ಟ ಮಾತ್ನ ಉಳ್ಸಿಕಂಬಕೆ ನಿನ್ನಿಂದಾತ್ಲೆ. ಅಲ್ಲಿ ಚಿಕ್ಕವ್ವನೊಟ್ಟಿಗೆ ನೆಮ್ಮದಿಂದ ಇದ್ದ್‌ಬುಡು. ಇಲ್ಲಿಗೆ ಯಾಕೆ ಬಂದ್ ನಮ್ಮ ಮನ್ಸ್‌ನ ಹಾಳ್ ಮಾಡ್ದು? ನಮ್ಮನ ನಮ್ಮ ಪಾಡಿಗೆ ಬುಟ್ಟ್‌ಬುಡು. ನಾವ್ ಹೇಂಗಾದ್ರ್ ಬದ್ಕಿಕಂಡವೆ."

ಅಪ್ಪನ ಸ್ವರ ಏರ್ತ್.

"ಏ ಬಜಾರಿ? ಹುಟ್ಸಿದ ಅಪ್ಪನೆದ್‌ರ್ ನಿತ್ತ್‌ಕಂಡ್ ಎದ್‌ರ್ ಮಾತಾಡಿಯೆನೊ? ಎತ್ತಿ ಎಸ್ದನೆ ತಪಸ್ವಿನಿಗೆ. ಇದ್ ಯಾರ ಜಾಗಂತ ತಿಳ್ಕೊಂಡೊಳ? ನಿನ್ನ ಅವ್ವ ಅವ್ಳ ಅಪ್ಪನ ಮನೆಂದ ತಂದದಲ್ಲ. ನನ್ನ ಅಪ್ಪ ಕಷ್ಟಪಟ್ಟ್ ಮಾಡ್ದ್ ಇದ್. ಇದ್ ಈ ಸ್ತಿತಿಗೆ ಬರೋಕುಂತಾದರೆ ಎಸ್ಟ್ ಬೆವರ್ ಸುರ್ಸಿಯೊಳೇಂತ ಗೊತ್ತುಟ್ಟೋ? ನಾಲ್ಕ್ ದಿನದ ಟೈಮು ಕೊಟ್ಟನೆ. ನಿನ್ನ ಅವ್ವನೊಟ್ಟಿಗೆ ನೀವೆಲ್ಲಾ ಮನೆ ಬುಟ್ಟ್ ಹೋಗದಿದ್ದರೆ ಎಲ್ಲರ್ನು ತುಂಡು ತುಂಡು ಮಾಡಿ ಹಳ್ಳಕ್ಕೆ ಚೆಲ್ಲಿನೆ. ತಡೆವು ಯಾರ್ಂತ ನೋಡ್ನೆ.

ಮರ್ಟ್‌ಕಂಡ್ ಕುದ್ದಿದ್ದ ಅವ್ವ ಒಮ್ಮೆಗೆ ಎದ್ದ್ ನಿಂತತ್.

"ನೀವ್ ಅಪ್ಪಂಗೆ ಹುಟ್ಟಿದವಾದರೆ ಕಡ್ದ್ ಚೆಲ್ಲಿ ನೋಡೊನೊ. ನಿಮ್ಮ ಆಸ್ತಿಗಡ. ಇದ್ ನನ್ನ ಮಾವ ಮಾಡ್ದ ಆಸ್ತಿ. ಇದರ್ಲಿ ಶಿವಪ್ಪ ಬಾವಂಗೂ ಪಾಲುಟ್ಟು. ನೀವು ಹುಟ್ಸಿದ ಮಕ್ಕಳಿಗೂ ಹಕ್ಕುಟ್ಟು. ನನ್ನ ಬೆವರೂ ಇಲ್ಲಿ ಬಿದ್ದುಟು. ನಂಗೂ ಪಾಲುಟ್ಟು, ನೀವು ಇಸಿಕಂಡ ಆ ಹೊಲ್ಸ್ ರಂಡೆ ಉಟ್ಟಲ್ಲಾ? ಅವ್ಳಿಗೆ ಇದರ್ಲಿ ಒಂದಿಂಚೂ ಸಿಕ್ಕಿಕಿಲ್ಲೆಂತ ಗೊತ್ತಿರ್ಲಿ. ನಾಲ್ಕ್ ಮಕ್ಕಳ ಅಪ್ಪನ ಕಟ್ಟಿಕಂಬಕೆ ಮನಸ್ಸ್ ಬಾತಲ್ಲ ಆ ಹಲ್ಕಟ್ಟ್ ಮುಂಡೆಗೆ. ಅದಕ್ಕಿಂತ ಅವ್ಳ್ ತಪಸ್ವಿನಿಗೆ ಹಾರ್ತಿದ್ದರೆ ಆ ಸೂಳೆಗೆ ಹೆಚ್ಚ್ ಸುಖ ಸಿಗ್ತಿತ್. ನಿಮ್ಮ ಸಂಸಾರ ಅಲ್ಲಿ ಆಸ್ತಿ ಇಲ್ಲಿ ಗಡ. ಬನ್ನಿ, ನೀವ್ ಗಂಡ್ಸಾದರೆ ನನ್ನ ಮೈಮುಟ್ಟಿ ನೋಡಿ. ನಂಗೆ ಯಾವ ಗತಿನೂ ಇಲ್ಲೆಂತ ನಿಮ್ಮ ಗ್ರಹಿಕೆನೋ? ತಮ್ಮಂಗೆ ಹೇಳಿ ನಿಮ್ಮ ಲಾಕಪ್ಪಿಗೆ ಹಾಕ್ಸಿಬುಟ್ಟನೆ. ಆಗ ನೀವ್ಗೆ ಗೊತ್ತಾದೆ. ನಿಮ್ಮ ಮುಸುಂಡಿಗೆ ಪೋಲೀಸ್‌ನವು ಉಗ್ದ್, ಚಡ್ಡಿ ಹರಿಯುವ ಹಾಂಗೆ ನಿಮ್ಮ ಕೊಳ್ಕ್ ಕುಂಡೆಗೆ ಬೂಟ್ಸ್ ಕಾಲ್‌ಲಿ ಒದ್ದರೇನೇ ನೀವ್ಗೆ ಬುದ್ದಿ ಬಾದು."

ಪೋಲೀಸರ ಸುದ್ದಿ ಬಾಕನ ಅಪ್ಪ ಸುಮ್ಮನಾತ್. ಅಮ್ಮನ ತಮ್ಮ ಒಬ್ಬ ಪೋಲೀಸ್‌ನವ ಎಂಬ ಸಂಗತಿ ನೆನ್ಪಾಕನ ಅವಂಗೆ ಹೆದ್ರಿಕೆ ಸುರಾತ್. ಅವ್ವ ತಿರ್‍ಗಿ ಬಿದ್ದ ಮೇಲೆ ವಾದ ಮಾಡುದರ್ಲಿ ಅರ್ತ ಇಲ್ಲೆಂತ ಅವಂಗೆ ಅನ್ನಿಸಿರೋಕು. ಅವ್ವನ ಒಮ್ಮೆ ನೋಡಿ ಹೂಂಕಾರ ಮಾಡಿ ಹೊರ್‍ಕಡೆ ನಡ್ತ್. ಬಾಳಕ್ಕ ಸುಮ್ಮನೆ ಜಗಲ್‌ಲಿ ಕುದ್ದಿತ್ತ್. ಅವಳ್ನ ಕಣ್ಣ್ ಕೆಕ್ಕರಿಸಿ ನೋಡಿ:–

"ನೀನೊಬ್ಬಳ್ ಬಾಕಿ ಇನ್ನ್ ಕಜೆ ಮನೆಗೆ ಹೆಸ್‌ರ್ ತಾಕೆ. ಬಾರಿ ಕುಣ್ದಿಯ ಗಡ. ಆ ಬೆವರ್ ನಾತ ಬರುವ ಗೋಣಿ ಅರಿವೆ ಕಟ್ಟಿಕಂಡ್ ಕುಣಿ. ನಿನ್ನ ರಾಗದ ಮಲ್ಲಿ ಅಕ್ಕ ಹಾಡ್ಲಿ. ನೀನ್ ಕುಣಿ. ಹೈದಂಗಳ್ನೂ ಕುಣ್ಸ್. ಗೂಡೆಗ ಹೀಂಗೆ ಮಾಡುದರ್‍ನ ನಮ್ಮ ಜಾತಿಲಿ ನಾ ಈವರ್‍ಗೆ ಕಂಡತ್ಲೆ. ನೀವೆಲ್ಲಾ ಹಾಳಾಗಿ ಹೋಗಿ."

ಬಾಳಕ್ಕ ಎದ್‌ರ್ ಹೇಳ್ತ್‌ಲೆ. ಅಪ್ಪ ಅಂಗಳಕ್ಕೆ ಕಾಲಿಸುದೂ ಕತ್ತಿ ಹಿಡ್‌ಕಂಡ್ ತ್ಯಾಂಪಣ್ಣ ಎದ್‌ರ್ ಬಾದೂ ಸರೀ ಆತ್. ಅಪ್ಪ ಹೆದ್ರಿ ಒಂದು ಹೆಜ್ಜೆ ಹಿಂದೆ ಇಸಿತ್.

"ನಾನ್ ನಿನ್ನ ಅಪ್ಪಂಗೆ ಸಮಾನ. ನಂಗೆ ಹೀಂಗೆ ಹೇಳಿಕೆ ನಿಂಗೆ ಮನಸ್ಸ್ ಬಾತಲ್ಲಾ ಚಿನ್ನಪ್ಪಾ? ನೀನೇನ್ ಮನುಷ್ಯನೋ ಪ್ರಾಣಿನೋ? ಆಗ ಮಾತ್‌ಂದ ನನ್ನ ಕೊಂದುಬುಟ್ಟೆ. ಈಗ ನಿಜವಾಗಿ ಕೊಂದುಬುಡು. ತಕ ಕತ್ತಿ. ಏನ್ ನೋಡಿಯ ತಕ. ಇಂತ ಮಾತ್‌ನ ಕೇಳ್ದ ಮೇಲೂ ನಾನ್ ಬದ್ಕೊಕೋ?"

ಅಪ್ಪಂಗೆ ಕಕ್ಕಾಬಿಕ್ಕಿ ಆತ್. ಒಂದು ಕ್ಷಣ ಅಂವ ಬೆಪ್ಪನ ಹಾಂಗೆ ನಿಂತ್ ಬುಡ್ತ್. ಮರುಕ್ಷಣ ಅಂವ ತ್ಯಾಂಪಣ್ಣನ ಕೈನ ಸರ್‍ಸಿ ಅಂಗಳಕ್ಕೆ ಕಾಲಿಸಿತ್. ಮೆಟ್ಟುನೂ ಮರ್‍ತ್ ಓಡ್ತ್.

ಅಪ್ಪ ಓಡ್ದದರ ನೋಡಿ ಅವ್ವ ಹೇಳ್ತ್ "ನಾನ್ ಗಂಡ್‌ಕೂಸು ಹೆತ್ತ ಮೇಲೂ ಅವು ಇನ್ನೊಬ್ಬಳ್ನ ಕಟ್ಟಿಕಂಡೊ. ಅವ್ಕೆ ಬೇಕಿದ್ದದ್ ಗಂಡ್‌ಮಂಜ ಅಲ್ಲ. ಒಂದು ಹೊಸ ಹೆಣ್ಣ್. ಈಗ ಆ ಬೋಸುಡಿಗೆ ಚಿನ್ನ ಹಾಕಿ ಮೆರ್‍ಸಿಕೆ ಈ ಜಾಗದ ಉತ್ಪತ್ತಿ ಬೇಕು. ನಮ್ಮನ ಹೊರಗೆ ಹಾಕಿ ಆ ರಂಬೆನ ಇಲ್ಲಿಗೆ ತಂದ್ ಮೆರ್‍ಸುವೆಗಡ. ಈಗೇನೋ ಓಡಿ ಹೋದೊ. ಇದ್ ಇಲ್ಲಿಗೇ ಮುಗಿದುಲೆ ತ್ಯಾಂಪಣ್ಣ. ಅವು ಮತ್ತೆ ಬಂದೇ ಬಂದವೆ. ಮತ್ತೆ ಹೊಲ್ಸ್ ಮಾತ್ ಹೇಳ್ವೆ. ಏನಾದ್ರೂ ಒಂದಾದೆ ಕಂಡಿತ. ಒಂದೊ ನಾನ್, ಇಲ್ಲೆಂದ್ರೆ ಅವು. ಅವು ಮೈಮುಟ್ಟಿಕೆ ಬಂದರೆ ನಾನ್ ಹಿಂದೆ ಮುಂದೆ ನೋಡ್ದುಲೆ. ಕತ್ತಿಂದ ಕಡ್ದನೆ. ಅವ್ಕೆ ನಾನ್ ಬೇಡಗಡ. ಇನ್ನ್ ನಾನೇಕೆ ಆಸೆ ಇಸಿಕಣಕು?"

ತ್ಯಾಂಪಣ್ಣ ಕತ್ತಿನ ಪಕ್ಕಲಿ ಇಸಿಕಂಡ್ ಜಗ್‌ಲ್ಲ್‌ಲಿ ಕುದ್ದಿತ್. ಎರ್ಡೂ ಕೈಗಳ್‌ಂದ ತಲೆ ಹಿಡ್ಕಂಡ್ ಯೋಚಿಸ್‌ತಿತ್ತ್. ಅಪ್ಪನ ಒರ್ರು ಮಾತ್‌ಗಳ್‌ಂದಾದ ಬೇನೆ ಮೋರೆಂದ ಮಾಸಿತ್ಲೆ. ಅಮ್ಮಣ್ಣಿ ಅವನನ್ನೇ ನೋಡ್ತಿತ್ತ್. ಇಷ್ಟೆಲ್ಲಾ ರಾಮಾಯಣ ಆದಮೇಲೆ ಅಂವ ಇನ್ನ್ ಮುಂದೆ ಈ ಮನೆಗೆ ಬಾದೋ? ಒಬ್ಬ ಹಿರಯಂವ ಆಗಿ ಅಪ್ಪನ ಹಂಞದ್ರ್ ಹತೋಟಿಲಿ ಇಸಿಕೆ ತ್ಯಾಂಪಣ್ಣಂದ ಮಾತ್ರ ಆದು. ಅವನೇ ಮನೆಗೆ ಬರದಿದ್ರೆ ಮತ್ತೆ ಅಪ್ಪನ ಕೇಳುವವೇ ಇಲ್ಲೆ. ಈಗೇನೋ ಅವ್ವ ಅಪ್ಪಂಗೆ ಕಡಿಯುವ ಮಾತಾಡ್ದೆ. ಅಪ್ಪನ ಕಡಿಯಕೆ ಅವ್ಳಿಗೆ ಮನಸ್ಸ್ ಬಾದೋ? ಒಂದುವೇಳೆ ಬಂದ್ರೂ ಸಾದ್ಯ ಆದೋ? ಅಪ್ಪ ಸರಿಯಾಗಿ ದವ್ಡೆಗೆ ಒಂದೇಟ್ ಬಿಗ್ದರೆ ಅವ್ವ ಇಲ್ಲೆ. ಇನ್ನೇನ್ ಗತಿ?

ತ್ಯಾಂಪಣ್ಣ ಏನೋ ಒಂದು ನಿರ್ಣಯಕೆ ಬಂದ ಹಾಂಗೆ ಎದ್ದ್ ನಿಂತತ್. "ನೋಡು ಅಮ್ಮಣ್ಣಿ, ನೀನ್ ಮತ್ತು ನಿನ್ನ ತಂಗೆ ಈಗಲೇ ನನ್ನೊಟ್ಟಿಗೆ ಹೊರ್ಡಕು. ನೀವೀಗ ಪೋಲೀಸ್ ಸ್ಟೇಶನಿಗೆ ಹೋಗಿ ಚಿನ್ನಪ್ಪನ ಮೇಲೆ ಕೇಸ್ ಕೊಡಕು. ನಿನ್ನ ಪೋಲೀಸ್ ಮಾವಂಗೆ ಅಲ್ಲಿಂದಲೇ ಪೋನ್ ಮಾಡ್ನೊನೊ. ಅವಂಗೂ ವಿಸಯ ಗೊತ್ತಿರ್ಲಿ. ಇನ್ನ್ ನಿನ್ನ ಚಿಕ್ಕಪ್ಪ ಉಟ್ಟಲ್ಲ ಶಿವಪ್ಪ, ಅವಂಗೆ ನಾನೇ ಪೋನು ಮಾಡಿ ಹೇಳ್ನೆ. ನಿನ್ನ ಅಪ್ಪನ ಕೇಳೋವು ಯಾರೂ ಇಲ್ಲೆಂತೇಳಿ ಬೀಜದ ಹೋರಿನ ಹಾಂಗೆ ಆಡ್ದೆ: ಪೋಲೀಸ್‌ನವುಕೆ ಹೇಳಿ ಅವನ ತರ್ಡ್ ಒಡ್ಸಿನೆ. ನಾಲ್ಕ್ ಪೊಳಿ ಬಿದ್ದರೆ ಅಂವ ಸರಿದಾರಿಗೆ ಬಂದದೆ." ತ್ಯಾಂಪಣ್ಣನ ಮಾತ್ ಕೇಳಿ ಅಮ್ಮಣ್ಣಿಗೆ ಹೆದ್ರಿಕೆ ಆತ್.

"ತ್ಯಾಂಪಣ್ಣ ನಾವ್ ಬೆಳ್ದ ಗೂಡೆಗ. ಪೋಲೀಸ್ ಸ್ಟೇಶನ್‌ಗೆ ಹೋದು ಸರಿಯಾದೆನೊ? ಅಪ್ಪನ ಮೇಲೆ ಕೇಸ್ ಕೊಟ್ಟರೆ ಪೋಲೀಸ್‌ನವು ಅವನ ಎಳ್ಕಂಡ್ ಹೋಗಿ ಹುಡಿ ಮಾಡದೆ ಬುಟ್ಟವೇನೋ? ಇದೆಲ್ಲ ಬೇಕೋ ತ್ಯಾಂಪಣ್ಣ?"

"ಪೋಲೀಸರ ಬಗ್ಗೆ ಹೆದ್‌ರ್ಕೆ ಬೇಡ. ಅವ್ ಏನ್ ಮನ್ಸರಲ್ಲನಾ? ಸ್ಟೇಶನ್‌ನಲ್ಲಿರುವ ಪೋಲೀಸ್ರಲ್ಲಿ ಹೆಚ್ಚಿನವು ನನ್ನ ಗುರ್ತದವು. ಮತ್ತೆ ಹೆಂಗ್ಸರ್ನ ವಿಚಾರಿಸಿಕೆಂತೇಳಿ ಮಹಿಳಾ ಪೋಲೀಸರೊಳೊ. ಈ ತ್ಯಾಂಪಣ್ಣನ ಕನೆಕ್ಷನ್ನ್ ಎಷ್ಟ್‌ಂತ ನಿಂಗೇ ಗೊತ್ತಾದೆ. ಇನ್ನ್ ಚಿನ್ನಪ್ಪಂದ ಜೀವಬಯ ಉಟ್ಟೂಂತ ನೀನ್ ಮತ್ತು ಬಾಳಕ್ಕ ಕೇಸ್ ಕೊಡಕಲ್ಲದೆ ನಾನ್ ಕೊಡಿಕ್ಕಾದೆನೊ? ಆಗಳೇ ಅವ್ನ ಮೂಳೆ ಇಲ್ಲದ ನಾಲ್ಕೆ ಏನೇನೊ ಬೊಗುಳಿಟ್ಟು. ನಾನೇ ಕೇಸ್ ಕೊಟ್ಟರೆ ಅಂವ ಪರಂಗಿ ಹಿಡ್ದ ಕಂತ್ರಿ ನಾಯಿಯ ಹಾಂಗೆ ಊರಿಡೀ ಊಳಿಟ್ಟ್‌ಕಂಡ್ ಹೋದು. ನಾವ್

ಪುಕಾರ್ ಕೊಡದಿದ್ದರೆ ನಿನ್ನ ಅಪ್ಪ ಮತ್ತೆ ಬಂದೇ ಬಂದದೆ. ನಿಮ್ಮೆಲ್ರನ್ನ್ ಒದ್ದ್ ಹೊರಗೆ ಹಾಕಿದೆ. ನಾವ್ಯಾರೂ ಇಲ್ಲದಾಕನ ಬಂದರೆ ನಿನ್ನ ಅವ್ವನ ಕೊಂದೇ ಬುಡ್ದು. ನಾವ್ಗೀಗ ಬೇರೆ ದಾರಿನೇ ಇಲ್ಲೆ ಅಮ್ಮಣ್ಣಿ."

ಸ್ಟೇಶನ್‌ಲಿ ಎಲ್ಲವೂ ತ್ಯಾಂಪಣ್ಣನ ಮಾತಾಡ್ಸ್‌ವವೆ. "ಏನ್ ತ್ಯಾಂಪಣ್ಣಾ ನಮ್ಮನ್ನೆಲ್ಲಾ ಮರ್ತೆ ಬುಟ್ಟನೊ ಹೇಂಗೆ? ಚೀಲಲಿ ತೀರ್ತ ಏನಾದ್ರ್ ಉಟ್ಟೋ?"

ತ್ಯಾಂಪಣ್ಣ ನಗಾಡಿಕಂಡ್ "ಉಟ್ಟೋ, ಉಟ್ಟೋ? ನಿಮ್ಮ ಮರೀದಾದ್ರೂ ಹೇಂಗೆ? ಆದ್ರೆ ಏನ್ ಮಾಡ್ದು ಹೇಳಿ? ಪ್ರಾಯ ಆತಲ್ಲ ಕರ್ಮ. ಮುಂದೆನ ಹಾಂಗೆ ಈಗ ದುಡಿಯಕೆ ಆದುಲ್ಲೆ ಸಾಮಿೊ." ಅಂತ ಸಮಜಾಯಿಸಿ ಪುಕಾರ್ ಬರ್ಸಿಕೇಂತ ರೈಟ್ರ ಹತ್ರ ಹೋತ್.

"ಯಾರಯ್ಯ ಈ ಹೆಣ್ಮಕ್ಕ? ಇವ್ಕೇನ್ ಕೆಲ್ಸ ಸ್ಟೇಶನ್‌ಲಿ?"
ಗಟ್ಟಿ ಸ್ವರ ಕೇಳಿ ತ್ಯಾಂಪಣ್ಣ ಅತ್ತ ನೋಡ್ತ್. ಕುದ್ಕಂಡ್ ಹರ್ಟೆ ಹೊಡಿತಿದ್ದ ಪೋಲೀಸರ್ ಎದ್ದ್‌ನಿಂತ್ ರಪಕ್ಕನೆ ಸೆಲ್ಯೂಟ್ ಹೊಡ್ದೋ. ತ್ಯಾಂಪಣ್ಣನೊಟ್ಟಿಗೆ ಅಮ್ಮಣ್ಣಿ ಮತ್ತು ಬಾಳಕ್ಕ ಕೈ ಮುಗ್ದೋ. ರೈಟ್ರ್ ಎಲ್ಲಾ ವಿಷಯ ಅವ್ಕೆ ತಿಳ್ಸಿದೊ.

"ನೋಡಿ ಹೆಣ್ಮಕ್ಕ ಸ್ಟೇಶನ್‌ಗೆ ಬಂದರೆ ಲೇಡೀ ಕಾನ್‌ಸ್ಟೇಬಲ್ಸ್ ಮಾತಾಡ್ಸೋಕು. ಯಾವನವ ಚಿನ್ನಪ್ಪ? ಒದ್ದ್ ಎಳ್ಕಂಡ್ ಬನ್ನಿ ಆ ಹಲ್ಕಟ್ಟ್ ಮಂಡೇ ಮಂಞನ. ಲಾಕಪ್‌ಲಿ ನಾಲ್ಕ್ ದಿನ ಇದ್ರೆ ಸರಿಹೋದೆ. ಮದ್ವೆಗೆ ಬಂದ ಹೆಣ್ಮಕ್ಕಳ್ನ ಮನೆಲಿ ಇಸಿಕಂಡ್ ಮತ್ತೆ ಮದ್ವೆ ಆಗುಟ್ಟಾ? ಆ ಬೋಳಿಮಂಞ? ಅವ್ನ ತರ್ಡ್ ಒಡ್ದನೆ. ಏನ್ ಹಾಳ್ ಊರ್ರಿ ಇದ್? ಬರೀ ಇದೇ ಆಗೋತು. ಕಾಯ್ಸುದು, ಇಸ್ಪೀಟಾಡ್ದು, ಬಂದ್ ಮಾಡಿ ಮರಕಡ್ದ್ ದಾರಿಗೆ ಅಡ್ಡ ಹಾಕುದು, ಎರ್ಡೆರಡ್ ದಾರಿಗೆ ಅಡ್ಡ ಹಾಕುದು, ಎರ್ಡೆರಡ್ ಮದ್ವೆಯಾದು. ಆ ಬೋಳಿಮಂಞನ ಕುಂಡೆಗೆ ಬಿಸ್ನೀರ್ ಬುಟ್ಟನೆ, ಬರ್ಲಿ."

ಎಸ್.ಐ ಮಾತಿನ ದಾಟಿಗೆ ಅಮ್ಮಣ್ಣಿ ಕಂಗಾಲಾತ್. "ಸರ್, ನಮ್ಮಪ್ಪ ತಪ್ಪು ಮಾಡಿರ್ದು ನಿಜ. ಆದ್ರೆ ಹೊಡಿಬಡಿ. ನಾಲ್ಕ್ ಮಾತ್ ಹೇಳಿ ಬುಟ್ಟುಬುಡಿ. ಅಂವ ಅಲ್ಲಿ ಚಿಕ್ಕವನೊಟ್ಟಿಗೆ ಹಾಯಾಗಿರ್ಲಿ. ಅಂವ ಇನ್ನ್ ನಮ್ಮ ತಂಟೆಗೆ ಬಾರದಿದ್ರೆ ಸಾಕ್. ನಮ್ಮ ಪಾಡಿಗೆ ನಾವಿದ್ದವೆ."

ನೀನೊಬ್ಬ್ ಹೆಣ್ಮಗಳ್. ನಿಂಗಿರ್ವ ಬುದ್ದಿಲಿ ಕಾಲಾಂಶದಷ್ಟ್ ನಿನ್ನ ಅಪ್ಪಂಗಿಲ್ಲೆ. ಈ ಊರ್ಲಿ ಜಾತಿ ಸಂಗಗಳುಟ್ಟು, ದರ್ಮಪರಿಷತ್ತ್ ಉಟ್ಟು, ಅದೇನೋ ದಳ, ಸೇನೆ ಮಾಡ್ಕಂಡೊಳರಿ. ಎಲ್ಲಾ ಸಬೆ ನಡ್ಸಿ ಊಟಮಾಡಿ, ಕೇಕೆ ಹಾಕಿ ಕುಣ್ದ್

ಕುಪ್ಪಳ್ಸಿಕೆ ಮಾತ್ರ, ಊರ್ಗೆ ಒಳ್ಳದಾಗುವ ಒಂದೇ ಒಂದು ಕೆಲ್ಸ ಮಾಡ್ದುಟ್ಬೋ? ಎಲ್ಲಾ ತಮ್ಮ ತಮ್ಮ ಕಾಲ್ ಬುಡಕ್ಕೇ ಕಸ ಕೇರಿಕಂಬ ಕೋಳಿಗ. ನೀವ್ ಹುಡ್ಗಿಯರ್ಗೆ ಇಷ್ಟ್ ಉಪದ್ರಾಗುಟು. ನಿನ್ನವ್ವನ ಕೊಲ್ಲಿಕೆ ನಿನ್ನಪ್ಪ ಬರ್ತುಟ್ಟು. ನಿಮ್ಮದೊಂದು ಜಾತಿ ಸಂಗ ಉಟ್ಟಲ್ಲ? ನಿಮ್ಮೊವು ಯುವ ಜಾತಿ ಸಂಗ ಮಾಡ್ಕೊಂಡೊಳೋ ಅಂತ ಕೇಳ್ದೆ. ಅದೇನ್ ಮಾಳಿ ತೋಡ್ದುಟ್ಬೊ? ದೇಶಕ್ಕೆ ಕನ್ನ ಹಾಕುವ ಪುಡಾರಿಗಳಿಗೆ ಸನ್ಮಾನ ಮಾಡ್ರೆಲ್ಲಾ ನೀವು ಬುದ್ದಿಗೆಟ್ಟವು. ನನ್ನ ಸರ್ವಿಸಿಲಿ ಎಷ್ಟೋ ಊರು ಕಂಡಳೆ. ಎರಡ್ನೆ ಮದ್ವೆಯಾಗುದರ್ಲಿ ನಿಮ್ಮೊರ್ದೆ ದಾಕ್ಲೆ ಕಣಮ್ಮ. ಸೋಸಣೆಗೆ ಒಳಗಾದೊವು ಜಾತಿ ವಿರೋದಿ ಸಂಗ ಕಟ್ಟಿಕಂಡ್ರೇನೇ ದೇಶ ಸರಿಯಾದು. ನೋಡಮ್ಮ ನಾನ್ ಕಾನೂನು ಮತ್ತು ವ್ಯವಸ್ಥೆ ಪಾಲಿಸಿಕ್ಕೆಂತೇಳಿಯೇ ಇರಂವ. ನಂಗೆ ನನ್ನ ಡ್ಯೂಟಿನೇ ಜಾತಿ, ದರ್ಮ, ದೇವ್ರು ಎಲ್ಲನೂ.

ಕೇಸ್ ದಾಕಲಾದ ಮೇಲೆ ಎಸ್.ಐ ಜೇಪಿಲೇ ಅವರ್ನ ಮನೆವರ್ಗೆ ಬುಟ್ಟತ್. "ಆ ಚಿನ್ನಪ್ಪ ಮನೆಗೆ ಬಂದ್ರೆ ಪೋನು ಮಾಡಿ ತಿಳ್ಸಿ. ಅವನ ಕೊಬ್ಬು ಇಳಿಸ್ನೆ. ಮುಟ್ಠಾಳ. ಹೆಣ್ಣ್ನ, ಹೆಣ್ಮಕ್ಕಳ್ನ ಹೇಂಗೆ ಬೇಕಾದ್ರೂ ನಡ್ಸಿಕಣಕ್ಕಂತ ತಿಳ್ಕಂಡುಟು. ಅವಂಗೆ ಕಾನೂನು ಏನ್‌ಂತ ಕಲ್ಸಿನೆ."

ಎರ್ಡ್ ದಿನ ಕಳ್ದ ಮೇಲೆ ಚಿಕ್ಕಪ್ಪ ಮತ್ತು ಪೋಲೀಸ್ ಮಾವ ಮನೆಗೆ ಬಂದೊ.

"ಹೊಸ ಎಸ್.ಐ ಬಹಳ ಸ್ಟ್ರಿಕ್ಟ್ ಯಾರಿಗೂ ಕೇರ್ ಮಾಡಂವಲ್ಲ. ಅಣ್ಣನ ಎಳ್ಕಂಡ್ ಹೋಗಿ ಬರೀ ಚಡ್ಡಿಲಿ ದಿನ ಪೂರ್ತಿ ಲಾಕಪ್ಪಿಲಿ ಕೂಡಿ ಹಾಕಿ ಸರೀ ವಿಚಾರಿಸಿಕಣ್ತ್. ಎಮ್ಮೆಲ್ಲೆ ಪೋನು ಮಾಡಿಕಾಕನ ನೀವೇ ಬಂದ್ ಜಾಮಿೂನ್ ಕೊಟ್ರೆ ಬುಟ್ಟನೆಂತೇಳ್ತ್. ಮತ್ತೆ ಸ್ಟೇಶನ್‌ಗೆ ಶಿವಪ್ಪ ಬಾವನೊಟ್ಟಿಗೆ ನಾನೇ ಹೋಗಿ ಜಾಮಿೂನ್ ಕೊಟ್ಟ್ ಬಿಡುಗಡೆ ಮಾಡ್ಸಿದೆ. ಅಣ್ಣ ನಡೆಕೂ ಕಷ್ಟಪಡ್ತಿತ್. ನಂಗೆ ಅವ್ನ ಮಾತಾಡ್ಸೋಕ್‌ಂತ್ಲೆ ಮನ್ಸಿಗೆ ಬಾತ್ಲೆ."

ಪೋಲೀಸ್ ಮಾವನ ಮಾತ್‌ಕೇಳಿ ಅಮ್ಮಣ್ಣಿಗೆ ಕಸಿವಿಸಿ ಆತ್. ಅಪ್ಪಂಗೆ ಪೋಲೀಸ್‌ನವು ಹೊಡಿಯೋಕುಂತ ನಿಜಕ್ಕೂ ಅವ್ಳ ಮನ್ಸಿಲಿತ್ಲೆ. ಲಾಕಪ್ಪಿಲಿ ಎಷ್ಟ್ ಏಟ್ ತೀಂತೋ? ಏಟ್ ತಿಂದರೆ ಮನಷ್ಯ ಬದಲಾದವನೋ? ಅಪ್ಪ ಸೇಡ್ ಇಸಿಕಂಡ್ ಏನ್ ಅನಾಹುತ ಮಾಡಿಕುಟ್ಬೋ? ಈಗಿನ ಎಸ್ಸೈ ಈ ಊರಿನವಲ್ಲ. ಅವಂಗೆ ವರ್ಗ ಆದಮೇಲೆ ಮತ್ತೆ ಬರಂವ ಎಂತವನೋ? ಅಂವ ಎಲ್ಲಾದರ್ ಲಂಚಕೋರ ಆಗಿದ್ದರೆ ಅಪ್ಪಂದ ಹಣ ತಕಂಡ್ ನಾವ್ಗೆ ತಿರ್ಗಿಬುಟ್ರೆ? ಅದಕ್ಕೆ

ಮುಂದೆ ಈ ಪ್ರಕರಣ ಇತ್ಯರ್ತ ಆಕು. ಈಗ ಚಿಕ್ಕಪ್ಪ ಉಟ್ಟು, ಪೋಲೀಸ್ ಮಾವನೂ ಒಳೊ. ಪಟೇಲ್ರ್, ಊರ್‌ಗೌಡ್ರ ಎಲ್ಲವೂ ಸೇರಿ ಪಂಚಾತಿಕೆ ಮಾಡಿ ಒಂದು ತೀರ್ಮಾನಕ್ಕೆ ಬಂದರೇನೇ ಒಳ್ಳೆದ್‌ಂತ ಅವ್ವಿಗೆ ಅನ್ನಿಸ್ತ್.

ಅವ್ವ ಮನ್ಸಿಲಿರುದರ್ನೆ ಅಮ್ಮ ಹೇಳ್ತ್.

"ಪಟ್ಟ್‌ನ ಬೇನೆ ಇರುವಲ್ಲಿವರೇಗೆ ಅಂವ ಸುಮ್ಮನಿರುದು. ಅದ್ ಎಂದಿಗೂ ನಾಯಿ ಬಾಲನೆ. ಅವರ್ನ ಹೊಡ್ದ್, ಬಡ್ದ್ ಸರಿಮಾಡಿಕೆ ಇನ್ನ್ ಆಕಿಲೆ. ಅಂದ್ ಗಂಡ್ ಕೂಸು ಬೇಕೂಂತ ಜಗಳ ಮಾಡ್‌ತಿದ್ದೊ. ಈಗ ಅವ್ವೆ ಆಸ್ತಿ ಮೇಲೆ ಕಣ್ಣ್. ಇದ್ ಪಿತ್ರಾರ್ಜಿತ ಆದ್ದರ್‌ಂದ ಅವರಷ್ಟೆ ಹಕ್ಕ್ ಶಿವಪ್ಪ ಬಾವಂಗೂ ಉಟ್ಟು. ಆಸ್ತಿನ ಎರ್ಡ್ ಸಮ ಬಾಗಮಾಡಿ ಒಂದು ಪಾಲ್‌ನ ಶಿವಪ್ಪ ಬಾವ ತಕಣ್ಕು. ಇನ್ನೊಂದು ಪಾಲ್‌ನ ಐದು ಬಾಗ ಮಾಡಿ ಅದರ್ಲಿ ಒಂದು ಬಾಗನ ಅವ್ವೆ ಕೊಟ್ಟು ನಾಲ್ಕ್ ಬಾಗಗಳ್ನ ಮಕ್ಕ ಹಂಚಿಕಣಕ್ಕು. ನಾನ್ ಹೆಣ್ಣ್ ಹೆಂಗ್ಸ್. ಇದೆಲ್ಲಾ ಮಾಡಿಕೆ ನನ್ನಿಂದ ಆಕಿಲೆ. ಈಗ ನೀವಿಬ್ಬರೊಳರಿ. ನಿಮಗೆಲ್ಲವುಕು ಹತ್ತಿರದವಾಗಿ ತೀರ್ತದ ತ್ಯಾಂಪಣ್ಣ ಒಳೊ. ಒಂದು ಮಾತ್ ಹೇಳಿರೆ ಪಟೇಲ್ರ್, ಊರ್‌ಗೌಡ್ರ್ ಬಂದೇ ಬಂದವೆ. ಆದಸ್ಟ್ ಬೇಗ ಒಂದಿನ ಎಲ್ಲರ ಸೇರ್ಸಿ ಇತ್ಯರ್ತ ಮಾಡಿಬುಡಿ."

"ಸ್ಟೇಶನ್‌ಲಿ ಎಸ್ಸೈ ಈಗಾಗಲೇ ಎಲ್ಲಾ ಇತ್ಯರ್ತ ಮಾಡಿ ಬುಟ್ಟುಟಕ್ಕ. ಈ ಆಸ್ತಿನ ಎರ್ಡ್ ಬಾಗ ಮಾಡ್ಯೊಳೊ. ಕೆಳಗಿನ ಬಾಗ ಶಿವಪ್ಪ ಬಾವಂಗೆ. ಮನೆ, ಹಟ್ಟಿ ಮತ್ತು ಅಂಗಳ ನಿನ್ನ ಹೆಸ್ರಿಗೆ. ಮೇಲಿನ ಬಾಗನ ಐದ್ ಪಾಲ್ ಮಾಡ್ಯೊಳೊ. ಒಂದು ಬಾಗಕ್ಕೆ ಎರ್ಡ್ ಲಕ್ಷದಷ್ಟ್ ದರ ಹಿಡ್ದ್, ಚಿನ್ನಪ್ಪ ಬಾವಂಗೆ ಆಸ್ತಿ ಬದಲ್ ಎರ್ಡ್ ಲಕ್ಷ ಹಣ ಕೊಡ್ದೂಂತ ತೀರ್ಮಾನಿಸಿಯೊಳೊ. ಅದರ ಪಾಲ್ ನಿನ್ನ ಹೆಸ್ರ್‌ಲಿ ರಿಜಿಸ್ಟರ್ ಆದೆ. ಚಿನ್ನಪ್ಪ ಬಾವಂಗೆ ಇನ್ನ್ ಮುಂದೆ ಈ ಆಸ್ತಿಯಲ್ಲಾಗಲಿ ಮನೆಯಲ್ಲಾಗಲಿ ಯಾವುದೇ ಹಕ್ಕ್ ಇರ್ದುಲೆ. ಚಿನ್ನಪ್ಪ ಬಾವಂಗೆ ಕೊಡಕ್ಕಾದ ಎರ್ಡ್ ಲಕ್ಷನ ಸದ್ಯಕ್ಕೆ ತಾನ್ ಕೊಟ್ಟನೇಂತ ಶಿವಪ್ಪ ಬಾವ ಒಪ್ಪಿಕೊಂಡೊಳೊ."

ಅಮ್ಮಣ್ಣಿಗೆ ನೆಮ್ಮದಿ ಆತ್. ಆದ್ರೆ ಚಿಕ್ಕಪ್ಪಂಗೆ ನಾವ್ ಸಾಲಗಾರರಾಕಲ್ಲಾಂತ ಹಂ
ಬೇಜಾರ್ ಆತ್. ಅವ್ವ ಏನಾದ್ರ್ ಹೇಳ್ದೂಂತ ಅವ್ಳ್ ಅವ್ವನ ಮೋರೆನೇ ನೋಡ್
ಅವ್ವ ಯಾವುದೋ ಚಿಂತೆಲಿ ಮುಳ್ಗಿದಂಗೆ ಇತ್ತ್. ಅವ್ವ ಸುಮ್ಮನಿರುದರ್ನ ನೋ
ಚಿಕ್ಕಪ್ಪ ಹೇಳ್ತ್, "ಹಣದ ಮಟ್ಟಿಗೆ ನೀವ್ ಯೋಚಿಸುದು ಬೇಡ ಅತ್ತಿಗೆ. ಅಣ್ಣಂ
ಕೊಡಕಾದ ಎರ್ಡ್ ಲಕ್ಷನ ನಾನ್ ಕೊಟ್ಟನೆ. ನಂಗೇನ್ ಮಕ್ಕಳೋ ಮರಿನೊ
ದೇವ್ರು ನಂಗೆ ಸಾಕಸ್ಟ್ ಸಂಪತ್ತ್ ಕೊಟ್ಟುಟು. ಸ್ವರ ಸಂಪತ್ತ್ ಮಾತ್ರ ಕೊಟ್ಟ
ಅದೆಲ್ಲ ಹೋಗಲಿ ಮಿಯಕಾಕನ ಕೂಡ ನನ್ನ ಬಾಯಿಂದ ಒಂದ್ ಹಾಡ
ಬಾದುಲೆ. ಅದೇ ನಮ್ಮ ಅಮ್ಮಣ್ಣಿನ ನೋಡಿ. ಸಾವಿರಾರ್ ಜನ್ರೆದ್‌ರ್ ಒಂದಿಸ್
ಅಳ್ಕ್ ಇಲ್ಲದೆ ಹಾಡ್ದೆ. ಅವ್ಳ್ ರಂಗಸ್ತಳಲಿ ಕುದ್ದ್ ಹಾಡಿಕಾಕನ ಮನ್ಸ್ ತುಂಬಿ
ಬಂದದೆ. ನಮ್ಮ ಬಾಳಕ್ಕನೋ ವೇಷ ಹಾಕಿ ರಂಗಕ್ಕೆ ಬಂದರೆ ಸಾಕ್ಷಾತ್
ಶ್ರೀ ಕೃಷ್ಣನಾಂಗೆ ಕಂಡದೆ. ಈ ಮಕ್ಕಳಿಗೆ ಅದ್ ನನ್ನ ಇನಾಮು."

ಅಮ್ಮಣ್ಣಿಗೆ ಅಜ್ಜನ ನೆಂಪಾತ್. ಅಜ್ಜ ತೀರಿ ಹೋದ್ರೂ ಒಳ್ಳದನ್ನೆ ಮಾಡ್
ಅಂವ ತೀರಿ ಹೋದ ಮೇಲೆ ಚಿಕ್ಕಪ್ಪ ಈ ಮನೆಗೆ ಬರುವಂಗಾತ್. ಚಿಕ್ಕಪ್ಪ ಒಳ್ಳ
ಮನಸ್ಸಿನವ. ಹುಟ್ಟಿದ ಅಪ್ಪ ಮಕ್ಕಳ ಪ್ರೀತ್ಸಿತ್ಲೆ. ಚಿಕ್ಕಪ್ಪ ಪ್ರೀತಿಸುತುಟ್ಟು.

ಅಂಗಳಲಿದ್ದ ನಾಯಿ ಬೊಗ್ಳ್ತ್. ಅದರ ಬೊಗುಳುವ ಸ್ವರಕ್ಕಿಂತ ದೊಡ್ಡ
ಸ್ವರ ಬೇರೊಂದು ಕೇಳ್ಸಿತ್.

"ಏ ನಾಯಿ ನಿಂಗೇನಾಗುಟು? ದಿನಾ ಬರುವವಂಗೆ ನೀ ಬೊಗುಳಿಯನೋ?
ನಾಯ್ಗೆ ಹುಟ್ಟಿದವ್ನೆ! ನಿನ್ನ ದೊಡ್ಡಾಸ್ಪತ್ರೆಗೆ ಕರ್ಕಂಡೋಗಿ ಕಣ್ಣಿನ ಪರೀಕ್ಷೆ ಮಾಡ್ಸಿ
ಕೂಲಿಂಗ್ ಗ್ಲಾಸ್ ಇಡ್ಸಿನೆ ನೋಡು."

ಚಾವಡಿಯಲಿದ್ದವು ಅಂಗಳಕ್ಕೆ ಬಂದ್ ನೋಡ್ದೋ. ಬೊಗ್ಳ್‌ತಿದ್ದ ನಾಯಿ
ಈಗ ಬಾಲ ಅಲ್ಲಾಡ್ಸಿಕಂಡ್ ತ್ಯಾಂಪಣ್ಣನೊಟ್ಟಿಗೆ ಆಟ ಆಡ್ತಿತ್ತ್. ಇವರ್ನ ನೋಡಿ
ಅವ್ನ ಮೋರೆ ತೊಡ್ಪೆನಷ್ಟ್ ಅಗಲಾತ್.

"ಬಾವ ಬಾವರ್ನ ಹೀಂಗೆ ಒಟ್ಟಿಗೆ ನೋಡಿ ಎಸ್ಟ್ ಯುಗ ಆತೋ ಏನೋ?
ನಮ್ಮ ಚಿನ್ನಪ್ಪನ ಕತೆ ಏನಾತ್? ಎಲ್ಲಿ ಉಟ್ಟುಗಡ ಅಂವ?"

ಜಗಲ್‌ಲಿ ಕುದ್ದುಕಂಡ್ ಮೂರು ಜನ ಎಲೆಅಡಿಕೆ ತಿನ್ತಾಇರ್‌ಕನ ಚಿಕ್ಕಪ್ಪ
ಸ್ಟೇಶನ್‌ಲಿ ನಡ್ದೆ ಎಲ್ಲಾ ಸಂಗತಿನ ಮತ್ತೊಮ್ಮೆ ವಿವರಿಸಿತ್ತ್. ಬಾಯಿ ತುಂಬ
ಎಲಾಡಿಕೆ ತುಂಬಿಸಿಕೊಂಡಿದ್ದ ತ್ಯಾಂಪಣ್ಣ ಕುಸಿಂದ ತಲೆ ಅಲ್ಲಾಡ್‌ಸ್ತ್.

"ನೀವೆಲ್ಲಾ ಸೇರಿ ಅದನ್ನ್ ಹಾಂಗೆ ಮುಗಿಸಿದ್ ತುಂಬಾ ಒಳ್ಳದಾತ್. ಆದ್ರೂ

ಒಂದು ರಿಜಿಸ್ತ್ರಿ ಮಾಡ್ದು ಎಲ್ಲ ಮಟ್ಟಿಗೆ ಒಳ್ಳೆದ್. ಚಿನ್ನಪ್ಪನ ಮನ್ಸ್ ಯಾಗ ಹೇಂಗೆ ಎಂತ ಹೇಳಿಕೆ ಬಾದುಲ್ಲೆ. ಮೊನ್ನೆ ನಂಗೆ ಅವ್ನ ಕೊಚ್ಚಿ ಹಾಕುವಸ್ಟ್ ಸಿಟ್ಟ್ ಬಂದಿತ್ತ್. ಕೈಲಿ ಕತ್ತಿನೂ ಇತ್ತ್‌ಂತೇಳಿ. ಕುಸುಮಳ ಹಣೇಲಿ ಕುಂಕುಮ ಇಲ್ಲದಾದೆಲ್ಲಾ ಅಂತಾ ಬುಟ್ಟ್ ಬುಟ್ಟೆ. ನನ್ನ ಕೈಲಿದ್ದ ಕತ್ತಿ ನೋಡಿ ಅಂವ ಓಡ್ದರ ನೀವ್ ನೋಡಕಾಗಿತ್ತ್. ಓ ಅಲ್ಲಿ ಇನ್ನೂ ಉಟ್ಟು ನೋಡಿ ಅವ್ನ ಜೋಡು. ಅಂವ ಹೆದ್ರಿ ತಪಸ್ವಿನಿಗೆ ಬೀಳದ್ ಪುಣ್ಯ."

ಅಪ್ಪಂಗೆ ಲಾಯ್ಕ್ ಮೊಸಿಗೆ ಬಂದದೆ. ಈಗಂತೂ ಕಂತ್‌ವಸ್ಟ್ ನೀರ್ರೂ ಇಲ್ಲೆ. ತಪಸ್ವಿನಿಗೆ ಬಿದ್ರೂ ಅಪ್ಪ ಬದ್ಕ್‌ತಿತ್ತ್. ಒಂದುವೇಳೆ ಅಂವ ತಪಸ್ವಿನಿಲಿ ಕಂತಿ ಸತ್ತಿದ್ದರೂ ನಷ್ಟ ಏನೂ ಇತ್ಲೆ. ಅವ್ವ ಅವನ ಆಸೆನ ಅಂವ ಎರಡ್ನೆ ಮದ್ವೆ ಆಕನನೇ ಬುಟ್ಟುಟು. ಮಕ್ಕಳ ಮೇಲೆ ಅವಂಗೆ ಪ್ರೀತಿನೇ ಇತ್ಲೆ. ಹುಟ್ಸಿ ಬುಟ್ಟರೆ ಅಪ್ಪನ ಕರ್ತವ್ಯ ಮುಕ್ತ್‌ಂತ ತಿಳ್ಕಂಡವ ಅಂವ. ಅವಂಗೆ ಪುಟ್ಟ ತಮ್ಮನ ಮೇಲೂ ಪ್ರೀತಿ ಇತ್ಲೆ. ಮೊನ್ನೆ ಅಂವ ಬಂದದ್ ತಮ್ಮನ ನೋಡಿಕೆ ಅಂತ ಅಲ್ಲ. ಮನೆಂದ ನಮ್ಮನ್ನೆಲ್ಲಾ ಹೊರಗೆ ಹಾಕಿಕೆ. ಅಪ್ಪ ಯಾಗೋಳು ಅಪಾಯಕಾರಿಯೆ. ಅಂವ ಒಂದುವೇಳೆ ತಪಸ್ವಿನಿನ ಪಾಲಾಗ್‌ತಿದ್ದರೆ ಮೊನ್ನೆ ಅಂವನ ಕಟ್ಟಿಕಂಡವಳ್ನ ಬುಟ್ಟರೆ ಕಣ್ಣೀರ್ ಹಾಕೊವು ಬೇರೆ ಯಾರೂ ಇತ್ಲೆ.

ಆದ್ರೂ ಅವ್ವ ಕಣ್ಣೀರ್ ಹಾಕದೆ ಇರ್ದೋ? ಏನಿಲ್ಲೆಂತೇಳಿರೂ ಇಪ್ಪತ್ತು ವರ್ಷಕ್ಕಿಂತ್ಲೂ ಹೆಚ್ಚ್ ವರ್ಷ ಅಪ್ಪನೊಟ್ಟಿಗೆ ಸಂಸಾರ ಮಾಡ್ದವಳ್ ಮದ್ವೆ ಆದ ಹೊಸದರ್ಲಿ ಯಾವ ಗಂಡ ತನ್ನ ಹೆಣ್ಣ್‌ನ ಪ್ರೀತಿಂದ ನೋಡಿಕಣದೆ ಇದ್ದದೆ? ಸಾಲಾಗಿ ಹೆಣ್ಮಕ್ಕ ಹುಟ್ಟಿದಕ್ಕೆ ಅವಂಗೆ ಅವ್ವನ ಮೇಲ್ನ ಆಕರ್ಷಣೆ ಕಡ್ಮೆ ಆಗಿದ್ದರೆ ತಮ್ಮ ಪ್ರಸಾದ ಹುಟ್ಟಿದ ಮೇಲೆ ಪ್ರೀತಿ ಹೆಚ್ಚಕಾಗಿತ್ತಲ್ಲ. ಮಕ್ಕಳ ಅಂಗ ನಿರ್ಣಯ ಆದು ಅಪ್ಪಂದ ಅಂತ ಅವ್ಳ ವಿಜ್ಞಾನ ಪಾಠಲಿ ಬಂದಿತ್ತ್. ಹೆಣ್ಣ್ ಹೆತ್ತದಕ್ಕೆ ಅವ್ವನೇ ಕಾರಣಾಂತ ಹೇಳುವ ಹಾಗಿಲ್ಲೆ. ಹಿರಿಯರ ಎದ್‌ರ್ಲಿ, ಜಾತಕ, ವಾರ, ನಕ್ಷತ್ರ ಗೋತ್ರ, ತಿತಿ, ಕರಣ, ಮಹೂರ್ತ ಎಲ್ಲಾ ನೋಡಿ ಹತ್ತ್ ಕುಟುಂಬ ಹದಿನೆಂಟ್ ಗೋತ್ರದವರ, ಬಂದು ಬಳಗ, ನೆಂಟರಿಷ್ಟರ ಮುಂದೆ ಶಾಸ್ತ್ರ ಪ್ರಕಾರ ನಡ್ದ ಮದುವೆ ಹೀಂಗಾದು ಏಕೆ? ಅಂತ ಮದುವೆನ ಕತೆನೇ ಹೀಂಗಾದರೆ ಇನ್ನ್ ಎಂತ ರೀತಿನ ಮದುವೆ ಮಾಡೊಕು?

ಅಮ್ಮಣ್ಣಿನ ಯೋಚನೆ ತ್ಯಾಂಪಣ್ಣನ ಮಾತ್‌ಗಳ್ದಂದ ತುಂಡಾತ್.

"ಮೊನ್ನೆ ಅಂವನ ಮದ್ವೆ ನಡ್ದದ್ ಕಪಿಲೇಶ್ವರ ದೇವಸ್ತಾನಲಿ. ನನ್ನ ಕಾಲಿಗೆ

ಅಡ್ಡ ಬಿದ್ದ್ ಕರ್ತ್. ಹಾಂಗೆ ಕರ್ದ ಮೇಲೆ ಹೋಗದಿರಿಕೆ ಆದೆನೋ? ಮತ್ತೆ ಮದ್ವೆ ಹೇಂಗೆ ನಡ್ದದೆ ನೋಡಿ ಬುಡನೊಂತೇಳ್ವ ಆಸೆನೂ ಇತ್ತ್. ಹೇಂಗೂ ಮದ್ವೆ ಆದೆ. ತಪ್ಪಿಸಿಕೆ ಸಾದ್ಯನೇ ಇಲ್ಲೆಂತಾದ ಮೇಲೆ ಹೋದೇ ಒಳ್ಳೆದ್‌ಂತ ಅನ್ನಿಸಿತ್. ಹಾಂಗೆ ಹೋದೆ. ಗೂಡೆನ ಕಡೆವು ಹತ್ತ್ ಜನ ಬುಟ್ಟರೆ ಇವನ ಕಡೆವು ಯಾರೂ ಇತ್ಲೆ. ಅದಕ್ಕೆ ನನ್ನ ನೋಡಿ ಬ್ರಹ್ಮಾಂಡ ಕುಸಿ ಆತ್ ಅವಂಗೆ. ಆದ್ರೆ ಅಂವ ಜನ ಮೋಸನೆ. ಇಲ್ಲದಿದ್ರೆ ಮೊನ್ನೆ ಅವಂಗೆ ಅಸ್ಟ್ ಕೆಟ್ಟ ಮಾತ್ ಆಡ್ಕೆ ಮನ್ಸ್ ಬಾತಿತೋ?"

"ನಮ್ಮ ಚಿನ್ನಪ್ಪ ಬಾವ ನಾಲ್ಕ್ ಮಕ್ಕಳ ಅಪ್ಪ. ಏನಿಲ್ಲೆಂತೇಳಿರೂ ನಲ್ವತ್ತೈದು ಕಂಡಿತ ದಾಟಿಟು. ಅವಂಗೆ ಹೆಣ್ಣ್ ಕೊಟ್ಟವು ಎಂತವ್ ಇರೋಕು."

ನಾನೂ ಅದರ್ನೆ ಯೋಚಿಸ್‌ತಿದ್ದೆ. ನೀನ್ ಗಮನ್ಸಿಯೊಳನೋ ಇಲ್ಲೆನೊ. ಈಗ ಗೂಡೆಗಳ ಸಂಖ್ಯೆ ಹೈದಂಗಳಿಗಿಂತ ಹೆಚ್ಚಾಗುಟ್ಟು. ಈ ಮನೆನೇ ಒಂದು ಸಾಕ್ಷಿ. ಮೂರು ಹೆಣ್ಣಾದ ಮೇಲೆ ಒಂದು ಗಂಡ್ ಹುಟ್ಟಿದ್. ಗೂಡೆಗಳ ಸರಿಯಾಗಿ ಶಾಲೆಗೆ ಕಳ್ಸ್‌ತಿದ್ರೆ ಅದಾದರ್ ಆಗ್‌ತಿತ್ತ್. ಅವು ಇರುದೇ ಮಕ್ಕಳ ಹೆರಿಕ್ಕೆ ಮತ್ತು ಮುಸ್ರೆ ತಿಕ್ಕಿಕೆ ಅಂತ ತಿಳ್ಕಂಡವು ನಾವ್. ಒಂದು ಬಿಯೆನೂ ಆಗದ ಗೂಡೆನ ಯಾಂವ ಮೂಸಿದೆ ಈಗ. ಮತ್ತೆ ಮುಂಡಾಸಿನವ ಬಾದುಲ್ಲೆ, ಮುಟ್ಟಾಳೆಯವಂಗೆ ಕೊಡ್ದುಲ್ಲೆಂತಾಗುಟು. ನಮ್ಮ ಕಪಿಲಳ್ಳಿಲಿ ಮೂವತ್ತು ದಾಟಿರೂ ಮದ್ವೆಯಾಗದ ಗೂಡೆಗ ಎಷ್ಟೊಳ ಗೊತ್ತುಟೊ? ಗಂಡ್ಸ್ ಎನ್ನುವ ಪ್ರಾಣಿ ಹೇಂಗಿದ್ದರೂ ಸರಿ ಅದರ ಕುತ್ತಿಗೆಗೆ ಮಗಳ್ನ ಕಟ್ಟಿ ಮನೆಂದ ಒಮ್ಮೆ ಹೊರಗೆ ಹಾಕಿಕೆ ಹೆಣ್ಣ್ ಹೆತ್ತವು ಕಾದ್‌ಕ್ಕಂಡ್ ಒಳೊ. ನಿನ್ನ ಬಾವನ ಕಟ್ಟಿಕೊಂಡವಳ್ಗೆ ನಲ್ವತ್ತ್ ಕಂಡಿತ ದಾಟಿರ್ದು. ಅವ್ಳ ಮನೆವು ಆದ್ರೂ ಪಾಪ ಏನ್ ಮಾಡ್ದು? ಇನ್ನ್ ಅವ್ಳಿಗೆ ಇವಂದ ಮಕ್ಕಳಾಕೆ ಸಾದ್ಯನೇ ಇಲ್ಲೆ. ಆ ದೇವರ ಲೀಲೆಂದ ಕೂಸು ಹುಟ್ಟಿರೆ ಅದ್ ಚಿನ್ನಪ್ಪನ ಅಜ್ಜಾ ಅಂತ ಕರೆಯೋಕಲ್ಲದೆ, ಅಪ್ಪಾ ಅಂತ ಕರೆಕಿಲ್ಲೆ."

ತ್ಯಾಂಪಣ್ಣನ ಮಾತಿಗೆ ಎಲ್ಲವೂ ನಗಾಡ್ದೋ. ನಗೆ ನಿತ್ತ ಮೇಲೆ ಚಿಕ್ಕಪ್ಪ ಹೇಳ್ತ್.

"ಆದರೂ ತ್ಯಾಂಪಣ್ಣಾ, ಅಣ್ಣಂಗೆ ಮದ್ವೆ ಆಗೇ ಆಕುಂತ ಇದ್ದ ಅಗತ್ಯ ಆದರೂ ಏನಿತ್ತ್? ಅಂದ್ ಅತ್ತಿಗೆನ ಮೈಮೇಲೆ ಬಂದಿದ್ದ ಅಪ್ಪನ ಕುಲೆಗೆ ಮಾತ್ ಕೊಟ್ಟಂವ ಇಸ್ಟ್ ವರ್ಸ ಆದಮೇಲೆ ಅದರ ಮರ್ತತ್. ಆಗ ಗಂಡ್ ಮಂಜ ಬೇಕೂಂತ ಕಾರಣ ಕೊಡ್ತಿತ್ತ್. ಈಗ ಆ ಕಾರಣನೂ ಕೊಡುವಾಂಗಿಲ್ಲೆ."

"ಅದರ ಪತ್ತೆದಾರಿಕೆ ಮಾಡಿ ಕಂಡ್ ಹಿಡ್ದ್ ಬುಟ್ಟೆ. ನಂಗೆ ಎಲ್ಲೆಲ್ಲಿ ಕನೆಕ್ಷನ್ ಉಟ್ಟುಂತ ನೀವ್ಗೆ ಗೊತ್ತಿಲ್ಲೆ. ಮೊನ್ನೆ ಪೋಲೀಸ್ ಸ್ಟೇಶನ್‌ಲಿ ಅಮ್ಮಣ್ಣಿಗೆ ಮತ್ತು ಬಾಳಕ್ಕಂಗೆ ಹಂಞ ಗೊತ್ತಾಗುಟು. ಅದರ್ನೆ ಹೇಳ್ನೆ ಕೇಳಿ. ಆದಿಂದಲೇ ನಮ್ಮ ಚಿನ್ನಪ್ಪ ಮದ್ವೆಯಾನೆಂತ ಹೇಳ್ತಾ ಬರ್ತಿದ್ದದ್ ಈಗ ಆದವಳ್ನೆ. ಹೇಂಗೂ ಮದುವೆ ಆದೆಲ್ಲಾಂತೇಳಿ ಮನೆಲಿ ಸಲಿಗೆ ಬುಟ್ಟಿದ್ದೊಗಡ. ಅಂವ ಅಲ್ಲಿಗೆ ಹೋಗಿರಿಕಾಕನ್ನೆಲ್ಲಾ ಗಂಡ ಹೆಣ್ಣಿನ ನಡ್ವೆ ಏನೆಲ್ಲಾ ನಡೆಕೆ ಸಾದ್ಯ ಉಟ್ಟೋ ಅದೆಲ್ಲಾ ನಡೆತಿತ್ತ್‌ಗಡ! ದಾಸಪ್ಪಣ್ಣನ ಕೊಲೆಗೆ ಮಾತ್ ಕೊಟ್ಟ ಮೇಲೆ ಚಿನ್ನಪ್ಪ ಆ ಮನೆಗೆ ಹೋದುದರ್ನ ಕಡಿಮೆ ಮಾಡಿತ್ತ್. ಅಪ್ಪ ಸತ್ತ ಬೇಜಾರಕ್ಕೆ ಇರ್ದು ಅಂತ ಹೆಣ್ಣಿನ ಕಡೆವು ಸುಮ್ಮನಾಗಿದ್ದೊ. ಒಂದು ದಿನ ಇಂವ ಆ ಹೆಂಗ್ಸನೊಟ್ಟಿಗೆ ನಾವ್ ಮುಂದೆನಾಂಗೆ ಇರಿಕೆ ಅಡ್ಡಿಯೇನೂ ಇಲ್ಲೆ. ಆದ್ರೆ ಮದ್ವೆಯಾಕೆ ಮಾತ್ರ ಸಾದ್ಯನೇ ಇಲ್ಲೆ. ಹತ್ತ್ ಜನರೆದ್‌ರ್ ಅಪ್ಪನ ಕುಲೆಗೆ ಮಾತ್‌ಕೊಟ್ಟುಬುಟ್ಟಳೇಂತ ಹೇಳ್ತ್ ಗಡ. ಅವಳ್‌ಂದ ಈ ವಿಷಯ ಗೊತ್ತಾದ ಅಣ್ಣಂದಿರ್ ವೈಕುಂಠಕ್ಕೆ ಹೋಗಿರುವ ದಾಸಪ್ಪಣ್ಣ ಮತ್ತೆ ಬಾಕೆ ಸಾದ್ಯನೇ ಇಲ್ಲೆ. ಹಾಂಗಾಗಿ ಕುಲೆಗೆ ಕೊಟ್ಟ ಮಾತ್‌ನ ಪ್ರಕಾರ ನಡ್ಕಂಬ ಅಗತ್ಯನೂ ಇಲ್ಲೆಂತ ಹೇಳ್ದೊಗಡ. ಆಗಲೂ ಚಿನ್ನಪ್ಪ ಮದ್ವೆಗೆ ಹಿಂಜರಿಕಾಕನ ಅವು ಒಳ್ಳ ಮಾತ್‌ಲಿ ಮದ್ವೆ ಆದರೆ ಸೈ. ಇಲ್ಲದಿದ್ದರೆ ನಿನ್ನ ಮೇಲೆ ಅತ್ಯಾಚಾರದ ಕೇಸ್ ಹಾಕಿ ಜೈಲಿಗೆ ಹಾಕ್ಸಿವೆ. ಏನ್ ತಿಳ್ದೊಳ ನೀ? ನಮ್ಮ ತಂಗೆ ನಿನ್ನ ಮದ ತೀರ್ಸಿಕೆ ದರ್ಮಕೆ ಸಿಕ್ಕಿದ ಎಮ್ಮೆಂತ ಗ್ರಹಿಸಿಯೊಳೊನಾಂತ ತೋಳು ಏರ್ಸಿಕಂಡ್ ಬಂದೊಗಡ. ಇಂವ ಪಾಪ ಹೆದ್ರಿ ಅಡ್ಡ ಮಾತಾಡ್ದೆ ಮದ್ವೆಗೆ ಒಪ್ಪಿಕಂಡ್ ಬಾತ್‌ಗಡ."

"ಓ, ಹಾಂಗೊ ವಿಷಯ. ಮದ್ವೆಯಾಗದಿರ್‌ತಿದ್ದರೆ ಇಂವ ಜೈಲಿಗೆ ಹೋಗ್‌ತಿತ್ತ್. ಈಗ ಮದ್ವೆಯಾದ ಮೇಲೂ ಬೆತ್ತದ ರುಚಿ ನೋಡುದರ್ನ ಅವಂದ ತಪ್ಪಿಸಿಕೆ ಆತ್ಲೆ. ಆದ್ರೂ ಚಿನ್ನಪ್ಪ ಬಾವ ಒಂದು ಒಳ್ಳೆ ಕೆಲ್ಸ ಮಾಡ್ತ್. ಅವ್ಳಿಗೊಂದು ಬೇರೆನೇ ಮನೆ ಮಾಡಿ ಕೊಡ್ತ್. ಎಲ್ಲಾದ್ರ್ ಇಲ್ಲಿಗೆ ಕರ್ಕಂಡ್ ಬಂದಿದ್ರೆ ರಾಮರಂಪಾಗಿ ಬುಡ್ತಿತ್."

"ಹ್ಹೊ...ಹ್ಹೊ... ಅವಳ್ನ ಇಲ್ಲಿಗೆ ಯಾಕೆ ಕರ್ಕಂಡ್ ಬಾತ್ಲೆ ಗೊತ್ತಾ? ಅದಕ್ಕೂ ದಾಸಪ್ಪಣ್ಣನ ಕುಲೆನೇ ಕಾರಣ. ದಾಸಪಣ್ಣನ ಕುಲೆ ಕುಸುಮಳ ಮೈಮೇಲೆ ಬಂದದ್ದ್, ಮರುಮದ್ವೆ ಆದುಲ್ಲೆಂತ ಚಿನ್ನಪ್ಪ ಮಾತ್ ಕೊಟ್ಟದ್ದ್ ಗೊತ್ತಾದ ಮೇಲೆ ಆ ಹೆಂಗ್ಸಿಗೆ ವಿಪರೀತ ಹೆದ್ರಿಕೆ ಸುರಾತ್‌ಗಡ. ಕಜೆ ಮನೆಗೆ ಹೋದರೆ ಕುಲೆ ಕಾಣ್ಸಿಕಂಡ್ ತೊಂದರೆ ಕೊಡ್ದೂಂತ ಅಣ್ಣಂದಿರೊಟ್ಟಿಗೆ ಹೇಳ್ತಲೇ ಇತ್ತ್‌ಗಡ. ಅವ್ಳ ಅಣ್ಣಂದಿರ್

ಪರಿಹಾರ ಏನ್‌ಂತ ಯೋಚಿಸಿ ಪಿತ್ರಾರ್ಜಿತಾಗಿ ಅವ್ಳಿಗೆ ಕೊಡಕ್ಕಾಗಿದ್ದ ಮೂರು ಎಕ್ರೆ ಜಾಗನ ಕೊಟ್ಟ್, ಸಣ್ಣದೊಂದು ಮನೆಕಟ್ಟಿ ಚಿನ್ನಪ್ಪನ ಅಲ್ಲೇ ಅವಳೊಟ್ಟಿಗೆ ನಿಲ್ಲುವಾಂಗೆ ಮಾಡ್ದೋ."

ತ್ಯಾಂಪಣ್ಣನ ಮಾತಿಗೆ ಚಿಕ್ಕಪ್ಪ ತಲೆತೂಗಿತ್.

"ಅಲ್ಲಿ ಅಸ್ಟ್ ಸಿಕ್ಕಿದ ಮೇಲೆ ಅಣ್ಣ ಇಲ್ಲಿಗೆ ಬಂದ್ ರಂಪ ಮಾಡ್ದು ಬೇಡಾಗಿತ್. ಮನುಷ್ಯಂಗೆ ದುರಾಸೆ. ಎಷ್ಟಿದ್ರೂ ಸಾಲ್ದ್"

"ನಂಗೂ ಅದೇ ಆಶ್ಚರ್ಯ ಶಿವಪ್ಪ. ನಾನ್ ತಿಳ್ಕಂಡಾಂಗೆ ಯಾವ್ದೋ ವಿಸಯಕ್ಕೆ ಆ ಹೆಣ್ಣಿಗೂ ಚಿನ್ನಪ್ಪಂಗೂ ಜಗಳ ಆಗಿರೋಕು. ಮಾತ್‌ನ ನಡ್ವೆ ಇಲ್ಲಿ ನಿಮ್ಮದೇನಿಲ್ಲೆ, ಎಲ್ಲಾ ತನ್ನದ್‌ಂತ ಅವ್ಳ್ ಹಂಗ್ಸಿರೋಕು. ಇನ್ನ ತೀರ್ತಸೇವನೆಗೂ ಅವ್ಳೇ ಹಣ ಕೊಡಕಾಗಿ ಬಾಕನ ಹಾಂಗೆ ಹೇಳದಿದ್ದದೆನೋ? ಇಂವ ಎಸ್ಟಾದ್ರ್ ಗಂಡ್ಸಲ್ಲೋ? ಅಂತ ಮಾತ್ನ ಅಂವ ಹೇಂಗೆ ಸಹಿಸುದು? ಇಲ್ಲಿ ಮಾತಿಗೆ ಮಾತ್ ಬೆಳ್ದ್ ಹೆಣ್ಣ್ ಮಕ್ಕಳ್ನ ಹೊರ್ಕಡೆ ಹಾಕುವ ಬೆದ್ರಿಕೆ ಹಾಕಿಟು. ನಿಜವಾಗಿ ಹಾಂಗೆ ಮಾಡ್ತಿತ್ತೋ ಇಲ್ಲೆನೋ ಆ ಕಪಿಲೇಶ್ವರಂಗೆ ಮಾತ್ರ ಗೊತ್ತಪ್ಪೆ"

ಆಗ ಅವ್ವ ನಡುವೆ ಬಾಯಿ ಹಾಕಿತ್.

"ತ್ಯಾಂಪಣ್ಣ ಹೇಳ್ದ ಕಾರಣಕ್ಕೇ ಮೊನ್ನೆ ಅವು ಇಲ್ಲಿಗೆ ಬಂದ್ ಜಗಳ ಮಾಡ್ದಾಗಿದ್ದರೆ ಈಗ ಜಾಗ ಪಾಲಾಗಿದ್ರೂ ಸಮಸ್ಯೆ ಪರಿಹಾರವಾಗುವ ಹಾಂಗೆ ಕಾಂಬೋದ್ಲೆ. ಈಗೇನೋ ಎರ್ಡ್ ಲಕ್ಷ ಸಿಕ್ಕಿದೆಂತ ಸುಮ್ಮನಾಗಿರ್ದು. ಅವರ ಕೋಳಿಕಟ್ಟ, ಜುಗಾರಿ, ತೀರ್ತ ಸೇವನೆಂತೇಳಿ ಆ ಹಣ ಕರ್ಚಾದ ಮೇಲೆ ಅವು ಇಲ್ಲಿಗೆ ಬಂದೇ ಬಂದವೆ."

ಅಂಗಳಲ್ಲಿದ್ದ ನಾಯಿ ಜೋರಾಗಿ ಬೊಗ್‌ಳ್ತ್. ಅಪ್ಪ ತಲೆತಗ್ಗಿಸಿ ಕಾಲೆಳ್ದ್‌ಕಂಡ್ ಬರ್ತಿತ್.

———***———

# ೫. ಕವಲ್ ದಾರ್‍ಲಿ

ಜಗ್‌ಲ್‌ಲಿ ಕುದ್ದ್ ಕಂಡ್ ಹರ್ಟೆ ಹೊಡಿಯುತಿದ್ದವು ಅಪ್ಪನ ಕಂಡ್ ಮಾತ್ ನಿಲ್ಲಿಸಿದೊ. ಅಪ್ಪ ಬಂದ್ ಜಗ್‌ಲ್ನ್ ಮೂಲೆಲಿ ಕುದ್ದತ್. ತಲೆಂದ ಬೈರಾಸ್ ತೆಗ್ದ್ ಮೋರೆ ಉಜ್ಜಿಕಂಡ್ ಅದರ್‌ಂದಲೆ ಗಾಳಿ ಹಾಕಿಕಣ್ತ್.

"ಉಸಪ್ಪ, ಕುಡಿಯಕೆ ಆಕ್ತಾ ಉಟ್ಟು. ತಡೆಕೆ ಆದುಲೆ ನೀರ್ ಬೇಕಿತ್ತ್." ಅವ್ವ ಅಪ್ಪನ ಮಾತ್ ಕೇಳ್ಸದ ಹಾಂಗೆ ಕುದ್ದಿತ್ತ್. ಹಿರಿಯವು ಮೂರು ಜನ ಮಿಸ್ಕಿತ್ಲೆ. ಅಮ್ಮಣ್ಣಿ ಒಳಗೆ ಹೋಗಿ ಚೊಂಬು ತುಂಬ ನೀರ್ ಮತ್ತು ಲೋಟ ತಂದ್ ಅಪ್ಪನ ಪಕ್ಕಲಿ ಇಸಿತ್. ಅಪ್ಪ ಚೊಂಬು ನೀರ್ನ ಗಟಗಟನೆ ಕುಡ್ತ್. ಉಳ್ದ ನೀರ್ನ ಮೋರೆಗೆ ಎರ್‍ಚಿಕಂಡ್ ಬೈರಾಸ್‌ಂದ ಉಜ್ಜಿಕಣ್ತ್. ಮತ್ತೆ ಕಾಲಿ ಚೊಂಬುನ ಒಮ್ಮೆ ತಿರ್‍ಗಿಸಿ ನೋಡ್ತ್. ಅದ್ ಅಂದ್ ಪಟೇಲ್ರ್ ಅಣ್ಣ ತಮ್ಮಂದಿರಿಗೆ ರಾಜಿ ಮಾಡ್ಸಿಕಾಕನ ನೀರ್ನ ಸಾಕ್ಷಿಯಾಗಿ ಇಸಿದ ಚೊಂಬಾಗಿತ್ತ್.

ಯಾರೂ ಮಾತಾಡ್ತ್‌ಲೆ.

"ಏನ್ ಯಾರೂ ಮಾತಾಡ್ದುಲೆ? ಒಬ್ಬ ಪರ್ದೇಸಿ ಬಂದ್ರೂ ಮಾತಾಡ್ದೊವು ನೀವು. ಈಗ ಈ ಮನೆ ಯಜಮಾನ ಬಂದುಟು. ನೀವು ಸುಮ್ಮನಿದ್ದರೆ ನಾನ್ ಏನ್ ತಿಳ್ಕೊಣಕು? ನಾನ್ ಬಂದದ್ ನೀವ್ಗೆ ಇಷ್ಟ ಆತ್ಲೆಂತಾದರೆ ಹೇಳಿಬುಡಿ. ಹೊರ್‍ಟ್ ಹೋಗಿಬುಟ್ಟನೆ."

ಆಗ ಸಹ ಯಾರೂ ಮಾತಾಡ್ತ್‌ಲೆ. ಅಪ್ಪನೇ ಮಾತಾಡ್ತ್,

"ತ್ಯಾಂಪಣ್ಣ ನೀವ್ಗೆ ನನ್ನ ಮೇಲೆ ಸಿಟ್ಟಿದ್ದರೆ ಅದ್ ತಪ್ಪಲ್ಲ. ಅಂದ್ ತಲೆ ವಿಪ್ರೀತ ಕೆಟ್ಟ್ ಹೋಗಿತ್ತ್. ನೀವ್ಗೆ, ಕುಸುಮಂಗೆ ಹೇಳಿಕಾಗದ ಮಾತ್ ಹೇಳಿಬುಟ್ಟೆ. ಮನುಷ್ಯ ಅಂದಮೇಲೆ ಎರ್ಡ್ ಮಾತ್ ಬಂದದೆ ಎರ್ಡ್ ಮಾತ್ ಹೋದೆ. ನನ್ನನ್ ಕೋಮಣ ಕಟ್ಟಿದ ದಿನಗಳ್‌ಂದ ನೋಡ್ತಾ ಬಂದೊವು ನೀವು. ನೀವು ಮತ್ತು ಕುಸುಮ ಕ್ಷಮೀಸಿಕಾಗದಷ್ಟ್ ದೊಡ್ಡ ತಪ್ಪ್‌ನ ನಾನ್ ಮಾಡಿಯೊಳೆನಾ? ನಿಮ್ಮ ಮನ್ಸಿಗೆ ನಾನ್ ಬೇನೆ ಮಾಡ್ದ್ ಹೌದು. ಅದ್ ನಾನ್ ಒಪ್ಪಿಕಣೆ. ಅದಕ್ಕೆ ಅಂದ್‌ಂದ ಇಂದಿನವರೇಗೆ ನಾನ್ ಬೇನೆ ತಿನ್ನುತ್ತೊಳೆ. ನನ್ನದ್ ಪೂರ್ತಿ ತಪ್ಪಾತ್. ಈಗ ನೀವಿಬ್ಬರ್ ದೊಡ್ಡ ಮನ್ಸ್ ಮಾಡಿ ಕ್ಷಮಿಸೋಕು."

"ನಿನ್ನಲ್ಲಿ ಮಾತಾಡಿಕಾಗದ್‌ಂತ ನಾನೇನ್ ಆಣೆ ಪ್ರಮಾಣ ಮಾಡ್ತಿಲೆ ಚಿನ್ನಪ್ಪ. ಮಾತಾಡ್ರೆ ಇನ್ನೇನ್ ಹೊಲ್ಸ್ ಕೇಳಿಕಾಗಿಬುಟ್ಟದೊಂತ ಸುಮ್ಮನಿದ್ದೆ. ಹಸಿ ಹೇಲಿಗೆ

ಕಲ್ಲ್ ಹೊಡ್ದ್ ಮೋರೆಗೆ ರಟ್ಟಿಸಿಕೊಂಬುದು ಯಾಕೆ ಹೇಳ್? ಮಾತಾಡಿ ಬೇನೆ ತಿಂಬೊದುಕ್ಕಿಂತ ಮಾತಾಡದಿರುದ್ದೇ ಒಳ್ಳೆದಲ್ಲ?"

"ನೀವು ಹಿರಿಯೊವು ತ್ಯಾಂಪಣ್ಣ. ಮನುಷ್ಯರ್ ಯಾಗೋಳು ಒಂದೇ ರೀತಿ ಇರಿಕೆ ಸಾದ್ಯನೋ? ಯಾಗೋಳು ನಗಾಡ್ತಾ ಮಾತಾಡ್ವ ನೀವು ಈಗ ಹೇಂಗೆ ಕೊಂಕು ಮಾತಾಡ್ತೊಳರಿ? ನಿಜ ಹೇಳ್ನೆ ತ್ಯಾಂಪಣ್ಣ. ಯಾರ ಮನ್ಸಿಗೆ ಕೂಡಾ ಬೇನೆ ಮಾಡ್ವ ಇಸ್ಟ ನಂಗಿತ್ಲೆ. ಯಾವ್‌ದೋ ಕೆಟ್ಟಗಳಿಗೆಲಿ ಎಲ್ಬಿಲ್ಲದ ನಾಲ್ಕೆ ಹಾಂಗೆ ಹೊರ್ಳಿಬುಡ್ತ್. ಮೊನ್ನೆ ನನ್ನ ಮದ್ವೆಗೆ ಬಂದ್ ಕಪಿಲೇಶ್ವರ ಸನ್ನಿದಿಲಿ ತಲೆಗೆ ನಾಲ್ಕ್ ಅಕ್ಕಿಕಾಳ್ ಹಾಕಿದೊವು ನೀವ್. ನೀವ್ಗೆ ಎಲ್ಲಾ ಸಂಗ್ತಿ ಗೊತ್ತುಟು. ಪರಿಸ್ತಿತಿನ ಒತ್ತಡಂದ ಆಗಿ ಹೋದ ತಪ್ಪುನ ನೀವಿಬ್ಬರೂ ಮರ್ತ್ ನನ್ನ ಕ್ಷಮಿಸೋಕು."

ಹಂಞ ಹಿಂದೆ ಅಪ್ಪನ ವರ್ತನೆಗೆ ಕಾರ್‍ಣ ಏನಿರ್‍ದಂತ ತ್ಯಾಂಪಣ್ಣ ಯೋಚನೆ ಮಾಡ್ತ್. ಅಪ್ಪನ ಮಾತ್ ಕೇಳಿ ಕೃತ್ರಿಮ ಏನೂ ಇಲ್ಲೆಂತ ತಿಳ್ಕಣ್ತ್. ಬಣ್ಣಕೆಟ್ಟ ಮೋರೆಲಿ ಬಾವನೆಗ ಅರ್ತ ಆಗ್‌ತಿತ್ಲೆ. ಒಂದು ಹಗಲ್ ಒಂದು ರಾತ್ರಿ ಲಾಕಪ್ಲೇ ಕಳ್ದುಟ್ಟು. ಯಾವ್ಯಾವ ರೀತಿನ ಶಿಕ್ಷೆ ಅನುಬವಿಸುಟ್ಟೋ ಏನೋ? ಅಂವ ಉಟ್ಟ ಬಟ್ಟೆ ಹೊಲ್ಸಾಗಿತ್ತ್. ಮೈವಾಸನೆ ಅಷ್ಟ್ ದೂರಕ್ಕೆ ಬರ್ತಿತ್. ತಲೆ ಕೂದಲ್ ಕೆದ್‌ರಿ ಹೋಗಿತ್ತ್. ಮೂರ್ಖರ್‍ನ ಬೆತ್ತಂದಲೇ ಮಾತಾಡ್‌ಸೋಕೂಂತ ಹೆಡ್‌ಮಾಸ್ಟ್ರ ಗೋವಿಂದಯ್ಯ ಹೇಳ್‌ತಿದ್ದದ್ ನೆನ್‌ಪಾತ್. ಎಸ್ಸೈ ಅಪ್ಪನ ಸರಿಯಾಗಿ ಹದಮಾಡಿಟ್ಟು. ಅವಂಗೀಗ ಪಶ್ಚಾತ್ತಾಪ ಆಗುಟ್ಟು. ಅವನ ಸರಿದಾರಿಗೆ ತಾಕೆ ಇದ್ ಸರಿಯಾದ್ ಅವಕಾಶಂತ ಅಮ್ಮಣ್ಣಿಗೆ ಅನ್ಸಿತ್.

"ನಾನ್ ಮರೆವೆ ಚಿನ್ನಪ್ಪಾ, ಕುಸುಮ ಹೇಂಗೆ ಮರಿದು? ನೀನ್ ಎಲ್ಲರೆದ್‌ರ್ ಅವಳ ಕುತ್ತಿಗೆಗೆ ತಾಳಿಕಟ್ಟಿ ಇಪ್ಪತ್ತ್ ವರ್ಸ ಕಳ್ತ್‌ಲೆನೋ? ಇಸ್ಟ್ ವರ್ಸಗಳ್ಲಿ ಅವಳ ನಡ್ತೆಲಿ ಒಂದೇ ಒಂದು ದೋಷ ಆದ್ರೂ ಕಂಡೊಳೊನೋ? ಸಂಶಯ ಇದ್ದರೆ ಈಗಳೇ ಹೇಳಿಬುಡು. ತಪಸ್ವಿನಿಲಿ ಮಿಂದ್ ಕಪಿಲೇಶ್ವರನ ನಡೆಲಿ ನಿಂತ್ ನಾನ್ ಪ್ರಮಾಣ ಮಾಡ್ನೆ, ಅವ್‌ಳೂ ಪ್ರಮಾಣ ಮಾಡ್ದೆ. ನೀನೂ ಪ್ರಮಾಣ ಮಾಡೋಕು. ಯಾವುದು ಸತ್ಯಂತ ಆ ಕಪಿಲೇಶ್ವರನೇ ತೀರ್ಮಾನಿಸಲಿ."

ಅಪ್ಪ ಮಾತಾಡ್ತ್‌ಲೆ. ಅಪ್ಪನ ಮೌನ ನೋಡಿ ಅಮ್ಮ ಹೇಳ್ತ್,

"ಇಲ್ಲಿ ನಾಲ್ಕ್ ಹುಟ್ಟಿದ ಮೇಲೂ ಅಲ್ಲಿ ಆ ರಂಡೆನ ಕಟ್ಟಿಕೊಂಡೊವು ನೀವ್. ನಿಮ್ಮ ಬಾಯಿಂದ ಅಂತ ಹೊಲ್ಸ್ ಮಾತಲ್ಲದೇ ಒಳ್ಳೆದ್ ಹೇಂಗೆ ಬಾದು? ಮನ್ಸಿಲಿ ಹೊಲ್ಸ್ ಇದ್ದರೆ ಬಾಯಿಲೂ ಬಂದದೆ. ಇಸ್ಟ್ ವರ್ಸ ನಿಮ್ಮೊಟ್ಟಿಗೆ

ಮರ್ಯಾದೆಂದ ಬಾಳಿದವಳಿಗಿಂತ ನಿನ್ನೆ ಮೊನ್ನೆ ನಿಮ್ಮ ಹಿಂದೆ ಮರ್ಯಾದೆಗೆಟ್ಟ್ ಬಂದ ಆ ಹಲ್ಕಟ್ ಮುಂಡೆ ನೀವ್ಗೆ ಹೆಚ್ಚಾತಲ್ಲ? ನಮ್ಮನೆಲ್ಲಾ ಮನೆಂದ ಹೊರಗೆ ಹಾಕಿ ಅವಳ್ನ ಇಲ್ಲಿಗೆ ಕರ್ಕಂಡ್ ಬಂದ್ ಮೆರ್ಸೋಕುಂತ ಗ್ರಹಿಸಿದರಲ್ಲಾ? ಕರ್ಕಂಡ್ ಬನ್ನಿ ಅವಳ್ನ. ಅವ್ಳ ಮುಸುಂಡಿಗೆ ನನ್ನ ಹಳೆ ಮೆಟ್ಟ್‌ಲಿ ಬಾರ್ಸದಿದ್ದರೆ ಕೇಳಿ. ಈಗ ಪೋಲೀಸ್ ಸ್ಟೇಶನ್ನ್‌ಲಿ ಪಲಹಾರ ಸಿಕ್ಕಿದಕ್ಕೆ ನಿಮ್ಮ ಮದ ಇಳ್ದಿರೋಕು. ಆ ಬೇವಾರ್ಸಿ ಬೊಗ್ಗಿನ ಹಿಂದೆ ಸೋಣದ ನಾಯಿಯ ಹಾಂಗೆ ಜೊಲ್ಲು ಸುರ್ಸಿಕಂಡ್ ಹೋದು ಬುಟ್ಟು ಈಗ ಇಲ್ಲಿಗೆ ಬಂದದ್ ಯಾಕೆ? ಮೊನ್ನೆ ಎಸ್ಟ್ ಕೆಡ್ಕ ಮಾತಾಡ್ದರಿ? ಮದ ಏರಿ ಎರಡ್ನೆ ಮದ್ವೆಯಾದೊವು ನೀವು. ನೀವ್ಗೆ ಆ ಮಾತ್‌ಗ ದೊಡ್ಡದಲ್ಲಂತ ಅನ್ಸಿರ್ದು. ನನ್ನನ್ ಅದ್ ಸಾಯುವವರೇಗೂ  ಚುಚ್ಚುತಿದ್ದದೆ. ಹೆಣ್ಣ್‌ನ ಶೀಲದ ಬಗ್ಗೆ ಇಲ್ಲದರ ಹೇಳಿರೆ ಮತ್ತೆ ಸಂಸಾರ ಸರಿಯಾದುಂತ ಗ್ರಹಿಸಿರೆನೋ? ನಿಮ್ಮ ಆ ಕೊಳ್ಕು ಮುಸುಂಡುನ ನೋಡಿಕೂ ನಂಗೆ ಹೇಸಿಕೆಯಾದೆ."

ಅವ್ವ ಬಾರೀ ದೈರ್ಯಂದ ಮಾತಾಡ್‌ತಿತ್ತ್. ಚಿಕ್ಕಪ್ಪ ಮತ್ತು ಮಾವ ಇರಿಕಾಕನ ಅಪ್ಪಂದ ಏನೂ ಮಾಡಿಕೆ ಆಕಿಲ್ಲಂತ ಅವ್ಳಿಗೆ ಗೊತ್ತಿತ್ತ್. ಎಸ್ಸೈ ಲಾಕಪ್ಪಿಲಿ ಅಪ್ಪನ ಬೆಂಡೆತ್ತದಿರ್‌ತಿದ್ದರೆ ಅವನ ಅಹಂಕಾರ ಇಳಿತಿತ್ಲೆ. ಒಂದು ಹಗ್‌ಲ್ ಒಂದು ರಾತ್ರಿ ಅಲ್ಲಿ ಕೊಳ್ತಂವ ಮತ್ತೆ ಲಾಕಪ್ಪಿಗೆ ಹೋಗುವ ಹುಂಬುತನ ತೋರ್ಸಿಕೆ ಸಾದ್ಯ ಇಲ್ಲೆಂತೇಳ್ವ ದೈರ್ಯಂದ ಅವ್ವ ಮೊನ್ನೆ ಆದ ಅಪಮಾನನ ಬಡ್ಡಿ ಸಹಿತ ಹಿಂತಿರಿಗಿಸಿತ್ತ್.

ಅಪ್ಪ ತಲೆ ಕೆಳಗೆ ಹಾಕಿ ಕುದ್ದಿತ್ತ್. ಅವ್ವನ ವರಸೆ ನೋಡ್ರೆ ಅವ್ಳ್ ಇನ್ನಸ್ಟ್ ಜಗಳ ಕಾಯಕೆ ತಯಾರಿ ಮಾಡಿಕಂಡ ಹಾಂಗೆ ಇತ್ತ್. ಅಪ್ಪಂಗೆ ಮತ್ತೆ ಜಗಳ ಕಾಯುವ ಮನಸಿತ್ಲೆ. ಈ ಸರ್ತಿ ಜಗಳಕ್ಕೆ ಮುಂದೆನೇ ಅಂವ ಸೋಲೊಪ್ಪಿಕೊಂಡಿತ್ತ್. ಯಾರೂ ಮಾತಾಡ್ದರ ಕಂಡ್ ಪೋಲೀಸ್ ಮಾವ ಹೇಳ್ತ್,

"ಬಾವಾ, ಮನೆಲಿ ಎಲ್ಲಾ ಸರಿ ಇರಿಕಾಕನ ನೀವು ಪ್ರಾಯ ಆದರೂ ಮರು ಮದ್ವೆ ಆದರಿ. ನಮ್ಮ ಅಮ್ಮಣ್ಣಿಗೆ ಹದ್ನೆಂಟ್ ದಾಟಿತ್. ಮೆಜಾರಿಟಿಗೆ ಬಂದಿರುವ ಮಗಳಿಗೆ ಮದ್ವೆ ಮಾಡುವ ಬದಲ್ ಇನ್ನೊಂದು ಮದ್ವೆಯಾಕೆ ನೀವ್ಗೆ ಹೇಂಗೆ ಮನ್ಸ್ ಬಾತ್ ಹೇಳಿ. ಹಿಂದೆ ಗಂಡ್ ಮಂಜ ಬೇಕೂಂತ ಕಾರಣ ಹೇಳ್ತಿದ್ದರಿ. ಈಗ? ಹೋಗ್ಲಿ ಯಾವುದೋ ಒತ್ತಡಲಿ ನೀವ್ಗೆ ಮದ್ವೆ ಆಗಕ್ಕಾಗಿ ಬಾತ್‌ಂತ ಇಸಿಕಂಬನ. ಆ ಮೇಲಾದ್ರ್ ಸುಮ್ಮನಿರಕಾಗಿತ್ತಲ್ಲ? ನೀವ್ಗೆ ಆ ಹೆಣ್ಣಿನ ಕಡೆವು ಜಾಗ ಕೊಟ್ಟೊಳೊ. ಮನೆನೂ ಕಟ್ಟಿಸಿಕೊಟ್ಟೊಳೊ ಮತ್ತೆ ಇಲ್ಲಿಗೆ ಬಂದದ್ ಯಾಕೆ?

ಇಲ್ಲಿ ಅಕ್ಕ ಹೇಂಗೂ ನಾಲ್ಕ್ ಮಕ್ಕಳೊಟ್ಟಿಗೆ ದಿನ ಕಳೆಯುವವಳ್ನ ಹೆದ್ರಿಸಿ ಮನೆಂದ ಹೊರ್ಕಡೆ ಹಾಕುವ ಮಾತಾಡ್‌ತ್ತೊಳರಿಯಲ್ಲಾ? ಇದ್ ಸರಿನೋ? ನಿಮ್ಮ ನಂಬಿ ಬಂದ ಅಕ್ಕಂಗೂ, ನಿಮ್ಮ ಅಪ್ಪಂಗೆ ಸಮಾನಾದ ತ್ಯಾಂಪಣ್ಣಂಗೂ ಸಂಬಂದ ಕಲ್ಪಿಸಿ ಬುಟ್ರೆಲ್ಲಾ? ಇದ್ ಅನ್ನ ತಿಂಬೊವು ಹೇಳ್ವ ಮಾತೋ?." ಅಪ್ಪ ನಿಟ್ಟಿಸಿರ್ ಬುಟ್ಟತ್.

"ಏನ್ ಬೇಕಾದ್ರೂ ಹೇಳಿಬುಡು ಕೃಷ್ಣಪ್ಪ. ಹಳ್ಳಕ್ಕೆ ಬಿದ್ದ ತೋಳಕ್ಕೆ ಎಲ್ಲವು ಕಲ್ಲ್ ಬೀಸಾಕುವೆ. ಎಲ್ಲವುಕೂ ಕೆಟ್ಟ ಗಳಿಗೆಂತ ಬಂದದೆ. ಆಗ ಆಡಬಾರದ ಮಾತ್ ಬಂದ್‌ಬುಟ್ಟದೆ. ಆಗಬಾರ್ದ್ ಆಗಿ ಹೋದೆ. ಎಲ್ಲಾ ನನ್ನ ಹಣೆಲಿ ಬರ್ದ್‌ದ್‌ಂತ ಕಂಡದೆ. ಆ ಬರ್ಮ ಬರ್ದದರ ಮೀರಿಕೆ ಯಾರಿಗೆ ಸಾದ್ಯ ಉಟ್ಟು ಹೇಳ್. ಎಲ್ಲೋ ನನ್ನ ಜನ್ಮ ನಕ್ಷತ್ರಕ್ಕೆ ಶನಿ ಪ್ರವೇಶ ಆಗಿರೋಕು. ಕೆಟ್ಟ ಗ್ರಾಚಾರ. ಅದ್ ಹೀಂಗೆಲ್ಲಾ ಆಡಿಸ್ತುಟ್ಟ್. ಮಾಡ್ದ ತಪ್ಪುನ ಹೇಳಿಕಂಡೇ ಇದ್ದರೆ ಅದ್ ಸರಿ ಆದೆನೋ? ತಪ್ಪುನ ಕ್ಷಮಿಸುದು ದೇವರ ಗುಣ. ನನ್ನ ತಪ್ಪಿಗೆ ನಾನ್ ತ್ಯಾಂಪಣ್ಣನ ಕಾಲ್ ಹಿಡ್ದನೆ. ಕುಸುಮಂಗೆ ಹಾಂಗೆ ಹೇಳ್ದಕ್ಕೆ ಆ ವೆಂಕಟ್ರಮಣ ದೇವ್ರಿಗೆ ಮುಡಿಪು ಕಟ್ಟಿನೆ. ನಂಗೀಗ ಸಮಾದಾನವೇ ಇಲ್ಲೆಂತಾಗುಟು. ಸ್ಟೇಶನ್‌ಂದ ಎಲ್ಲಿಗೂ ಹೋಗದೆ, ಸ್ನಾನನೂ ಮಾಡದೆ ಸೀದಾ ಇಲ್ಲಿಗೆ ಬಂದದ್. ಎಲ್ಲವು ನಂಗೆ ಮಾಪು ಕೊಡೊಕು."

"ನಾನ್ ಕ್ಷಮಿಸಿನೆ ಚಿನ್ನಪ್ಪಾ ಹೆಚ್ಚೆಂದರೆ ನಾನ್ ಇನ್ನ್ ಹತ್ತ್ ವರ್ಸ ಬದ್ಕುವೆ. ಆದ್ರೆ ಕುಸುಮ ತುಂಬಾ ಬೇನೆ ತಿಂದುಟು. ತಪ್ಪು ಮಾಡಿ ಕ್ಷಮಿಸಿಂತೇಳಿರೆ ಮುಗ್ದ್ ಹೋದ್ಲೆ. ನಿನ್ನ ಮಾತ್, ಕತೆ, ನಡವಳಿಕೆಲಿ ಬದಲಾವಣೆ ಕಾಣೋಕು." ಅವ್ವನ ಸಿಟ್ಟ್ ಇನ್ನೂ ಇಳ್ದಿತ್ಲೆ.

"ನಿಮ್ಮ ಮಾತ್ಲಿ ನಂಗೆ ವಿಶ್ವಾಸ ಇಲ್ಲೆ. ಅಂದ್ ನೀವ್ ಹದ್ನಾರರ ಕುಲೆ ಕಾರ್ಯಕ್ರಮದಂದ್ ಅಷ್ಟ್ ಜನ್ರೆದ್‌ರ್ ಆಡ್ದ ಮಾತ್‌ನ ಉಳ್ಸಿಕಂಬಕ್ಕೆ ನಿಮ್ಮಂದ ಆತ್ಲೆ. ಈಗ ನಾವ್ ನಾಲ್ಕ್ ಜನರೆದ್‌ರ್ ಮಾಪು ಕೊಡೀಂತ ಕೇಳ್ತೊಳರಿ. ಅದ್ ನಿಮ್ಮ ಒಳ ಮನ್ಸ್‌ಂದ ಬಂದ ಮಾತ್‌ಂತ ನಂಗೆ ಅನ್ಸುದ್ಲೆ. ನಿಮ್ಮಂತ ಗಂಡ್ಸ್‌ರ್ ಕೆಸ್ರ್ ಕಂಡಲ್ಲಿ ತುಳ್ದರೆ. ನೀರ್ ಕಂಡಲ್ಲಿ ತೊಳ್ದರೆ. ನೀವ್ ಇಸ್ಟಪಟ್ಟ ಅವಳ್ನ ಕಟ್ಟಿಕೊಂಡಾತ್. ಮತ್ತೆ ಇಲ್ಲಿಗೆ ಬಾದು ಯಾಕೆ? ನೀವು ನಂಗೆ ಮೋಸ ಮಾಡ್ದರಿ. ಅವ್ಳಿಗೂ ಯಾಕೆ ಮೋಸ ಮಾಡ್ದು. ನೀವ್ಗೆ ನಿಜವಾಗಿ ಪಶ್ಚಾತ್ತಾಪ ಆಗಿದ್ದರೆ ಅಲ್ಲಿನೇ ಉಳ್ದ್‌ಬುಡಿ. ಇಲ್ಲಿ ನನ್ನ ಮತ್ತು ಮಕ್ಕಳ್ನ ನೆಮ್ಮದಿಂದ ಇರಿಕೆ ಬುಡಿ"

ಅಪ್ಪ ಏನೂ ಮಾತಾಡ್‌ತ್ಲೆ. ಅದರ ನೋಡಿ ಪೋಲೀಸ್ ಮಾವ ಹೇಳ್ತ್,

"ಹೌದು ಬಾವ. ಎಸ್ಸೈ ಆಸ್ತಿನ ಎರ್ಡ್ ಪಾಲ್ ಮಾಡುವ ಬಗ್ಗೆ ಹೇಳ್ದೊಲ್ಲ? ಆಗ ನೀವೂನೂ ಒಪ್ಪಿದರಿ. ಅದೇ ಸರಿಯಾದ್ದ್. ನಿಮ್ಮ ಪಾಲ್ ನ ಎರಡ್ ಲಕ್ಷ ಶಿವಪ್ಪ ಬಾವ ಕೊಟ್ಟವೆ. ಗಂಡ್ ಕೂಸು ಆದ ಮೇಲೂ ಎರಡ್ನೆ ಮದ್ವೆಯಾದ ನೀವು ಇನ್ನ್ ಇಲ್ಲಿಗೆ ಬರುದರ್ಲಿ ಅರ್ತ ಇಲ್ಲೆ. ಎರ್ಡ್ ಮದುವೆಯಾದರೆ ಇಬ್ಬರಿಗೂ ನ್ಯಾಯ ಕೊಡಿಕೆ ಸಾದ್ಯ ಇಲ್ಲೆ ಬಾವಾ. ಅಕ್ಕಂಗೆ ಆದ ಅನ್ಯಾಯ ಸರಿಪಡ್ಸಿಕೆ ಇನ್ನ್ ಸಾದ್ಯನೇ ಇಲ್ಲೆ. ನಿಮ್ಮ ಎರಡ್ನೆ ಹೆಣ್ಣಿಗಾದ್ರೂ ಅನ್ಯಾಯ ಆಗದಿರ್ಲಿ. ನೀವ್ ಅವಳೊಟ್ಟಿಗೆ ಅಲ್ಲಿ ಸುಕವಾಗಿರಿ. ಕಸ್ಟನೋ ಸುಕನೋ ಅಕ್ಕ ಹೇಂಗಾದ್ರ್ ನಿಬಾಯ್ಸಿಕಂಡ್ ಹೋದೆ."

"ಪೋಲಿಸ್ ಸ್ಟೇಶನ್‌ಲಿ ಆದ ಮಾತ್‌ಕತೆ ಬಗ್ಗೆ ಯೋಚಿಸಿ ಯೋಚಿಸಿ ಇಲ್ಲಿಗೆ ಬಾಕಾತ್ ಕೃಷ್ಣಪ್ಪ. ಅಪ್ಪ ಬದ್ಕಿರಿಕಾಕನ ಅವಳ್ನ ಮದ್ವೆಯಾಗನಂತ ಅನ್ನಿಸಿದ್ ನಿಜ. ಹದ್ನಾರರ ಕುಲೆಯಂದ್ ಅಷ್ಟ್ ಜನ್ರದ್‌ರ್ ಹಾಂಗೆ ಮಾತ್ ಕೊಟ್ಟ ಮೇಲೆ ಆ ಆಸೆನ ಬುಟ್ಟಿದ್ದೆ. ಇವ್ಳಿಗೆ ಗಂಡ್ ಕೂಸೂ ಆದಮೇಲಂತೂ ಮದ್ವೆಯಾಗುವ ಮನ್ಸೂ ಇತ್ಲೆ. ಆದ್ರೆ ಏನ್ ಮಾಡ್ದು ಹೇಳಿ. ನಾವು ಬುಟ್ಟರೂ ಶನಿ ನಮ್ಮ ಬುಡುದ್ಲೆ. ಎಲ್ಲಾ ನನ್ನ ಕರ್ಮ ಅಲ್ಲಿ ಮನೆಯುಟ್ಟು, ಜಾಗವುಟ್ಟು ನಿಜ. ಆದ್ರೆ ಅದ್ ನನ್ನ್‌ದಾ? ಅಲ್ಲ ನನ್ನ ಅಪ್ಪ ಮಾಡ್ದಾ? ಅದ್ ಅವಳ್ದ್. ಅವ್ಳ ಹಂಗ್‌ಲಿರಿಕೆ ನಂಗೆ ಮನ್ಸ್ ಬಾದೇಲೆ. ಈ ಕುಸುಮನ ಕುತ್ತಿಗೆಗೆ ತಾಳಿ ಕಟ್ಟಿಕಾಕನ ಒಂದು ಚಿಕ್ಕಾಸಿಗೂ ಕೈಯೊಡ್ಡಿದವ ನಾನಲ್ಲ. ಇಲ್ಲಿ ಮನೆಯ ಹಿರಿಯಂವಾಗಿ ಎಲ್ಲವುಕೂ ಕೊಟ್ಟು ಗೊತ್ತೇ ಹೊರ್ತು ಬೇಡಿಗೊತ್ಲೆ. ಅಲ್ಲಿ ಬೀಡಿಕಟ್ಟಿಗೂ ಅವ್ಳಲ್ಲಿ ಬೇಡಕಾದೆ. ಎಸ್ಟಾದ್ರ್ ನಾನ್ ಗಂಡ್ಸಲ್ಲನೋ? ಇನ್ನ್ ನಮ್ಮ ಕುಲದೈವಗಳ ಸ್ತಾನ ಇರ್ದು ಇಲ್ಲಿ. ಅಪ್ಪನ ದೂಪೆ ಇರ್ದೂ ಇಲ್ಲಿ. ಹಿರಿಯ ಮಂಜ ಬದ್ಕಿರಿಕಾಕನ ದೈವಗಳಿಗೆ, ಕಾರ್ನೂರಿಗೆ, ಅಪ್ಪಂಗೆ ಸಣ್ಣ ಮಂಜನೋ, ಸೊಸೆನೋ ಬಡ್ಸುದು ಸರಿಯಾದೆನೋ? ಇಲ್ಲಿ ಈ ಎಲ್ಲ ಕ್ರಿಯೆಗಳ್ನ ಮಾಡದೆ ಅಲ್ಲಿ ನಾನ್ ನೆಮ್ಮದಿಂದಿರಿಕೆ ಸಾದ್ಯನೋ?"

"ಹಾಂಗಾದರೆ ಈಗ ಏನ್ ಮಾಡೊಕುಂತೊಳರಿ ಬಾವಾ?"

"ಪಾಲೂ ಬೇಡ ಏನ್ ಬೇಡ ಕೃಷ್ಣಪ್ಪ. ಮುಂದೆನ ಹಾಂಗೆ ಇದ್ದ್‌ಬುಡೊಮೊ. ನಾವ್ ಪಾಲಾಗದೆ ಇಷ್ಟ್ ವರ್ಷ ಬದ್ಕಿತ್ಲೆನೋ? ಮಕ್ಕಳ ಕಾಲಕ್ಕೆ ಬೇಕಾದ್ರೆ ಪಾಲಾಗಲಿ. ಇದ್ ಪಿತ್ರಾರ್ಜಿತ. ಶಿವಪ್ಪಂಗೆ ಇದರ್ಲಿ ಅರ್ದಬಾಗ ಕೊಡಕ್ಕಾದ್ ದರ್ಮ. ಅವ್ನ ಪಾಲಿಗೆ ನಾವೆಲ್ಲಾ ಸೇರಿ ಒಂದು ಬೆಲೆ ಕಟ್ಟನೋ. ಅಷ್ಟ್ ಜಾಗದ ಉತ್ಪತ್ತಿಲಿ ಹಂಞಾ ಹಂಞನೇ ತೀರ್ಸಿಬುಟ್ಟನೆ. ಅಪ್ಪ ಮಾಡ್ದ ಜಾಗಕ್ಕೆ ಮಕ್ಕ ಸ್ವಲ್ಪಾದ್ರೂ ಸೇರ್ಸೋಕು. ಅದಾಗದಿದ್ದರೆ ಇರುದರ್ನ ಪಾಲ್ ಮಾಡದೆ ಅನುಬವಿಸೋಕು. ಅಪ್ಪ ಮಾಡ್‌ದರ್ನ

ನಾವ್ ಪಾಲ್‌ಮಾಡಿಕಂಡ್ ತಿಂಬೋದರ್‍ಲಿ ಯಾವ ಪುರ್ಸಾರ್ತ್ರನೂ ಇಲ್ಲೆ."
ಎಲ್ಲವೂ ಆಶ್ಚರ್ಯಂದ ಅಪ್ಪನ ಕಣ್ಣ್ ಬಾಯಿ ಬುಟ್ಟ್ ನೋಡ್ತಿದ್ದೊ.
"ಅಮ್ಮಣ್ಣಿಗೆ ಇನ್ನ್ ಗಂಡ್ ಬರ್‍ವ ಕಾಲ. ಆಗ ಅಪ್ಪಂತೇಳಂವ ಜೀವಲಿದ್ದೂ ಮನೆಲಿ ಇಲ್ಲದಿದ್ದರೆ ಹೇಂಗೆ? ಕುಸುಮಂಗೆ ನನ್ನ ಮೇಲೆ ಸಿಟ್ಟಿದ್ದರೆ ನನ್ನ ಹತ್ರ ಸೇರ್‍ಸುದು ಬೇಡ. ಆದ್ರೆ ಮಕ್ಕಳಿಗೆ ಅಪ್ಪ ಇಲ್ಲೆಂತಾಕಾಗದ್. ನೀವ್ಗೆ ನನ್ನ ಮನ್ಸ್ ಅರ್ತ ಆದೂಂತ ತಿಳ್ದನೆ. ನೀವ್ಗೆ ಇಸ್ಟನೇ ಇಲ್ಲೆಂತಾದರೆ ಮತ್ತೆ ಪೋಲೀಸ್ ಸ್ಟೇಶನ್‌ಗೆ ಹೋಗ್ವ ಮಾತ್ ಬೇಡ. ಆಸ್ತಿಲಿ ನಂಗೆ ಒಂದಸ್ಟ್ ಜಾಗೆನೂ ಬೇಡ. ನಾನ್ ಹೊರ್‍ಟ್ ಹೋನೆ. ನನ್ನ ಗ್ರಾಚಾರನ ಅನ್ಬವಿಸಕಾದ್ ನಾನೆ ತಾನೆ."

"ಸಂಪ್ರದಾಯ ಪ್ರಕಾರ ಬಂದಿರುವ ಕುಲಾಚಾರಗಳ ಹಿರಿಮಂಞ ಆಗಿ ಮುಂದುವರ್‍ಸಿಕಂಡ್ ಹೋಕಾದ್ ಅಣ್ಣನೇ. ನಂಗೆ ನನ್ನ ಜಾಗದ ಉತ್ಪತ್ತಿನೇ ಜಾಸ್ತಿ ಆದೆ. ಈ ಆಸ್ತಿಲಿ ನಂಗೆ ಪಾಲ್ ಬೇಡ. ಪಿತ್ರಾರ್ಜಿತ ಎಂಬ ಕಾರಣಕ್ಕೆ ನಾನ್ ಪೋಲೀಸ್ ಸ್ಟೇಶನ್‌ಲಿ ಪಂಚಾತಿಕೆಗೆ ಒಪ್ಪಿದ್. ಪಾಲ್ ಆಗಿಯೇ ಆಕುಂತಾದರೆ ನನ್ನ ಪಾಲ್ನ ಈ ಮಕ್ಕಳಿಗೇ ನಾನ್ ಕೊಡ್ದು. ಅಣ್ಣ ಮುಂದೆನ ಹಾಂಗೆ ಇದ್ದದೆಂತಾದರೆ ನಂಗೆ ಸಂತೋಷನೆ. ಆದ್ರೆ ಅಣ್ಣನೊಟ್ಟಿಗೆ ದಿನಕಳೆಕಿರುದು ಅತ್ತಿಗೆ. ಅವು ಏನ್ ಹೇಳ್ವೆನೋ ಅದೇ ಅಂತಿಮ." ಚಿಕ್ಕಪ್ಪ ಹೇಳ್ತ್.
ಅವ್ವ ಸೆರ್‍ಗ್‌ಂದ ಕಣ್ಣ್ ಒರ್‍ಸಿಕಂಡ್–

"ನಾನೇನ್ ಅವರ್‍ನ ಹೊರ್‍ಟ್ ಹೋಗಿಂತೇನಾದ್ರ್ ಹೇಳಿಯೊಳೆನೋ? ಅವೇ ಈ ಮನೆಂದ ನಮ್ಮನ್ನೆಲ್ಲಾ ಓಡ್ಸಿಕೆ ನೋಡ್ದ್. ಅವು ಮುಂದೇನ ಹಾಂಗೆ ಇರ್‍ದುಂತಾದರೆ ನಾನ್ಯಾಕೆ ಬೇಡಂತೇಳಿನೆ. ನಾಲ್ಕ್ ಮಕ್ಕಳ ಅವ್ವ ನಾನ್. ಮಕ್ಕಳ್ನನೂ, ಆಸ್ತಿನೂ ನೋಡಿಕಂಬಕೆ ಹೆಣ್ಣ್ ಹೆಂಗ್ಸೊಬ್ಬಳಿಗೆ ಎಷ್ಟ್ ಕಷ್ಟಂತೇಳುವಂತದ್ದ್ ನಂಗೀಗ ಗೊತ್ತಾಗುತುಟ್ಟು. ಮನೆನೂ, ಮಕ್ಕಳ್ನೂ ಅವು ಸರಿಯಾಗಿ ನೋಡಿಕಂಡವೆಂತಾದರೆ ಆಸ್ತಿ ಪಾಲಾದು ಬೇಡ. ಕುಸುಮಂದಾಗಿ ಆಸ್ತಿ ಪಾಲಾತ್‌ಂತ ಊರ್‍ನವು ಆಡಿಕಂಬದು ಬೇಡ."

ಆಗ ತೀರ್ತದ ತ್ಯಾಂಪಣ್ಣ ಬಾಯಿ ಬುಟ್ಟತ್.

"ಆತ್, ನೀವು ಗಂಡ ಹೆಣ್ಣ್ ಒಂದಾದುಂತಾದರೆ ಬೇಡಂತೇಳಿಕೆ ನಾವ್ಯಾರ್? ಸಂತೋಸನೆ. ಚೆನ್ನಪ್ಪ ಮನೆನ ಹಿರಿಯಂವಾಗಿ ಮಾಡಕಾದ ಕೆಲ್ಸ ತುಂಬಾ ಉಟ್ಟು. ಅಂವ ಈಗ ಸತ್ತ್ ಹೋದೊವುಕೆ ಮಾಡಕಾದ ಕ್ರಿಯೆಗಳ ಬಗ್ಗೆ ಮಾತಾಡ್ತ್. ಈಗವಂಗೆ ನಾಲ್ಕ್ ಮಕ್ಕ ಒಳೊ. ಹೊಸ್ದಾಗಿ ಕಟ್ಟಿಕೊಂಡವಳ್ದಂದ ಕಪಿಲೇಶ್ವರನ

ದಯಂದ ಮಕ್ಕಳಾದರೆ ಇವನ ಸಂಸಾರ ಬಾರಿ ದೊಡ್ಡದಾದೆ. ಮಕ್ಕಳ ಬಗ್ಗೆ ಏನ್ ಯೋಚನೆ ಮಾಡಿಯೊಳ ಚಿನ್ನಪ್ಪಾ?"

"ಯೋಚನೆ ಮಾಡಿಕೇನುಟ್ಟು ತ್ಯಾಂಪಣ್ಣಾ? ಅವರ ದಾರಿ ಅವು ನೋಡಿಕಂಡವೆ. ಇವ್ಳ್ ಅಮ್ಮಣ್ಣಿ ಪಿ.ಯು.ಸಿ.ಲಿ ಕರ್ ಹಾಕಿತಲ್ಲಾ? ಇವ್ಳ್ ಬಾಗವತಿಕೆ ಮಾಡಲಿ. ಅವಳ್ ಬಾಳಕ್ಕ ಯಕ್ಷಗಾನ ವೇಷ ಹಾಕಿ ಕೋಣಿಯಲಿ. ಇವರ್ನ ಯಾವುದಾದ್ರ್ ಮೇಳಕ್ಕೆ ಸೇರ್ಸಿನೆ. ಶಾರದೆನೂ ಇವರ ದಾರಿನೇ ಹಿಡಿಯಕೂ ಸಾಕ್. ಇನ್ನ್ ಹೈದನ ಇಂಜಿನಿಯರ್ ಮಾಡ್ನೋಕುಂತೊಳೆ. ಮತ್ತೆ ಅವ್ಳಲ್ಲಿ ಮಕ್ಕಳಾದು ಅಷ್ಟ್ರಲ್ಲೇ ಉಟ್ಟು, ಒಂದು ವೇಳೆ ಆದರೆ ಅಲ್ಲೇ ಆಸ್ತಿ ಉಟ್ಟಲ್ಲಾ."

ಅಮ್ಮಣ್ಣಿಗೆ ಅಪ್ಪನ ಮೇಲೆ ವಿಪರೀತ ಕೋಪ ಬಾತ್. ಹೆಣ್ಣ್‌ಮಕ್ಕ ಹೇಂಗೆ ಬೇಕರೂ ಸಾಯಲಿ, ಮಂಜ ಇಂಜಿನಿಯರ್ ಆಕು! ಮಾತಾಡ್ದು ಬೇಡಂತಿದ್ದರೂ ಮಾತಾಡಕ್ಕಾಗಿ ಬಾತ್.

"ಹೆಣ್ಣ್‌ಮಕ್ಕಂತೇಳಿರೆ ನಿಂಗೆ ಯಾಕಪ್ಪಾ ಹೀಂಗೆ ತಾತ್ಸಾರ? ಒಂದು ದಿನ ಶಾಲೆಲಿ ಏನ್ ನಡ್ದದೆಂತ ನೀನ್ ಕೇಳ್ದುಟ್ಟೋ? ಹೈಸ್ಕೂಲುವರೇಗೆ ನಾನ್ ಒಮ್ಮೆ ಆದ್ರ್ ಪೈಲ್ ಆಗಳೆನೋ? ಅಲ್ಲಿ ಜೂನಿಯರ್ ಕಾಲೇಜಿಲಿ ಒಂದೊಂದು ಕ್ಲಾಸಿಲಿ ಎಷ್ಟೆಷ್ಟ್ ಮಕಳೊಳೊಂತ ಒಮ್ಮೆ ಹೋಗಿ ನೋಡು. ಮಾಸ್ಟ್ರಗ ಎಷ್ಟೊಳಂತ ಕೇಳ್. ಮಾಸ್ಟ್ರಗ ಸಾಕಷ್ಟ್ ಇಲ್ಲದಿದ್ರೆ ಪಾಠ ಸರಿಯಾಗಿ ಆದೆನೋ? ನಂಗೆ ಗೊತ್ತಾಗದರ ಹೇಳಿಕೊಡೊವು ಯಾರೊಳೊ? ಯಕ್ಷಗಾನ ನಂಗೆ ಅಜ್ಜಂದ ಬಂದದ್. ಕಲಾವಿದರಾಕೆ ಪೂರ್ವ ಜನ್ಮದ ಪುಣ್ಯ ಪಲ ಬೇಕೂಂತ ಗುರುಗ ಹೇಳಿವೆ. ಅಜ್ಜನ ಕಲೆನ ಬೆಳ್ಸಿಕೆ ನಿನ್ನಿಂದಾತ್ಲೆ. ನಿನ್ನ ಮಕ್ಕ ನಿನ್ನಿಂದಾಗದರ ಸಾದಿಸ್‌ತ್ತೊಳಲ್ಲ. ಅದ್ಕೆ ನೀನ್ ಹೆಮ್ಮೆ ಪಡಕಪ್ಪಾ. ನಾನ್ ಒಮ್ಮೆ ಪೇಲಾಗಿರುವೆ. ಇನ್ನೊಮ್ಮೆ ಕಟ್ಟಿ ಪಾಸಾನೆ. ದೊಡ್ಡ ಕಾಲೇಜಿಗೆ ಹೋಗಿ ಡಿಗ್ರಿ ಮಾಡ್ನೆ. ಇನ್ನ್ ಇಲ್ಲೆಂತೇಳಿಕಾಗದ್."

ಹೆಂಗಸ್ರ್ ಓದಿರೂನೂ ಹೆರ್ದು ತಪ್ಪಿದೆನೋ ಅಮ್ಮಣ್ಣಿ? ಆತ್ ನೀನ್ ಬಿ.ಎ. ಓದಿ ಮತ್ತೇನ್ ಮಾಡಿಯಾ?"

ಮುಂದೇನ್ ಮಾಡ್ದೂಂತ ಅವ್ಳಿನ್ನೂ ಯೋಚಿಸಿತ್ಲೆ. ಉತ್ತರಕ್ಕಾಗಿ ತಡಕಾಡಿಕ್ಕಾಕನ ತ್ಯಾಂಪಣ್ಣ ಹೇಳ್ತ್, "ಓದಿ ಇನ್ನೇನೂ ಆಗದಿದ್ರೂನು ಬುದ್ಧಿವಂತಳಾಗಿಯೇ ಆದೆ. ನೀನ್ ಮತ್ತು ಕುಸುಮ ಕಾಲೇಜಿಗೆ ಹೋಗಿ ಕಲೀತಿದ್ರೆ ಅಮ್ಮಣ್ಣಿಗೆ ಗೊತ್ತಾಗದ್ದನ್ನ ಹೇಳಿಕೊಡಿಕೆ ನೀವ್ಗೆ ಆಗ್ತಿತ್ತಲ್ಲ? ಆಗ ಅವ್ಳ್ ಪಿ.ಯು.ಸಿ.ಲಿ ಕರ್ ಹಾಕುವ ಪ್ರಸಂಗ ಬರ್ತಿತ್ಲೆ. ನಮ್ಮಪ್ಪ ಅವ್ವ ಓದದಕ್ಕೆ ನಾವ್ ದಡ್ಡರಾಗೊಳೊ.

ಮುಂದಿನವು ನಮ್ಮ ಹಾಂಗೆ ದಡ್ಡ ಶಿಕಾಮಣಿಗಳ ಪೀಳಿಗೆಯವು ಆಕೋ ಚಿನ್ನಪ್ಪಾ? ಮಕ್ಕಳ್ನ ಹುಟ್ಟಿಸಿ ಹಾಕುದು ಗಂಡಸ್ತನ ಅಂತ ತಿಳ್ಕಂಬಡ. ಲಾಯ್ಕ್ ಓದಿಸಿ ಬುದ್ಧಿವಂತರನ್ನಾಗಿ ಮತ್ತು ಸಂಸ್ಕಾರವಂತರನ್ನಾಗಿ ಮಾಡುದೇ ನಿಜವಾದ ಗಂಡಸ್ತನ. ಮಕ್ಕಳಿಗೆ ಎಷ್ಟ್ ಬೇಕೋ ಅಷ್ಟ್ ಓದಿಸಕ್ಕಾದ್ ಹೆತ್ತವರ ದರ್ಮ. ಅವ್ಳ ಮದ್ವೆ ಬಗ್ಗೆ ತಲೆಕೆಡ್ಸಿಕಂಬಡ. ಓದಿನ ಬಗ್ಗೆ ಯೋಚಿಸ್."

ಅಪ್ಪ ಅದಕ್ಕೆ ಪ್ರತಿ ಮಾತಾಡ್ತ್‌ಲೆ.

"ಸರಿ ಕತ್ತಲಾಗ್ತಾ ಬಾತ್. ಹಳ್ಳಲಿ ಮಿಂದ್ ಬಂದ್‌ಬುಟ್ನೆ. ಒಳ್ಳದೊಂದು ಬಳ್ಳಿಕಾರ್ ಗಸಿ ಮಾಡಿಬುಡು ಕುಸುಮ."

ಅಪ್ಪ ರಾತ್ರಿ ಚಾವಡಿಲೇ ಮಲ್ಗಿತ್. ಶಿವಪ್ಪ ಚಿಕ್ಕಪ್ಪನೊಟ್ಟಿಗೆ ಬೈಕ್‌ಲಿ ಪೋಲೀಸ್ ಮಾವ ಹೊರ್ಟ್ ಹೋದೊ. ಹೆಣ್ಣ್ ಮಕ್ಳ ಓದಿನ ಬಗ್ಗೆ ಅಪ್ಪನ ಮಾತ್‌ಗಳ್ನ ಕೇಳ್ದಮೇಲೆ ಅಮ್ಮಣ್ಣಿಗೆ ಅವನೊಟ್ಟಿಗೆ ಹೆಚ್ಚಿಗೆ ಮಾತಾಡೊಕುಂತ ಅನ್ನಿಸ್‌ತ್ಲೆ. ಬೊಳ್ಪಿಗೆ ಅಪ್ಪ ತೋಟಕ್ಕೆ ಒಂದು ಸುತ್ತು ಹೊಡ್ದ್ ಬಾತ್. ಕಾಪಿ ತಿಂಡಿ ಆದಮೇಲೆ ಹೊರ್ಟ್ ನಿಂತತ್.

"ಎರ್ಡ್ ದಿನಕ್ಕೊಮ್ಮೆ ಬನ್ನೆ. ನಾನ್ ಅವಳ್ನ ನೋಡಿಕಣದೆ ಇರಿಕೆ ಆದುಲ್ಲೆಲ್ಲಾ?"

ಆ ಶನಿವಾರ ಮಾಲಿಂಗ ಮಾವ ಮನೆಗೆ ಬಂದೊ. ಅಪ್ಪ ಮುಂದೇನ ಹಾಂಗೆ ಅವರ್ನ್ ಕಂಡ್ ಮೋರೆ ಉರಿ ಮಾಡ್ತ್‌ಲೆ. ಒಟ್ಟಿಗೆ ಕುದ್ದು ಇಬ್ಬರೂ ಮಾತಾಡಿಕಂಡ್ ಎಲೆ ಅಡಕೆ ಜಗ್ದೊ. ಮಾಲಿಂಗ ಮಾವ ಎಲೆಅಡಿಕೆ ತಿಂಬೋದರ್ನ ನೋಡಿಕೆ ಬಾರೀ ಲಾಯ್ಕ. ಚೀಲಂದ ಎಲೆ ಅಡಿಕೆ ಪಾಕ್ ತೆಗ್ದ್ ಮುಚ್ಚಳ ಓಪನ್ನ್ ಮಾಡಿ ಎದ್‌ರ್ಲಿ ಇಸಿಕಂಡವೆ. ಅದರೊಳಗೊಂದು ಚೂರಿ ಮತ್ತು ಅಡಕತ್ತಿ ಇದ್ದದೆ. ಚೂರಿಂದ ಅಡ್ಕೆನ ಚೂಲಿ ತೆಗ್ದ್ ಅಡಕತ್ತರಿಂದ ತುಂಡು ಮಾಡ್ವೆ, ಮತ್ತೆ ಚೂರಿಂದ ಅಡ್ಕೆ ಹೋಳಿರುವ ಬಿಳಿ ತಿರ್‌ಳ್ನ ತೆಗ್ದವೆ. ಮೂರು ಎಲೆಗಳ್ನ ತಕ್ಕಂಡ್ ಅವ್ಗಳ ಬೆನ್ನ್‌ನ ಲಾಯ್ಕ ಉಜ್ಜಿ ಒಂದರ ಮೇಲೆ ಇನ್ನೊಂದರ ಇಸಿ, ಅವ್ಗಳ ಕೊಡಿ ಜಂಟಿ ತೆಗ್ದ್ ಬಲಕಣ್ಣಿನ ಪಕ್ಕಲಿ ಅಂಟಿಸಿಕಂಡವೆ. ಅದರ ದಂಟ್‌ನ ಬಾಗ ಕಿತ್ತ್ ಬೀಸಾಡಿವೆ. ಸ್ಟೀಲ್ನ ಕರಡಿಗೆಂದ ಎಷ್ಟ್ ಬೇಕೋ ಅಷ್ಟ್ ಸುಣ್ಣ ತೆಗ್ದ್ ಮೇಲಿರುವ ಎಲೆನ ಬೆನ್ನಿಗೆ ಹದಲಿ ಉದ್ದಕ್ಕೂ ಉಜ್ಜುವೆ. ಮತ್ತೆ ಎರ್ಡ್ ಅಡಿಕೆ ತುಂಡು ಇಸಿ ಮಡ್ಚಿ ಬಾಯಿಗೆ ಹಾಕಿಕಂಡವೆ. ಮತ್ತೆ ಕುಣೆಯ ಹೊಗೆಸೊಪ್ಪು ಹೊರಗೆ ತೆಗ್ದ್ ಬಿಡ್ಸಿ ಬೆರಳ್‌ಂದ ಹೊಡ್ದ್ ದೂಳು ತೆಗ್ದ್ ಬೇಕಾದಸ್ಟ್ ತುಂಡು ಮಾಡಿಕಂಡವೆ. ಆ ತುಂಡುನ ಕೈಗಳ ಮದ್ಯೆ ಇಸಿಕಂಡ್ ಉಂಡೆಮಾಡಿ ಬಾಯ್ಗೆ ಹಾಕಿಕಂಡವೆ. ಬಾಯ್ಲಿ

ಎಲಾಡಿಕೆ ರಸ ತುಂಬಿಕಾಕನ ಎದ್ದ್ ಚಾಳೆ ಬುಡಕ್ಕೆ ಹೋಗಿ ಎರ್ಡ್‌ಬೆರ್ಳ್‌ಗಳ ಮಧ್ಯಲಿ ಪಿಚಕ್ಕನೆ ದೂರಕ್ಕೆ ಮಡೆ ಚಿಮ್ಮಿಸಿವೆ. ಮಡೆಗುತ್ತಿ ಪಕ್ಕಲಿದ್ದರೆ ಅದಕ್ಕೆ ಉಗಿದೂ ಉಟ್ಟು, ನಮ್ಮ ತೀರ್ಥದ ತ್ಯಾಂಪಣ್ಣ ಎಲಾಡಿಕೆ ತಿಂಬೊದೆಂದ್ರೆ ಇನ್ನೂ ವಿಶೇಷ. ಅಂವ ಗಂಟೆಗಟ್ಲೆ ಬಾಯ್ಲಿ ಎಲಾಡಿಕೆನ ಕೆಂಪುರಸ ಇಸಿಕಂಡೇ ಮಾತಾದಿಕಾಕನ ಎದ್‌ರಿಗೆ ಯಾರಾದ್ರ್ ಇದ್ದರೆ ಜಾಗ್ರತೆ ವಹಿಸೋಕೇ. ಇಲ್ಲದಿದ್ದರೆ ಅವರ ಮೇಲೆಲ್ಲಾ ರೆಟ್ಟಿ ಸುದ್ದ ಆದಂಗೆನೆ.

ನಿಮ್ಮನ್ ಮತ್ತೆ ಈ ಮನೇಲಿ ನೋಡಿ ನಂಗೆ ಕುಸಿ ಆಗುಟು ಚಿನ್ನಪ್ಪಣ್ಣಾ. ಯಜಮಾನ ಇಲ್ಲದ ಮನೆ ಸೂರ್ಯ ಇರದ ಆಕಾಶದಂಗೆ. ನೀವ್ ಕಲಿಯದಿದ್ದರೂ ಮಕ್ಕಳ ಯಕ್ಷಗಾನಕ್ಕೆ ನೀವ್ ಕೊಡುತ್ತಿರುವ ಉತ್ತೇಜನ ದೊಡ್ಡದ್. ಅಮ್ಮಣ್ಣಿ ಮತ್ತು ಬಾಳಕ್ಕ ನಿಮ್ಮ ಆಶೀರ್ವಾದಂದ ಲಾಯ್ಕಾಗಿ ಕಲಿಯುತ್ತೊಳೊ. ಅಮ್ಮಣ್ಣಿ ದೊಡ್ಡ ಬಾಗವತಳಾದೆಂತ ನಮ್ಮ ಗುರುಗ ಹೇಳುತ್ತೊಳೊ. ನಿಮ್ಮ ಅಪ್ಪ ಕಲಾವಿದರಾಗಿದ್ದಕ್ಕೆ ಸಾರ್ತಕ ಆತ್. ಕಲಾವಿದರಿಲ್ಲದ ಮನೆತನಕೆ ಯಾವ ಗೌರವನೂ ಇರ್ದುಲ್ಲೆ ಚಿನ್ನಪ್ಪಣ್ಣಾ."

"ಏನಾದರೇನ್ ಮಾಲಿಂಗಣ್ಣಾ, ಹಾಡ್ರೆ, ಕುಣ್ದರೆ, ಹೊಟ್ಟೆ ತುಂಬಿದೇನೋ? ಈ ಯಕ್ಷಗಾನ ಉಟ್ಟಲ್ಲೊ ಅದ್ ಹೆಂಗ್ಸರಿಗೆ ಹೇಳ್ದ ಕಲೆನೇ ಅಲ್ಲ. ಅಷ್ಟ್ ಜನ ಗಂಡ್ಸರ ನಡುವೆ ಈ ಪ್ರಾಯ ತುಂಬಿದ ಹೆಣ್ಣ್‌ಮಕ್ಕ! ಇವರ್‍ನ ಅವು ನೋಡಿ ಜೊಲ್ಲು ಸುರ್ಸದೆ ಇರುವನೋ? ನೀವ್ ಏನೇ ಹೇಳಿ, ಇವು ಯಕ್ಷಗಾನಕ್ಕೆ ಹೋದು ನಂಗೆ ಸತಾರಾಮ್ ಇಷ್ಟ ಇಲ್ಲೆ."

ಮಾಲಿಂಗ ಮಾವ ಚಾಳೆ ಬುಡಕ್ಕೆ ಹೋಗಿ ಮಡೆ ಉಗ್ದ್ ಬಾತ್.

"ಯವ್ವನದ ಹೆಣ್ಣ್‌ಗಳ್ನ ನೋಡಿ ಜೊಲ್ಲು ಸುರ್ಸೋವು ಎಲ್ಲಾ ಕಡೆ ಇದ್ದವೆ. ಹಾಗಂತ ಹೆಣ್ಣ್‌ಮಕ್ಕಳ್ನ ಮನೇಲೇ ಕೂಡಿ ಹಾಕಿಕೆ ಆದೆನೋ? ಈಗ ನಾವು ಗುರುಗಳ ಕಲಾ ಶಾಲೆಗೆ ಹೊರ್ಟದ್. ನೀವ್ಗೆ ಪುರ್‌ಸತ್ತ್ ಇದ್ದರೆ ನಮ್ಮೊಟ್ಟಿಗೆ ಬನ್ನಿ. ಬಂದರೆ ನಾವ್ಗೆಲ್ಲಾ ಕುಸೀನೆ. ಅಲ್ಲಿ ಇನ್ನೂ ಕೆಲವು ಗೂಡೆಗ ಬಂದವೆ. ಎಲ್ಲವೂ ಒಂದೇ ಮನೆಯವರ ಹಾಂಗೆ ನಡ್ಕಂಡವೆ. ಯಕ್ಷಗಾನ ಒಂದು ದೈವೀಕಲೆ. ಸಂಸ್ಕಾರವಂತರಿಗೆ ಮಾತ್ರ ಸಿದ್ದಿಸುವಂತದ್. ನಾನ್ ಈ ಕ್ಷೇತ್ರಲಿ ತುಂಬಾ ಸರ್ವಿಸ್ಸಾದ ಮನುಷ್ಯ. ನಾವ್ ಶೂದ್ರರ್ ನೋಡಿ. ನಾವ್ಗೆ ಬುದ್ದಿನೇ ಇಲ್ಲೆಂತ ಬ್ರಾಹ್ಮಣರ್ ನಮ್ಮನ್ ದೂರ ಇಸಿವೆ. ಎಲ್ಲರೆದುರ್ಲಿ ಕಪಿಲೇಶ್ವರನ ಜಾತ್ರೆ ದಿನ ನಾವ್ಗೆ ಊಟ ಸಿಕ್ಕಿಕೆ ಬ್ರಾಹ್ಮಣ ಸಂತರ್ಪಣೆ ಮುಗಿಯೊಕು. ಸಾದನೆ ಇದ್ದರೇನೇ ನಮ್ಮನ್ನ್ ಬ್ರಾಹ್ಮಣರ್

ಹತ್ರ ಸೇರ್ಸುದು. ನಾನೀಗ ಯಕ್ಷಗಾನ ಗುರೂಂತಾದ ಮೇಲೆ ನಂಗೆ ಬ್ರಾಹ್ಮಣರ್ ಮರ್ಯಾದೆ ಕೊಡ್‌ತ್ತೊಳದ್. ಅವರ ಪಂಕ್ತಿಲೇ ನಂಗೆ ಊಟ ಹಾಕ್ತೊಳದ್. ರಂಗ ಪ್ರವೇಶಕ್ಕೆ ಮುಂದೆ ಬ್ರಾಹ್ಮಣ ಹುಡ್ಗರ್ ನನ್ನ ಕಾಲ್‌ಮುಟ್ಟಿ ನಮಸ್ಕರಿಸಿವೆ. ಹೊಟ್ಟೆ ತುಂಬ್ಸುದೂ ಮುಖ್ಯನೆ. ಹಾಂಗೆ ಸಾದನೆನ ಸಂತೃಪ್ತಿನೂ ಮುಖ್ಯನೇ ನೀವು ನಮ್ಮ ಗುರುಗಳ ನೋಡ್ತೋಕು. ಮದ್ದ್, ಮಾಸ ಮಟ್ಟದ ಶುದ್ದ ಸಾತ್ವಿಕರ್. ಬ್ರಾಹ್ಮಣರಾದ್ರೂ ಜನಿವಾರ ಹಾಕದ ಸಮಾನತೆನ ಪ್ರತಿಪಾದಕರ್. ನೀವೀಗ ನಮ್ಮೊಟ್ಟಿಗೆ ಹೊರ್ಡಿ. ಕೆಲವು ದಿನಗಳ್‌ಂದ ನಿಮ್ಮ ಮನಸ್ಸಿಗಾದ ಬೇನೆ, ಅವಮಾನ ಉಟ್ಟಲ್ಲಾ ಅದೆಲ್ಲಾ ಗುರುಗಳ ಕಲಾಶಾಲೆಲಿ ನೀವ್ಗೆ ಮರ್ತ್ ಹೋದೆ ನೋಡಿ."

ಅಪ್ಪ ಹೊರ್ಟತ್. ಅದರ ನೋಡಿ ಅಮ್ಮಣ್ಣಿಗೆ ಅಪ್ಪನ ಬಗ್ಗೆ ಇಲ್ಲಿವರೇಗೆ ಬಾರದ ಅಬಿಮಾನ ಮೂಡ್ತ್. ಪಾಲದಾಟಿ, ಬಸ್ಸ್ ಹತ್ತಿ ಅರ್ದ ಗಂಟೆ ಪ್ರಯಾಣ. ಬಸ್ಸಿಳ್ದ್ ದೋಣಿಲಿ ತಪಸ್ವಿನಿನ ದಾಟಿ ಮತ್ತೆ ಅರ್ದಗಂಟೆ ನಡ್ದ ಮೇಲೆ ಗುರುಗಳ ಕಲಾಶಾಲೆ ಸಿಕ್ಕಿತ್. ಅಪ್ಪ ಅದರ ಬಗ್ಗೆ ಸಾಕಷ್ಟ್ ಮುಂದೇನೇ ಕೇಳಿತ್ತ್. ನೋಡುತ್ತಿರುದು ಇದೇ ಸುರು.

ಮಾಲಿಂಗ ಮಾವ ಗುರುಗಳಿಗೆ ಅಪ್ಪನ ಪರಿಚಯ ಮಾಡಿಕೊಟ್ಟೊ, ಗುರುಗಳ ಮೋರೆ ಅರ್ಳಿತ್.

"ಹ್ವೋ... ನಮ್ಮ ಕಜೆ ದಾಸಪ್ಪನ ಮಂಜ ಅಲ್ಲೋ? ದಾಸಪ್ಪನ ರಾಗ ತುಂಬಾ ಲಾಯ್ಕಿತ್ತ್. ಅಂವ ಮದ್ಲೆ ಕಲ್ತಿತ್ತ್. ಅವ್ನ ಬೆರ್ಳ್‌ಗ ತುಂಬಾ ಚುರ್ಕ್. ಗಟ್ಟಿ ಪೆಟ್ಟಿಗಿಂತ ಉರುಳಿಕೆನ ಹೆಚ್ಚ್ ಇಷ್ಟಪಡ್‌ತಿತ್ತ್. ಸರಿಯಾಗಿ ಕಲಿತಿದ್ದರೆ ನಮ್ಮ ಮಾಲಿಂಗಗಿಂತ್ಲೂ ಹೆಸ್ರ್‌ಗಳ್ಸ್‌ತಿತ್ತ್. ಅವಂಗೆ ಇಬ್ಬರು ಗಂಡ್ ಮಕ್ಕಂತ ಕೇಳಿದ್ದೆ. ಎಳೆ ಪ್ರಾಯಲೇ ಇಬ್ಬರ್ ಬರ್ತಿದ್ದರೆ ಈಗ ಪ್ರಖ್ಯಾತ ಜೋಡಿಯಾದ ಮದು-ಕೈಟಬ, ರಾಮ-ಲಕ್ಷ್ಮಣ, ಕೋಟಿ-ಚೆನ್ನಯ್ಯರಾಂಗೆ ಆಗ್ತಿತ್ತ್. ಈಗ ಹೇಳಿ ಪ್ರಯೋಜನ ಇಲ್ಲೆ. ಸಂಪತ್ತ್ ಸಿಕ್ಕಿಕೆ ಯೋಗ ಬೇಕು ಗಡ. ಕಲಾವಿದರಾಕೆ ಸಂಸ್ಕಾರದೊಟ್ಟಿಗೆ ಸಾದನೆನೂ ಬೇಕು. ಏನೇ ಆಗಲಿ ನೀನ್ ಬಾರಿ ಒಳ್ಳ ಕೆಲ್ಸ ಮಾಡ್ದ. ಕಲಾಮಾತೆನ ಸೇವೆಗೆ ಇಬ್ಬರ್ ಮಕ್ಕಳ್ನ ಕೊಟ್ಟಳ. ನನ್ನ ಮಕ್ಕಳಿಗೆ ಯಕ್ಷಗಾನಲಿ ಇವರಷ್ಟ್ ಪ್ರೀತಿ ಮೂಡ್ತಿಲ್ಲೆಲ್ಲಾ ಅಂತ ನಂಗೆ ಬೇಜಾರಾದುಟ್ಟು. ದಾಸಪ್ಪನ ಯಕ್ಷಗಾನ ಅವ್ನ ಮೊಮ್ಮಕ್ಕಳಿಗೆ ಬಂದ ಹಾಂಗೆ ನನ್ನ ಮೊಮ್ಮಕ್ಕಳಿಗೆ ಬಂದದೋ ಏನೋ? ಇಂದ್ ರಾತ್ರಿ ಸಣ್ಣದೊಂದು ತಾಳೆಮದ್ದಲೆ ಕಾರ್ಯಕ್ರಮ ಉಟ್ಟು. ಎಲ್ಲಾ ಮುಗ್ಸಿ ನಾಳೆ ಹೋಕ್."

ಅಪ್ಪ ಬಯಲಾಟಗಳ್ನ ನೋಡಿತ್ತ್. ತಾಳಮದ್ದಲೆ ಅವಂಗೆ ಹೊಸ್ತು. ಬಲಬಾಗಲಿ ಮದ್ದೆಗೆ ಗುರುಗ. ಎಡಬಾಗಲಿ ಚೆಂಡೆಗೆ ಮಾಲಿಂಗಣ್ಣ. ಇವರ ನಡುಲಿ ಬಾಗವತಳಾಗಿ ಅಮ್ಮಣ್ಣಿ ಕುದ್ರಿಕಾಕನ ಅವನ ಮೋರೆ ಅರ್‍ಳಿತ್. ಅಮ್ಮಣ್ಣಿ ಗಜಮುಖದವಗೆ ಹೇಳಿ, ಅಂಬುರುಹದಳದ ನೇತ್ರ ದೇವೇಂದ್ರನ ಒಡ್ಡೋಲಗದ ಪದ ಹಾಡ್ತ್. ಬಾಳಕ್ಕ ದೇವೇಂದ್ರನಾಗಿ ಒಳ್ಳೆ ಪೀಠಿಕೆ ಹಾಕ್ತ್. ಅವಳ ಬಾಯಿಂದ ಬರ್‍ತಿದ್ದ ಹೊಸ ಶಬ್ದಗ, ನುಡಿಗಟ್ಟ್‌ಗ ಮತ್ತು ವರ್ಣನೆಗೆ ಅಂವ ಬಾಯಿ ಬುಡುತ್ತಿರುದರ್‍ನ ಅಮ್ಮಣ್ಣಿ ಗಮನಿಸಿತ್ತ್. ಶ್ರೀಕೃಷ್ಣನಾಗಿ ಅರ್ತ ಹೇಳ್ದ ಸರಸ್ವತಿಯೆದ್‌ರ್ ಸತ್ಯಬಾಮೆ ಪಾತ್ರ ವಹಿಸಿದ ಸುಬ್ರಮಣ್ಯ ಹಂಞ ಚಪ್ಪೆ ಆದಂಗೆ ಅನ್ಸಿತ್. ಅಪ್ಪಂಗೆ ಆಶ್ಚರ್ಯ ಆದ್ ನರಕಾಸುರನ ಅರ್ತ ಹೇಳ್ದ ಹೈದನ ಜ್ಞಾನ ಮತ್ತು ತರ್ಕಶಕ್ತಿ ಬಗ್ಗೆ. ಅವನ ಬಾಯಿಂದ ಸಂಸ್ಕೃತ ಶ್ಲೋಕಗ ಸರಾಗ ಬರ್‍ತಿತ್ತ್. ಅಂವ ಒಬ್ಬ ಮುಸ್ಲಿಮ್ ಹೈದಂತ ಗೊತ್ತಾಕನ ಅದರ ಅರ್‍ಗಿಸಿಕಂಬಕೆ ಅಪ್ಪಂಗೆ ಬಾರೀ ಕಷ್ಟ ಆತ್. ತನ್ನ ಮಲೆಯಾಳೀ ಮೂಲ ಒಂದಿಷ್ಟ್ ಗೊತ್ತಾಗದ ಹಾಂಗೆ ಮಾರಾಸುರನ ಅರ್ತಹೇಳ್ದ ಕ್ರಿಶ್ಚಿಯನ್ ಹೈದನ ಕೂಡಾ ಅಪ್ಪ ಬಾರೀ ಮೆಚ್ಚಿ ಕಣ್ತ್.

ಬೊಳ್ಪಿಗೆ ಇಡ್ಲಿ ಸಾಂಬಾರ್, ಕಷಾಯ ಆಗಿ ಹೊರ್‍ಡಿಕಾಕನ ಅಮ್ಮಣ್ಣಿ ಮತ್ತು ಬಾಳಕ್ಕ ಗುರುಗಳ ಕಾಲಿಗೆ ಬಿದ್ದೊ. ಅಪ್ಪನೂ ಅವರ ಕಾಲಿಗೆ ನಮಸ್ಕಾರ ಮಾಡ್ತ್. ಅದರ ನೋಡಿ ಗುರುಗಳಿಗೆ ಆಶ್ಚರ್ಯ ಆತ್.

"ನೀನ್ ಕಲಾಶಾಲೆನ ಮಹತ್ವನ ಅರ್ತ ಮಾಡಿಕಂಡಳಂತೇಳ್ದಕ್ಕೆ ನಿನ್ನ ವರ್ತನೆಯೇ ಸಾಕ್ಷಿ. ನಂಗೆ ತುಂಬಾ ಸಂತೋಷಾಗುಟ್ಟು ಚಿನ್ನಪ್ಪಾ. ನಿನ್ನ ಮಕ್ಕಳಿಗೆ ಈ ಹಿಂದೆ ಸ, ಷ, ಶ, ಲ, ಳ, ನ, ಣ ವ್ಯತ್ಯಾಸನೇ ಗೊತ್ತಿಲ್ಲೆ. ಮನೆನ ಮಣೆ ಅಂತ ಹೇಳ್ತಿದ್ದೊ. ಈಗ ಇವರ ಬಾಷಾ ಶುದ್ದಿ, ಪುರಾಣ ಜ್ಞಾನ ಮತ್ತು ತರ್ಕ ಶಕ್ತಿ ಮಾಸ್ಟ್ರ್‌ಗಳಲ್ಲಿರುದೂ ಸಂಶಯ. ಪ್ರಸಂಗದ ಕೊನೆನ ಗಮನಿಸಿಯೊಳಲ್ಲಾ. ದುಷ್ಟರ್‍ನ ಶಿಕ್ಷಿಸುವ, ಶಿಷ್ಟರ್‍ನ ರಕ್ಷಿಸುವ ಒಂದು ಮಹಾಶಕ್ತಿ ವಿಶ್ವಲಿ ಉಟ್ಟುಂತ ಯಕ್ಷಗಾನ ಸಾರಿದೆ. ಪ್ರಪಂಚದ ಬೇರಾವ ಕಲೆನೂ ಹೀಂಗೆ ಬಾಷಾ ಶುದ್ದಿ, ತರ್ಕ ಶಕ್ತಿ, ಜ್ಞಾನ ಮತ್ತು ಮೌಲ್ಯಗಳ್ನ ಬೆಳ್ಸುದೂಂತ ನಂಗೆ ಅನ್ನಿಸುದ್ಲೆ. ಅದಕ್ಕೇ ನಾನ್ ಜಾತಿ, ಮತ, ಲಿಂಗ ಬೇದ ಮಾಡದೆ ಗೊತ್ತಿರುವಷ್ಟನ್ನ್ ಇಲ್ಲಿಗೆ ಬಂದೊವುಕೆ ಕಲ್ಸಿನೆ. ಆದರೆ ಈಗಿನ ಪೀಳೆಗೆವು ಕುಡ್ದ್, ದೇಹ ಕುಲ್ಕಿಸಿ, ಕುಣಿದರ್‍ನೆ ಕಲೆಂತ ತಿಳ್ಕೊಂಡೊಳೊ. ಹಾಂಗಾಗಿ ಯಕ್ಷಗಾನ ಉಳ್ಸಿ, ಬೆಳ್ಸುದು ಹೇಂಗೆಂತೇಳುದೇ ದೊಡ್ಡ ಸಮಸ್ಯೆ ಆಗ್ತುಟ್ಟು."

"ಗುರುಗಳೇ, ಯಕ್ಷಗಾನ ನಮ್ಮ ಜಿಲ್ಲೆನ ಕಲೆಯಾಗಿ ಮಾತ್ರ ಉಳ್ದದ್ದೇಕೆ?"

“ಅದ್ ತಪ್ಪು ಬಾವನೆ ಚಿನ್ನಪ್ಪಾ. ಇದ್ ಇಡೀ ಕರ್ನಾಟಕದ ಕಲೆ. ಉತ್ತರದ ಕಡೆ ಇದನ್ನ್ ‘ಮೂಡಲ ಪಾಯ’ಂತೇಳುವೆ. ದಕ್ಷಿಣಲಿ ಇದ್ ‘ಪಡುವಲಪಾಯ’ ಆತ್. ಪ್ರಾಂತ್ಯ ಬೇದ ಮತ್ತು ಸಾಂಸ್ಕೃತಿಕ ವ್ಯತ್ಯಾಸಗ ಕಲೆಯ ಮೇಲೆ ಪ್ರಬಾವ ಬೀರುವೆ. ಹಾಂಗಾಗಿ ಮೂಡಲಪಾಯಕ್ಕಿಂತ ಪಡುವಲಪಾಯ ಬೇರೆ ಆಗುಟು. ಉತ್ತರ ಕನ್ನಡದೊವು ಬಡಗುತಿಟ್ಟು ಸಂಪ್ರದಾಯ ಬೆಳ್ಸಿದೊ. ನಮ್ಮದ್ ತೆಂಕುತಿಟ್ಟು ಸಂಪ್ರದಾಯ. ವೇಷಬೂಷಣ ಬೇರಾದ್ರೂ ಸಾರುವ ಮೌಲ್ಯ ಒಂದೇ. ಓದು ಬರಹ ಗೊತ್ತಿಲ್ಲದವೇ ಕಲಾವಿದರಾಗಿರಿಕಾಕನ ನಿಗದಿಯಾದ ಸಂಬಾಷಣೆನ ಒಪ್ಪಿಸ್‌ತಿದ್ದೊ. ತಾಳಮದ್ದಲೆ ಎಂಬ ಪ್ರಕಾರ ಹುಟ್ಟಿಕಂಡ ಮೇಲೆ ಮಾತ್‌ಗಾರಿಕೆಗೆ ಮತ್ತು ತರ್ಕಶಕ್ತಿಗೆ ಮಹತ್ವ ಬಾತ್. ಈಗ ಯಕ್ಷಗಾನ ಕಲಾವಿದ ಯಾವ ಮಟ್ಟದವಂತ ಬರೀ ಕುಣಿತಂದ ಅಳಿದುಲೆ. ಅವ್ನ ಮಾತ್‌ಗಾರಿಕೆ ತುಂಬಾ ಮುಖ್ಯ ಆಗುಟು. ಹಾಂಗಾಗಿ ಯಕ್ಷಗಾನ ಕಲಾವಿದರ್ ತುಂಬಾ ಓದೋಕಾದೆ. ಮತ್ತೊಂದು ಮಾತ್ ನೆನ್ಪಿರ್ಲಿ. ಕಲೆ, ಸಾಹಿತ್ಯ ಪ್ರೀತಿಂದ ಮಾತ್ರ ಮನುಷ್ಯನ ಜೀವನ ಸಂದರ ಆದೆ. ಆ ಪ್ರೀತಿ ಇಲ್ಲದೊವು ಬದ್ಕಿದ್ದೂ ಸತ್ತಹಾಂಗೆನೆ.”

ವಾಪಾಸಾಗುವ ದಾರ್ಲಿ ಅಪ್ಪ ಹೇಳ್ತ್.

“ಮಂಜುನಾಥ ಬಾಗವತರ ಬಗ್ಗೆ ಸಾಕಷ್ಟ್ ಕೇಳಿದ್ದೆ. ಇವರ್ಲಿ ಜಾತೀಯತೆ ಹಂಞನೂ ಇಲ್ಲೆ. ಬೇಡಂತೇಳಿರೂ ಜನ ಮರ್ಯಾದೆ ನೀಡುವ ಜಾತಿ ಅವರ್ದ್. ಹಾಂಗಿದ್ದೂ ಅವು ಎಲ್ಲನ್ನೂ ಒಂದೇ ರೀತಿಲಿ ನೋಡುತ್ತಿರ್ದು, ಜನಿವಾರ ಹಾಕದಿರ್ದು ಎಲ್ಲ ಆಶ್ಚರ್ಯ ಸಂಗತಿನೆ.”

“ಹೌದು ಚಿನ್ನಪ್ಪಣ್ಣಾ, ಎಲ್ಲಾ ಬ್ರಾಹ್ಮಣರ್ ಇವರ ಹಾಂಗೆ ಆಗಿಬುಟ್ಟರೆ ಮತ್ತೆ ಈ ಜಾತಿ ಎಂಬ ಶನಿ ಉಳಿಯಕಿಲ್ಲಂತ ನಂಗೆ ಅನ್ಸಿದೆ. ಆದ್ರೆ ಒಂದು ಈ ಬ್ರಾಹ್ಮಣರ್ ಜಾತಿ ವಿಷಯಲಿ ಶೂದ್ರರಿಗಿಂತ ಎಷ್ಟಕ್ಕೂ ಆದೂಂತ ಕಂಡದೆ. ಅವರ್ಲಿ ಈಗ ತುಂಬಾ ಬದಲಾವಣೆ ಆಗುತ್ತುಟ್ಟು. ಅವು ವಿಪ್ರಸಂಗ ಅಂತ ಮಾಡಿಕೊಂಡೊಳೊ. ಒಳ ಬೇದಗಳ್ನ ಬುಟ್ಟು ಮದುವೆಗ ನಡೆತುಟ್ಟು. ಎಲ್ಲೋ ಒಂದೂರ್ಲಿ ಅನಾಥಾಲಯದ ಹೆಣ್ಣ್‌ಮಕ್ಕಳ್ನ್ ತಮ್ಮ ಸಮುದಾಯಕ್ಕೆ ಸೇರ್ಸಿಕಂಡ್ ಮದ್ವೆ ಆಗುತ್ತೊಳಂತ ಪೇಪರ್ಲಿ ಬಂದಿತಲ್ಲಾ? ಆದರೆ ನಾವು ಶೂದ್ರರ್ ಬಂಟ, ಬಿಲ್ಲವ, ಗೌಡ, ನಾಯ್ಕ, ಮಣಿಯಾಣಿಂತ ಸಾವಿರ ಜಾತಿಗಳ್ನ ಇಸಿಕಂಡ್ ಪರಸ್ಪರ ಸಂದೇಹ ಪಟ್ಟ್‌ಕಂಡ್ ಸಾಯುತ್ತೊಳೊ. ನಮ್ಮದೂ ಒಂದು ಬದ್‌ಕಾ? ಎಲ್ಲಾ ಶೂದ್ರರ್ ಒಳಬೇದ ಮರ್ತ್ತ್ ಶೂದ್ರಸಂಗ ಸುರುಮಾಡೋಕು. ಜಾತಿ ಮುಕ್ತ ಮದುವೆಗ ನಡೆಕು. ಶೂದ್ರ

ಸಂತತಿನ ಬುದ್ದಿಶಕ್ತಿ ಹೆಚ್ಚಾಕು. ಆದರೆ ಶೂದ್ರರಲ್ಲಿ ಒಗ್ಗಟ್ಟಾಗುವ ವಿವೇಚನನೇ ಇಲ್ಲೆ. ಯಾರ್ ಯಾರ್ನ ಮದ್ವೆಯಾದ್ರೆ ಏನ್? ತಮ್ಮ ತಮ್ಮ ಜಾತಿಯವೇ ಆಕೂಂತ ಹಟ ಯಾಕೆ? ನಮ್ಮ ಜಾತಿಯವ್ಕೆ ಏನ್ ಚೆನ್ನದ್ ಉಟ್ಟಾ? ಎಲ್ಲವುಕೂ ಇರ್ದು ಅದೇ ಅಲ್ಲನೋ? ನೀವ್ ಏನ್ ಹೇಳಿ ಚಿನ್ನಪ್ಪಣ್ಣಾ? ನಾವ್ಗೆ ಶೂದ್ರರಿಗೆ ಬುದ್ದಿ ತೀರಾ ಕಡಿಮೆನೆ."ಅಪ್ಪ ಅದಕ್ಕೇನೂ ಹೇಳ್ತ್‌ಲೆ. ಬುದ್ದಿ ಕಡಿಮೆಂತ ಒಪ್ಪಿಕೊಂಬಕೂ ತಯಾರಿತ್ಲೆ. ಕಡಿಮೆ ಅಲ್ಲಂತೇಳಿಕೂ ಅವನಲ್ಲಿ ಆದಾರ ಏನೂ ಇತ್ಲೆ. ದಾರಿ ಸಾಗ್‌ತಾ ಬಾಕನ ಅಪ್ಪ ಹೇಳ್ತ್. "ನೀನ್ ಲಾಯಕ್ಕಾಗಿ ಹಾಡಿಯಾ ಅಮ್ಮಣ್ಣಿ. ಬಾಳಕ್ಕನ ದೇವೇಂದ್ರನೂ ಲಾಯ್ಕಾಗಿತ್ತ್. ಬಾಗವತಿಕೆ ಸಾಯುವರೇಗೂ ಮಾಡಕ್. ಆದರೆ ಬಾಳಕ್ಕ ಎಷ್ಟ್ ವರ್ಸದವರೇಗೆ ವೇಷ ಹಾಕಕ್. ಕುದ್ದ್‌ಕಂಡ್ ಅರ್ತ ಹೇಳುದೇ ಬೇರೆ. ಮೈಗೆ ಏನೇನೋ ಕಟ್ಟಿಕಂಡ್ ಮೋರೆಗೆ ಏನೇನೋ ಬಳ್ದ್ ಕಂಡ್ ಪ್ರಾಯದ ಗೂಡೆಗ ನೂರಾರ್ ಜನರ ಮುಂದೆ ಕೊಣುದೇ ಬೇರೆ. ನೀನ್ ಹೇಂಗೂ ಬಾಗವತಿಕೆ ಕಲಿಯುತ್ತೊಳ. ಅವಳ್ ಮದ್ಲೆ ಕಲಿಲಿ. ನಿಂಗೆ ಆಗ ಜೊತೆಯಾದೆ."

ಅಪ್ಪನ ಮಾತಿಗೆ ಮಾಲಿಂಗ ಮಾವ ತಲೆಯಾಡಸಿದೊ.

"ಚಿನ್ನಪ್ಪಣ್ಣ ಹೇಳ್ತುದರ್ಲಿ ನ್ಯಾಯ ಉಟ್ಟು. ಒಂದು ಮದ್ಲೆ ತಂದ್ ಕೊಟ್ಟರೆ ಅವ್ಳಿಗೆ ನಾನೇ ಹೇಳಿಕೊಡುವೆ. ನಾಲ್ಕ್ ಸಾವಿರ ಆದು. ಇಷ್ಟ ಇದ್ದರೆ ನೀವ್‌ಗೂ ಕಲಿಯಕ್. ಮಗಳ ಬಾಗವತಿಕೆಗೆ ಅಪ್ಪ ಮದ್ಲೆ ಬಾರ್ಸುವಂತಾದರೆ ಅದರ ಪೋರ್ಲೇ ಬೇರೆ."

ದಾರಿ ಕವಲೊಡೆವಲ್ಲಿ ಅಪ್ಪ ನಿಂತತ್.

"ನೀವಿನ್ನ್ ಮುಂದುವರಿಸಿ ಮಾಲಿಂಗಣ್ಣಾ. ನಾನ್ ಅಲ್ಲಿಗೂ ಹೋಕಲ್ಲಾ?" ಎಲ್ಲಿಗೆಂತ ಯಾರೂ ಕೇಳ್ತ್‌ಲೆ. ಅಪ್ಪ ಕವಲ್ ದಾರಿಲಿ ಬೇಗ ಬೇಗ ನಡ್ದ್ ಹೋತ್.

——***——

## ೬. ಹಿಂಬೊತ್ತಿನ ಮುತ್ತು

ಅಪ್ಪ ಮತ್ತೆ ಮನೆಗೆ ಬಂದದ್ ಮೂರು ದಿನ ಕಳ್ದ ಮೇಲೆ. ಊರ್‌ಗೌಡ್ರ್ ಮತ್ತು ಪಟೇಲ್ರ್ ಅಪ್ಪನೊಟ್ಟಿಗೆ ಬಂದಿದ್ದೊ. ಪೋನ್‌ಲಿ ಮಾತಾಡಿಕೊಂಡಿದ್ದೊಂತ ಕಂಡದೆ ಚಿಕ್ಕಪ್ಪ ಮತ್ತು ಪೋಲೀಸ್ ಮಾವನೂ ಬಂದಿದ್ದೊ. ತ್ಯಾಂಪಣ್ಣ ಯತಾಪ್ರಕಾರ ಹಾಜರಾಗಿತ್ತ್.

ಅಪನೊಟ್ಟಿಗೆ ಬಂದಿದ್ದವರ್ಲಿ ಮೂರು ಜನ ಅಪರಿಚಿತರೂ ಇದ್ದೊ. ಅವರ್ಲಿ ಒಬ್ಬ ಪೂಜೆ ಮಾಡ್ವ ಅರ್ಚಕರ ಹಾಂಗೆ ಕಾಣ್ತಿದ್ದೊ. ಕೇಸರಿ ಲುಂಗಿ ಉಟ್ಟಿದ್ದ ಅವು ಅಂಗಿ ಹಾಕಿತ್ಲೆ. ಕೂದಲ್ನ ಸಣ್ಣದಾಗಿ ಕತ್ರಿಸಿ ಹಿಂದ್‌ಗಡೆ ದೊಡ್ಡ ಜುಟ್ಟು ಬುಟ್ಟಿದ್ದೊ. ಕೈಗೆ ಚಿನ್ನದ ಕಡಗ ಇತ್ತ್. ಹೆಬ್ಬೆರಳ್ ಬುಟ್ಟು ಉಳ್ದಲ್ಲಾ ಬೆರ್‌ಳ್‌ಗಳಿಗೆ ಉಂಗುರ ಹಾಕಿಕೊಂಡಿದ್ದೊ. ಹೊಟ್ಟೆ, ಎದೆ, ಕೈ, ತೋಳು, ಹಣೆ ಮೇಲೆ ಎಲ್ಲಾಕಡೆ ಗಂದದ ಅಡ್ಡನಾಮ ಹೊಳಿತಿತ್ತ್. ಅವರೊಟ್ಟಿಗೆ ಅಮ್ಮಣ್ಣಿಗಿಂತ ಸುಮಾರ್ ಎರ್ಡ್ ಮೂರು ವರ್ಸಕ್ಕೆ ದೊಡ್ಡವರ ಹಾಂಗಿದ್ದ ಇಬ್ಬರ್ ಮರಿ ಅರ್ಚಕರಿದ್ದೊ. ಒಬ್ಬ ಹಸ್ರ್ ಲುಂಗಿ ಇನ್ನೊಬ್ಬ ಹಳ್ದಿ ಲುಂಗಿ ಉಟ್ಟಿತ್ತ್. ಮೈ ಬಾಗನ ಉತ್ತರೀಯಂದ ಮುಚ್ಚಿಕೊಂಡಿದ್ದೊ.

ಅವ್ವ ಹಿಂದಿನ ದಿನ ಅಂಗಳೆಲ್ಲಾ ಗುಡ್ಸಿ, ಸೆಗ್‌ಣಿನೀರು ಸಾರಿಸಿ ಸುದ್ದ ಮಾಡ್ತಿತ್ತ್. ತೋಟದ ಕೆಲ್ಸಕ್ಕೆ ಬರ್ವ ಚನಿಯ ಮತ್ತು ಹುಕ್ರ ಜಗ್‌ಲಿಂದ ತುಳ್ಸಿಕಟ್ಟೆವರೇಗೆ ಚಪ್ಪರ ಹಾಕಿದ್ದೊ. ಮನೆನ ಅವ್ವ ನಿನ್ನೆ ಹಿಂಬೊತ್ತು ಒಮ್ಮೆ, ಇಂದ್ ಬೊಳ್ಪಿಗೆ ಒಮ್ಮೆ ಉಜ್ಜಿ ತೊಳ್ದಿತ್ತ್. ಅವ್ವನ ಸಂಬ್ರಮನ ಕಣ್ಣ್ ಬಾಯಿ ಬುಟ್ಟ್ ನೋಡ್ತಿದ್ದ ಅಮ್ಮಣ್ಣಿಗೆ ಗುಟ್ಟು ಹೇಳುವಾಂಗೆ ಹೇಳ್ತ್.

"ಈಗ ನಾಮ ಬೊಳ್ಡ್‌ಕಂಡ್ ಬಂದೊಲ್ಲಾ, ಅವ್ ಅಷ್ಟಮಂಗಲ ಪ್ರಶ್ನೆ ಇಸಿಕೆ ಬಂದ ಬೊಳಂತಾಯ ಬಟ್ರ್ ಗಡ."

ಅದ್ ಗೊತ್ತಾದ ಮೇಲೆ ಬಾಳಕ್ಕ ಶಾಲೆಗೆ ಹೊರ್ಟ್ಲೆ. ಅಮ್ಮಣ್ಣಿ ಹೇಂಗೂ ಶಾಲೆ ಬುಟ್ಟಿತ್ತ್. ಇಬ್ಬರೂ ಅವ್ವಂಗೆ ಸಹಾಯ ಮಾಡ್ದೊ. ಮಣೆ, ಪೂಜಾ ಸಾಮಾಗ್ರಿ, ರಂಗೋಲಿ ಹುಡಿ ಎಲ್ಲಾ ತಂದ್ ತುಳ್ಸಿಕಟ್ಟೆ ಪಕ್ಕಲಿ ಇಸಿದೊ. "ನೀವಿಬ್ಬರೂ ನನ್ನ ಎರ್ಡ್ ಕೈಗ ಮಕ್ಕಳೆ" ಅವ್ವ ಹೇಳಿಕಾಕನ ಅವ್ಕೆ ಹೆಮ್ಮೆ ಆತ್. ಅವ್ವ ಬೊಳ್ಪಿಗೆನೇ ಮಿಂದ್‌ಕಂಕೆ ಹೇಳ್ದರ್‌ಂದ ತಪಸ್ವಿನಿಲಿ ಲಾಯ್ಕ ಈಜಾಡಿ ಮಿಂದ್ ಬಂದಿದ್ದೊ. ಆರದ ಕೂದಲ್ನ ಬಾಚದೆ ಹಾಂಗೆ ಇಳಿಬುಟ್ಟ್ ಕೊಡಿಲಿ ರಬ್ಬರ್ ಬ್ಯಾಂಡ್ ಸಿಕ್ಕಿಸಿದ್ದೊ.

ಬೋಳಂತಾಯ ಬಟ್ರ್ ಇವರ್ನ ನೋಡಿ ನಗಾಡ್ದೋ.

"ಇವು ನಿನ್ನ ಮಕ್ಕಳಲ್ಲನೋ ಚಿನ್ನಪ್ಪಾ? ಎಲ್ಲಾ ಮಕ್ಕಳಾಂಗೆ ಅಲ್ಲ ಈ ಮಕ್ಕ. ಮುತ್ತುಗ. ಅವ್ಳ್ ವೇಷ ಹಾಕಿ ಕುಣಿದರ್ನ ನೋಡ್ಯೊಳೆ. ಇವ್ಳ ಬಾಗವತಿಕೆನ ಮೂರೋ, ನಾಲ್ಕ್ ಸರ್ತಿ ಏನೋ ಕೇಳಿಯೊಳೆ. ಶಾಲೆಗೆ ಹೋದುಲ್ಲೆಂತ ಕಂಡದೆ. ಅದೇನ್ ದೊಡ್ಡದಲ್ಲ ಬುಡು. ನಾನೇ ಓದಿದ್ದ್ ಬರೇ ಎಂಟನೇ ಕ್ಲಾಸ್. ಬದ್ಕಿಕೆ ದಾರಿ ಸಾವ್ರ ಉಟ್ಟು ಹುಡ್ಕಿಕಣಕಷ್ಟೆ."

ಅಮ್ಮಣ್ಣಿ ಬಟ್ರ ಜತೆಗಿದ್ದ ಮಾಣಿಗಳ್ನ ನೋಡ್ತ್. ಅವು ಹಂಚಿಕಂಡಂಗೆ ತಮ್ಮಿಬ್ಬರ್ನ ನೋಡುತಿದ್ದುದರ್ನ ಅವ್ಳ್ ಆಗಿಂದಲೇ ಗಮನಿಸಿತ್ತ್. ಹಸ್ರ್ ಲುಂಗಿನ ಮಾಣಿ ಅಮ್ಮಣ್ಣಿನೇ ನೋಡ್ತಿದ್ದರೆ, ಹಳ್ದಿ ಲುಂಗಿಯಂವ ಬಾಳಕ್ಕನ ಮೇಲೆ ಕಣ್ಣ್ ಹಾಕಿತ್ತ್.

ಅಮ್ಮಣ್ಣಿಗೆ ಅಂತ ನೋಟ ಹೊಸ್ತಾಗಿತ್ಲೆ. ಚೌಕಿಲಿ ಸ್ವಸ್ತಿಕದೆದ್ರ್ ಗಜಮುಖದವಗೆ ಹಾಡಿಕಾಕನ ಮೋರೆಗೆ ಬಣ್ಣ ಮೆತ್ತಿಕಂಬ ಕಲಾವಿದರ್ಲಿ ಕೆಲವು ಅವಳ್ನ ಹಾಂಗೆ ನೋಡ್ತಿದ್ದೊ. ರಂಗಸ್ತಳಲಿ ಕುದ್ದ್ ಬಾಗವತಿಕೆ ಮಾಡಿಕಾಕನ, ಲೈಟ್ ಮೈಕದವರ್‌ಂದ ಹಿಡ್ದ್ ಎದ್ರ್ ಸಾಲ್‌ಲಿ ಕುದ್ದ ಎಲ್ಲರ ನೋಟ ಅವ್ಳ ಮೇಲೆ ಹರಿಯಕಾಕನ ಅಮ್ಮಣ್ಣಿಗೆ ಕಸಿವಿಸಿ ಆಗ್‌ತಿತ್ತ್. ಗಂಡ್ಸರ ಆ ಆಸೆಯ ನೋಟಕ್ಕೆ ಸತ್ಯಣ್ಣ 'ವಂತಿಗೆ' ಅಂತ ಹೆಸ್ರ್ ಹಾಕಿತ್ತ್. ಯಕ್ಷಗಾನ ಸುರಾಕೆ ಮುಂದೆನೇ ಅವ "ಅಮ್ಮಣ್ಣೀ, ಇಂದ್ ವಂತಿಗೆ ತುಂಬಾ ಉಟ್ಟುಂತ, ಅವಳ್ನ ಕುಟುಕುತಿತ್ತ್. ಅಂವ ಗುರುಗಳಿಗೆ ಸಂಬಂದಲಿ ತಮ್ಮ ಆಕು. ಸತ್ಯಣ್ಣ ಚಂಡೆಗೆ, ಮಾಲಿಂಗ ಮಾವ ಮದ್ಲೆಗೆ ಇದ್ದರೆ ಅವ್ಳಿಗೆ ಹೆದ್ರಿಕೆನೇ ಆಗ್‌ತಿತ್ಲೆ. ಸುರೂಗೆ ಅವ್ಳಿಗೆ ಮೆಚ್ಚಿಕೆನ ನೋಟ ಮತ್ತು ಕಾಮುಕ ನೋಟದ ವ್ಯತ್ಯಾಸ ತಿಳಿತಿತ್ಲೆ. ಈಗ ಕಾಮುಕ ನೋಟ ಕಾಂಬಕಾಕನ ಅಸಹ್ಯ ಆಗ್‌ತಿತ್ತ್. ಆದ್ರೆ ಮೆಚ್ಚಿಗೆನ ನೋಟ ಹಾಡಿಕೆ ಇನ್ನೂ ಉತ್ತೇಜನ ಕೊಡ್ತಿತ್ತ್. ಕಾಮುಕ ನೋಟ ಎಷ್ಟಾದ್ರೂ ನೀನೊಂದು ಹೆಣ್ಣ್ ಎಂಬ ಕೀಳರಿಮೆನ ಮೂಡ್ಸ್‌ತಿತ್ತ್.

ಗಂಡ್ಸರ ಕಾಮುಕ ನೋಟದ ಬಗ್ಗೆ ಮಾಲಿಂಗ ಮಾವನೊಟ್ಟಿಗೆ ಹೇಳಿಕಂಬಕೆ ಅವ್ಳಿಗೆ ಮುಜುಗರ ಆಗ್ತಿತ್ತ್. ತನಗಿಂತ ಹೆಚ್ಚ್‌ಂತೇಳಿರೆ ಹತ್ತ್ ವರ್ಸದಷ್ಟ್ ದೊಡ್ಡಂವ ಸತ್ಯಣ್ಣನೊಟ್ಟಿಗೆ ಹೇಳಿಕಂಬಕೆ ಸಂಕೋಚಾಗ್‌ತಿತ್ಲೆ. ಸತ್ಯಣ್ಣ ಅವ್ಳ ಮಾತ್ ಕೇಳಿ ನಗಾಡಿಬುಡ್ತಿತ್.

"ಹೆಣ್ಣ್‌ಂತಂದರೆ ಸಾಕ್, ಗಂಡ್ಸರ್ ನೋಡುದು ಸಾಮಾನ್ಯ. ಹೆಣ್ಣ್‌ಗ ಗಂಡ್‌ಗಳ್ನ

ಕಡೆಗಣ್ಣಿನ ನೋಟಂದ ಕಾಡಿವೆ. ಅಂತ ಹಾಡ್‌ಗಳ್ನ ನೀನೆಷ್ಟ್ ಹಾಡ್ತ್‌ಲೆ. ಅದೆಲ್ಲ ಸಹಜಂತ ತಿಳ್ಕಂಡರಾತ್. ಸಾವಿರ ಜನ್ರೆದ್‌ರ್ ರಂಗಸ್ತಳ ಹತ್ತಿ ಒಬ್ಬಳ್ ಹೆಣ್ಣ್ ಹಾಡಿಕಾಕನ ಅವಳ್ನ ನೋಡಿಕಾಗದ್‌ಂತೇಳಿರೆ ಹೇಂಗೆ? ನೀನೊಮ್ಮೆ ಸರಿಯಾಗಿ ಕನ್ನಡಿ ನೋಡಿಕ. ನಂಗೇನೇ ನಿನ್ನ ನೋಡೊಕುಂತಾದೆ. ಇನ್ನ್ ಆ ಹುಲುಮಾನವರ ಪಾಡೇನ್ ಹೇಳ್?"

"ಹೋಗಿ ಸತ್ಯಣ್ಣಾ, ಸಾಕ್ ನಿಮ್ಮ ತಮಾಸೆ." ಅವ್ಳ್ ಸತ್ಯಣ್ಣನ ಬೆನ್ನಿಗೆ ಒಂದೇಟ್ ಹಾಕಿತ್. ಸತ್ಯಣ್ಣ ನಗಾಡ್ತ್. ಅವಂದ್ ಯಾಗೋಳು ಕೀಟಲೆ ಸ್ವಭಾವ. ಯಕ್ಷಗಾನದ ವರ್ತುಲಲಿ ಸರಸ ಮಾತ್‌ಗಳಿಗೆ ಕೊರತೆಯಿತ್ಲೆ. ಆದರೆ ಅಲ್ಲಿ ಅಷ್ಟಮಂಗಲದ ದಾರ್ಮಿಕ ವಿದಿಲಿ ಬಾಗವಹಿಸುವ ಮಾಣಿಗಳ ಕಣ್ಣ್‌ಲಿ ಆ ಹಸಿವು ಕಂಡ್ ಅವ್ಳಿಗೆ ಒಂದು ತರಾ ಆತ್. ದೇಹದಾಸೆಗೆ ಸಮಯ ಸಂದರ್ಬ ಯಾವ್ದೂ ಇಲ್ಲೆಂತೇಳುವ ಸತ್ಯ ಅವ್ಳಿಗೆ ಗೊತ್ತಾತ್.

ಬಾಳಕ್ಕ ಹೊತ್ತು ಸಾದಿಸಿ ಅವ್ಳ ಕೆಬಿಲಿ ಹೇಳ್ತ್.

"ಆ ಎರ್ಡ್ ದರಿದ್ರ ಮಾಣಿಗಳ್ನ ನೋಡು. ಹಸ್ರ್ ಲುಂಗಿಯವ ನಿನ್ನ ಹಸ್ದ ಹೆಬ್ಬುಲಿಯ ಹಾಂಗೆ ನೋಡ್ತುಟ್ಟು. ಹಳದಿ ಲುಂಗಿಯಂವ ಪಂಚಶರನ ಬಾದೆಂದ ನನ್ನ ಎವೆಯಿಕ್ಕದೆ ನೋಡ್ದೆ. ಇಷ್ಟೊಂದು ಹಸಿದ ಕಣ್ಣ್‌ಗಳ ನಾನ್ ಈವರೇಗೆ ಕಂಡದೇ ಇಲ್ಲೆ. ಗಿರಿಜಾಕಲ್ಯಾಣಿಲಿ ಮನ್ಮತ ಶರಪ್ರಯೋಗ ಮಾಡುವ ಸಮಯದ ಹಾಡ್ ಉಟ್ಟಲ್ಲಾ? ಅದನ್ನ್ ಹಾಡಿಬುಡು. ಮೂರ್ನೆ ಕಣ್ಣ್ ತೆರ್ದ್ ದರಿದ್ರ ಮಾಣಿಗಳ್ನ ಸುಟ್ಟ್ ಬೂದಿ ಮಾಡಿಬುಟ್ಟನೆ."

ಬಾಳಕ್ಕನ ಸಾಹಿತ್ಯ ಶಕ್ತಿ ತನ್ನದಕ್ಕಿಂತ ಹೆಚ್ಚಿನದ್. ತನ್ನದೇನಿದ್ದರೂ ಸಂದರ್ಬಕ್ಕೆ ತಕ್ಕ ಹಾಂಗೆ ಹಾಡುವ ಕೆಲ್ಸ. ಅವಳ್ ಪಾತ್ರದಾರಿಯಾಗಿ ಅರ್ತ ಹೇಳುವವಳ್. ವಾದ, ತರ್ಕಮಂಡನೆ, ಖಂಡನೆ ಮತ್ತು ಪ್ರತಿಪಾದನೆ ಇದೆಲ್ಲ ಅವ್ಳ ಕೆಲ್ಸ. ಅದಕ್ಕೆ ತುಂಬಾ ಯೋಚಿಸೋಕು. ಅಷ್ಟೇ ಓದೋಕಾದೆ. ಸಂದರ್ಬಕ್ಕೆ ತಕ್ಕಹಾಂಗೆ ತನ್ನ ಜ್ಞಾನನ ಬಳ್ಸೋಕಾದೆ. ಸಮಯ ಪ್ರಜ್ಞೆ ಬೇಕು. ಈ ಮಾಣಿಗಳ್ನ ಕಾಂಬಕಾಕನ ಅವ್ಳಿಗೆ ನೆನ್‌ಪಾದ್ ಮನ್ಮತನ ಸುಟ್ಟ ಶಿವ! ಮಂಜುನಾಥ ಗುರುಗ ಆಗಾಗ ಹೇಳ್ತಿದ್ದೊ.

"ಪುರಾಣಗಳ್ನ ಪ್ರತಿಮೆಯಾಗಿ ತಕಂಡ್ ಹೊಸ ಅರ್ತ ಹುಡ್ಕೋಕು. ಕಾಮನೆಗಳ್ನ ಸುಟ್ಟಾಕನ ಸತ್ಯದ ದರ್ಶನಾದೆ. ಮನ್ಮತನ ಸುಟ್ಟಮೇಲೆ ಶಿವ ಗಿರಿಜೆನ ಮದುವೆಯಾದೆ. ಕಾಮ ಸುಟ್ಟು ಹೋದ ಮೇಲೆ ಉಳಿದ ಪ್ರೇಮಂದ ಜಗತ್ತಿನ ಕಲ್ಯಾಣ ಆದೆ. ಹೋಳಿ ಹಬ್ಬದ ದಿನ ಮಾಡುವ ಕಾಮದಹನಕ್ಕೂ ಅದೇಅರ್ತ."

ಗುರುಗ ಆದರ್ಶದ ನೆಲೆಲಿ ಮಾತಾಡಿದ್ದೊ. ಈ ಮಾಣಿಗಳ ನೋಟದ ಕಟು ವಾಸ್ತವನ ಆ ಆದರ್ಶದೊಟ್ಟಿಗೆ ಸಮನ್ವಯಗೊಳ್ಸಿಕೆ ಆದುಲೆ. ಸಹಜ ಬಯಕೆಗ ತರ್ಕಾತೀತವಾದವ್‌ಗಳ್‌ಂತ ಅವ್ಳ್ ಅಂದ್‌ಕಣ್ತ್.

ಬೋಳಂತಾಯ ಬಟ್ರ್ ತುಳ್ಸಿಕಟ್ಟೆಯೆದ್‌ರ್ ಲಾಯ್ಕಾಗಿ ಮಂಡಲನ ರಚಿಸಿದ್ದೊ. ಮಂಡಲದ ನಡುವೆ ಕಾಲ್ದೀಪ ಇಸಿ ಕಾಯೆಣ್ಣೆಲಿ ನೆನ್ಸಿದ ಬತ್ತಿಗಳ್ನ ಉರ್ಸಿದೊ. ಒಂದು ಕಾಯಿ ಒಡ್ದ್ ಅದಕ್ಕೆ ಅರ್ಸಿನ, ಶ್ರೀಗಂಧ, ಕುಂಕುಮ ಹಚ್ಚಿ ಅರ್ಪಣೆಗಿಸಿದೊ. ಒಂದು ಹರಿವಾಣಲಿ ಎರ್ಡ್‌ಪಡ ಬಾಳೆಹಣ್ಣ್, ಐದ್ ಎಲೆ, ಒಂದು ಅಡ್ಕೆ ಇಸಿ ಮಂಡಲದ ಮುಂದೆ ಇಸಿದೊ. ಕಟ್ಟೆನ ಬಲ ಬಾಗಲಿ ಸಣ್ಣ ಆಕಾರದ ಮತ್ತೊಂದು ಮಂಡಲ ರಚಿಸಿ ಅಗಲ ಮಣೆ ಮೇಲೆ ಕುದ್ದ್‌ಕಂಡ್ ಕವಡೆಗಳ್ನ ಕೈಯಿಲಿ ಹಿಡ್ದ್ ಮಂತ್ರೋಚ್ಚಾರಣೆ ಸುರುಮಾಡ್ದೋ.

ಸುರೂನ ಸ್ತುತಿ ಶ್ಲೋಕಗಳಾಗಿತ್. ಹೆಚ್ಚಿನದ್ ಗಣಪತಿಗೆ ಸಂಬಂದಿಸಿದ್ದ್. ಗುರುಗಳ ಕಲಾ ಶಾಲೆಲಿ ಕೇಳಿ ಕೇಳಿ ಅವುಗಳಲ್ಲಿ ಕೆಲವು ಬಾಯಿಪಾಠ ಆಗಿತ್ತ್. ಮತ್ತೆ ಹಂಞ ಹೊತ್ತಾದ ಮೇಲೆ ಬೋಳಂತಾಯ ಬಟ್ರ ಬಾಯಿಂದ ಅವ್ಳ್ ಈವರೇಗೆ ಕೇಳಿರದಿದ್ದ ಮಂತ್ರ್ರಗ ಬರ್ತಿತ್ತ್. ಒಂದು ಮಂತ್ರಂತೂ ತುಂಬಾ ವಿಚಿತ್ರ ರೀತಿಲಿ ಇತ್ತ್. ಅದರ ಪ್ರತಿಯೊಂದು ಚರಣ 'ಬಗ' ಅಂತ ಆರಂಬ ಆಗ್ತಿತ್ತ್. ಅವ್ಳ್ ಬೋಳಂತಾಯ ಬಟ್ರ ಎದ್‌ರಿರುವ ಸಣ್ಣ ಮಂಡಲನ ನೋಡ್ತ್.ಮೂರು ತ್ರಿಬುಜಾಕೃತಿಗಳ್ನ ಒಂದಕ್ಕೊಂದು ಸಮನ್ವಯಗೊಳ್ಸಿ ಬಾರಿ ಬುದ್ದಿಕರ್ಚಿಮಾಡಿ ರಚಿಸಿದ್ದೊ. ಅವ್ಗಳ ನಡೂಲಿ ಕುಂಕುಮ ಹಚ್ಚಿದ್ದೊ. ಅದರ ಆದಿಶಕ್ತಿನ ಯೋನಿಮುದ್ರೆ ಅಂತ ಕರ್ದವೆಂತ ಗುರುಗ ಹೇಳ್ದ್ ನೆನ್ಪಿಗೆ ಬಾತ್. ಇದ್ ಅದೇ ಸಂಕೇತ ಇರ್ದೊಂತ ಅವ್ಳಿಗೆ ಅನ್ನಿಸಿತ್. ಬೋಳಂತಾಯ ಬಟ್ರ್‌ಗೆ ಆ ಸಂಕೇತದ ಒಳಾರ್ತ ಗೊತ್ತಿರಿಕಿಲೆ. ನಾನ್ ಕೇಳ್ರೆ ಹಾಂಗೆ ಬುಡ್ಸುದು ಸಂಪ್ರದಾಯಾಂತ ಹೇಳ್ವೊ. ಹಾಂಗೆ ಹೇಳ್ಸಿಕಂಬುದಕ್ಕಿಂತ ಕೇಳದಿರುದೇ ಒಳ್ಳೆದ್‌ಂತ ಅವ್ಳ್ ಸುಮ್ಮನಿತ್ತ್.

ಮಂತ್ರ ನಿಲ್ಸಿ ಬಟ್ರ್ ಹೇಳ್ದೊ. "ಈಗ ಮನೆವೆಲ್ಲಾ ಇಲ್ಲಿಗೆ ಬಂದ್ ಈ ದೀಪದ ಮುಂದೆ ಕುದ್ದ್‌ಕಣಕ್ಕು. ನಾನ್ ಕೇಳಿಕಾಕನ ಸತ್ಯನೇ ಹೇಳೋಕು. ಸತ್ಯ ಅಲ್ಲದೆ ಬೇರೇನೂ ಹೇಳಿಕಾಗದ್. ನೀವ್ ಹೇಳ್ದೆಲ್ಲಾ ಸತ್ಯ ಆಗಿರೊಕು. ನಾನೀಗ ಮಂತ್ರೋಚ್ಚಾರಣೆ ಮಾಡಿ ಮಂಡಲಲಿ ದೇವಿನ ಆವಾಹನೆ ಮಾಡ್ದೆ. ಸುಳ್ಳು ಹೇಳುವರ್ನ ದೇವಿ ವಿಚಾರಿಸಿಕಂಡದೆ. ನೀವೀಗ ಪ್ರಶ್ನೆ ಸುರುಮಾಡಕ್."

ಸುರು ಮಾಡೋವು ಯಾರ್? ಅಜ್ಜ ಇದ್ದಿದ್ದರೆ ಅವು ಸುರು ಮಾಡ್ತಿದ್ದೊ.

ಅಪ್ಪ ತಪ್ಪಿತಸ್ತನಾಗಿ ಅಪರಾದಿ ಸ್ತಾನಲಿ ನಿತ್ತುಟು. ಅಪ್ಪ ಇರಿಕಾಕನ ಚಿಕ್ಕಪ್ಪಂಗ
ಸುರುಮಾಡಿಕೆ ಹಿಂಜರಿಕೆ. ಪೋಲೀಸ್ ಮಾವ ಈ ಮನೆವು ಅಲ್ಲ
ಇನ್ನ್ ಅಪ್ಪ ಇರಿಕಾಕನ ಅವ್ವ ಪ್ರಶ್ನೆ ಸುರುಮಾಡುವ ಹಾಂಗೆ ಇಲ್ಲೆ.

ಕಡೆಗೆ ತ್ಯಾಂಪಣ್ಣನೇ ಸುರುಮಾಡ್ತ್.

"ಕಜೆಂತೇಳಿ ಕರೆಯುವ ಈ ಜಾಗಲಿ ತುಂಬಾ ವರ್ಷಗಳ ಹಿಂದೆ ತೋಟ ಮತ್ತು
ಮನೆಮಾಡಿ ಕುಟುಂಬ ಜೀವನನ ಆರಂಬಿಸಿದ್ದ್ ನಮ್ಮೆಲ್ಲರ ಹಿರಿಯೊವು ಆದ
ದಾಸಪ್ಪಣ್ಣ. ಸ್ತಳ ದೇವರ್‍ಗಳಿಗೆ ದೇವಸ್ತಾನಲಿ ಅರ್ಚನೆ ಮಾಡ್ಸಿಯೊಳೊ. ಕುಲ
ದೈವಗಳಿಗೆ ದೈವಸ್ತಾನ ಕಟ್ಟಿಸಿ ಕ್ರಮಪ್ರಕಾರ ತಂಬಿಲ ನಡ್ಸಿಕಂಡ್ ಬಂದೊಳೊ
ದೀಪಾವಳಿ, ಅಮಾವಾಸ್ಯೆಗೆ ಕನ್ನಿಕಂಬದೆದ್‍ರ್ ಗುರುಕಾರ್ನೂರಿಗೆ ಬಡಿಸುತ್ತೊಳೊ
ದಾಸಪ್ಪಣ್ಣ ತೀರಿ ಹೋಗಿ ಐದ್ ವರ್ಷದ ಮೇಲಾತ್. ಇಲ್ಲಿಯವರೇಗೆ ಈ
ಕುಟುಂಬಕ್ಕೆ ಸರ್ವದೇವ ದೈವಗಳ ಶ್ರೀರಕ್ಷೆಯಿತ್ತ್. ಆದರೆ ಕೆಲವು ದಿನಗಳ್‍ಂದ
ಈ ಕುಟುಂಬಲಿ ಮನಕ್ಲೇಶಗಳ್ ಕಾಣಿಸಿಕೊಳ್ತಾ ಉಟ್ಟು. ನಾವ್ಗೆ ಯಾರ್‍ಗೂ ನೆಮ್ಮದಿ
ಇಲ್ಲದಾಗುಟು. ಅದಕ್ಕೆ ಕಾರಣ ಏನ್ ಎಂಬುದನ್ನ್ ಕಂಡ್‍ಹಿಡ್ದ್ ಪರಿಹಾರ
ಸೂಚಿಸೊಕು.

ಬೋಳಂತಾಯ ಬಟ್ರ್ ಬೊಗಸೆಯೊಳಗೆ ಕವಡೆಗಳ್ನ ಸರಿಯಾಗಿ ಕುಲ್ಕಿ
ಮಂಡಲದೊಳಗೆ ಹಾಕಿದೊ. ಬಿದ್ದ ಕವಡೆಗಳ್ನ ಕೈಯಿಂದ ಸರ್ಸಿ ಲೆಕ್ಕ ಹಾಕಿದೊ.
ಉರಿತಿದ್ದ ಕಾಲ್ದೀಪನೇ ನೋಡ್ತಾ ಹಂಞ ಹೊತ್ತು ಮೌನಲಿ ಕಳ್ದೊ. ಅವರ
ಮೋರೆ ಗಂಬೀರ ಆತ್.

"ಈ ಕುಟುಂಬಲಿ ಒಂದು ದುರ್ಮರಣ ನಡ್ದುಟು"

ಅವರ ಮಾತಿಗೆ ಯಾರೂ ಪ್ರತಿಕ್ರಿಯೆ ನೀಡ್ತ್‌ಲೆ.

"ಹೇಳಿ ಹೌದೋ ಅಲ್ಲನೋ?"

ಗಡಿಬಿಡಿಂದ ತ್ಯಾಂಪಣ್ಣ ಉತ್ತರಿಸಿತ್.

"ಹೌದು ದುರ್ಮರಣ ನಡ್ದದ್ ಹೌದು. ದಾಸಪ್ಪಣ್ಣನ ಹೆಣ್ಣಿಗೆ ಕ್ಯಾನ್ಸರ್
ಆಗಿತ್ತ್. ಮದ್ದಿಗೆ, ಮಂತ್ರಕ್ಕೆ ಅದ್ ಜಗ್ಗಿತ್ಲೆ. ರೋಗ ಬಾದೆ ತಡೆಕ್ಕಾಗದೆ ಅವು
ಒಂದು ಮಳೆಗಾಲಲಿ ತಪಸ್ವಿನಿಗೆ ಹಾರಿಬುಟ್ಟೊ." ಬೋಳಂತಾಯ ಬಟ್ರ್ ಸಮ್ಮತಿಸುವ
ಹಾಂಗೆ ತಲೆಯಾಡ್ಸಿದೊ.

"ಹೌದು, ನೀವು ಹೇಳುತ್ತಿರುದು ಸತ್ಯ. ಇಲ್ಲಿ ಹೆಣ್ಣ್ ಪ್ರೇತ ಒಂದು ನನ್ನ ಕಣ್ಣಿಗೆ
ಸ್ಪಷ್ಟ ಆಗಿ ಕಾಣ್ತುಟ್ಟು.". ಅಮ್ಮಣ್ಣಿ ಹೆದ್ರಿ ಬಾಳಕ್ಕನ ತಬ್ಬಿಕಂಡ್ ಸುತ್ತು ಮುತ್ತ
ನೋಡ್ತ್.

"ಏಯ್, ನಿಂಗೇನಾದ್ರ್ ಕಾಣ್ತುಟ್ಟೊ?
ಅಕ್ಕ ಪಿಸುಗುಟ್ಟಿದಕ್ಕೆ ಬಾಳಕ್ಕ ಇಲ್ಲೆಂತ ತಲೆಯಾಡ್ಸಿತ್.

"ಪ್ರೇತಕ್ಕೆ ಮುಕ್ತಿ ಸಿಕ್ಕಿತ್ಲೆ. ನೀವ್ ನಡ್ಸಿದ ಅಂತ್ಯಕ್ರಿಯೆಲಿ ಲೋಪಾಗುಟ್ಟು. ಅದಕ್ಕೊಂದು ಶಾಂತಿಹೋಮ ಮಾಡಿ, ಕುಲಾಚಾರ ಪ್ರಕಾರ ಅಂತ್ಯಕ್ರಿಯೆ ನಡ್ಸೋಕು. ದಾಸಪ್ಪನ ದೂಪೆ ಪಕ್ಕಲಿ ಒಂದು ಸಮಾದಿ ಮಾಡೋಕು."

ಅಮ್ಮಣ್ಣಿಗೆ ಅಜ್ಜ ಹೇಳ್ತಿದ್ದದ್ ನೆನ್ಪಾತ್. ಎದೆಲಾದ ಹುಣ್ಣುಬೇನೆ ಸಹಿಸಿಕ್ಕಾಗದೆ ಮಳೆಗಾಲಲಿ ತಪಸ್ವಿನಿಗೆ ಹಾರಿ ಜೀವಕಳ್ಕಂಡ ಅಜ್ಜಿನ ಅಸ್ತಿಪಂಜರ ಕೆಳಗೆಲ್ಲೊ ಸಿಕ್ಕಿತ್ತ್. ಅದನ್ನ್ ಅಲ್ಲೆ ಎಲ್ಲೊ ಗುಂಡಿ ತೆಗ್ದ್ ಹುಗ್ದ್ ಬಂದಿದ್ದೊ. ಹಾಂಗಾಗಿ ಅಜ್ಜಿಗೆ ಸಾಂಪ್ರದಾಯ ಪ್ರಕಾರ ಅಂತ್ಯ ಸಂಸ್ಕಾರ ಆತ್ಲೆ. ಬೋಳಂತಾಯ ಬಟ್ರ್‌ಗೆ ಇದೆಲ್ಲಾ ಹೇಂಗೆ ಗೊತ್ತಾದೆ? ಅವರ ಕಣ್ಣಿಗೆ ಕಾಂಬ ಪ್ರೇತ ನಂಗೇಕೆ ಕಾಂಬೋದ್ಲೆ.

ಈಗ ಅಪ್ಪಂಗೆ ಮಾತಾಡಿಕೆ ಹಂಞ ದೈರ್ಯ ಬಾತ್.

"ಅವ್ವಂಗೆ ಯಾವ ಪ್ರತಿಕ್ರಿಯೆನೂ ಆತ್ಲೆ. ನಮ್ಮ ತ್ಯಾಂಪಣ್ಣ ಎಷ್ಟ್ ಹೇಳಿರೂ ಅಪ್ಪ ಅದನ್ನ್ ಕೆಬಿಗೆ ಹಾಕಿಕಣ್ತೇಲೆ. ಈ ಬೂಮಿಲಿ ಅವಳ್ ನಿತ್ಯ ನರಕ ಅನುಬವಿಸಿತ್. ಅಂತವ್ಳಿಗೆ ಸ್ವರ್ಗ ಅಲ್ಲದೆ ನರಕ ಸಿಕ್ಕಿಕೆ ಸಾದ್ಯನೇ ಇಲ್ಲೆ. ಇಲ್ಲಿ ದಿನಾ ನರ್ಕ ಅನುಬವಿಸಿದವಳ ಹೆಸ್ರ್‌ಲ್ಲಿ ಕೋಳಿ ರೊಟ್ಟಿನೋ? ಅಂದಿ ಗೈಪು ಅಪ್ಪದಿಟ್ಟೊ? ತಿಂಬಕೆ ನನ್ನಿಂದ ಸಾದ್ಯ ಇಲ್ಲೆ. ಬೇರೆಯವುಕೆ ಮಾಡಿ ಹಾಕಿಕೂ ಮನ್ಸಿಲ್ಲೆಂತ ಖಡಾಕಂಡಿತಾಗಿ ನಿರಾಕರಿಸಿಬುಟ್ಟತ್."

ಬೋಳಂತಾಯ ಬಟ್ರ್ ಈಗಳೂ ಜ್ಯೋತಿನೇ ದಿಟ್ಟಿಸ್‌ತಿದ್ದೊ.

"ಅದೇ ಅವು ಮಾಡ್ದ ತಪ್ಪು. ಮನುಷ್ಯರಿಗೆ ಪೂರ್ವಾರ್ಜಿತ ಕರ್ಮಪಲಂತ ಒಂದು ಉಟ್ಟು. ಅದನ್ನ್ ಕಳೆಕ್ಕಂತ್ಲೇ ಬಗವಂತ ನಮ್ಮನ್ ಬೂಮಿಗೆ ಕಳ್ಸುದು. ಜೀವನಲಿ ಬರುವ ಕಷ್ಟಗಳ್ನ ಬಗವಂತನ ಸಂಕಲ್ಪಂತ ತಿಳ್ಕಣಕು. ನೀರಿಗೆ ಹಾರಿ ಸತ್ತ ಕಾರಣ ಅವ್ಳ ಪೂರ್ವಾರ್ಜಿತ ಕರ್ಮಪಲ ಪೂರ್ತಿಯಾಗಿ ಕಳ್ದ್ ಹೋತ್ಲೆ. ಸರಿಯಾದ ಅಂತ್ಯ ಸಂಸ್ಕಾರ ಮಾಡ್ತಿದ್ರೆ ಹಂಞದ್ರ್ ಸರಿ ಹೋತಿತ್ತ್. ಅವ್ಳಿಗೆ ಮುಕ್ತಿ ಸಿಕ್ಕಿತ್ಲೆ. ಎಲ್ಲಾ ಕಾರಣ ಸೇರಿ ಅವ್ಳ್ ಪ್ರೇತಾಗಿ ಅಲಿಯುತುಟ್ಟು. ಮಿಂಚಿ ಹೋದಕ್ಕೆ ಚಿಂತಿಸಿ ಪಲ ಇಲ್ಲೆ. ಪ್ರೇತ ಶಾಂತಿ ಹೋಮ ಮಾಡಿ ಸಮಾದಿ ನಿರ್ಮಿಸಿರೆ ಎಲ್ಲಾ ಸರಿ ಹೋದೆ."

ಅಪ್ಪನ ಮೋರೆಲಿ ಹಂಞ ನೆಮ್ಮದಿ ಕಾಣ್ಸಿತ್. ಬೋಳಂತಾಯ ಬಟ್ರ್ ಮತ್ತೆ ಜ್ಯೋತಿನ ದಿಟ್ಟಿಸಿದೊ.

"ಹೂಂ, ಇಲ್ಲಿ ಇನ್ನೊಂದು ಪ್ರೇತ ಕಾಣುತುಟ್ಟು. ಇದ್ ಹದಿನೆಂಟ್ ಇಪ್ಪತ್ತು ವರ್ಷದ್ದ್." ಅಮ್ಮಣ್ಣಿಗೆ ಏನ್‌ಂತ್ಲೇ ಗೊತ್ತಾತ್ತೆ. ಅಪ್ಪನ ನೋಡ್ರೆ ಅವ್ನ ಮೋರೆಲಿ ಆತಂಕ ಮಡುಗಟ್ಟಿತ್ತ್.

"ಇದ್ ಕೂಡಾ ಒಂದು ಹೆಣ್ಣ್ ಪ್ರೇತ. ಮದ್ವೆಯಾಗದೇ ಸತ್ತ್ ಹೋದ ಹೆಣ್ಣ್ ಮಗಳ್ ಪ್ರೇತಾಗುಟ್ಟು."

ಅಪ್ಪ ಆತಂಕಂದ ಹೇಳ್ತ್. "ಅದ್ ನಮ್ಮ ಅಕ್ಕ ಗೌರಮ್ಮ. ಅವ್ಳ್ ಬಯಂಕರ ಜ್ವರಂದ ನಡ್ಗಿ ನಡ್ಗಿ ಜೀವ ಬುಟ್ಟತ್. ಅದ್ ಮಲೇರಿಯಾ ಜ್ವರಗಡ. ಅವ್ಳಿಗೆ ವೈದ್ಯರ್ ಕಷಾಯ ಕೊಟ್ಟಿದ್ದೊ. ಅಪ್ಪ ಮಂತ್ರಿಸಿದ ಉರ್ಕು ಕಟ್ಟಿದ್ದೊ. ಆದ್ರೂ ಸತ್ತ್ ಹೋತು. ಆದ್ರೆ ಅವ್ಳಿಗೆ ಸರಿಯಾದ ಅಂತ್ಯಕ್ರಿಯೆ ಆಗ್ಟು, ಹದಿನಾರರ ಕುಲೆ ಕಾರ್ಯಕ್ರಮನೂ ನಡ್ಸಿಯೊಳೊ. ಮತ್ಯಾಕೆ ಅವ್ಳ್ ವೈಕುಂಟಕ್ಕೆ ಹೋಗದೆ ಇಲ್ಲೇ ಉಟ್ಟು?"

"ಮದ್ವೆಯಾಗದವು ವೈಕುಂಟಕ್ಕೆ ಹೋದಾದ್ರೂ ಹೇಂಗೆ? ಈಗ ಅವ್ಳಿಗೊಂದು ಮದ್ವೆಯಾದ್ರೆ ಮತ್ತೆ ಅವ್ಳ್ ಪ್ರೇತಾಗಿ ಅಲಿದುಲೆ."ಅಮ್ಮಣ್ಣಿ ಮತ್ತು ಬಾಳಕ್ಕ ಮೋರೆ ಮೋರೆ ನೋಡಿಕೊಂಡೊ. ಸತ್ತ್ ಹೋದೊವುಕೆ ಮೊದುವೆ! ತ್ಯಾಂಪಣ್ಣ ಹೇಳ್ತ್, "ಸರಿಯಾಗಿ ನೋಡಿಬುಡಿ ಸ್ವಾಮಿ. ಇನ್ನೂ ಪ್ರೇತಗ ಇದ್ದರೆ ಎಲ್ಲದಕ್ಕೂ ಒಟ್ಟಿಗೆ ಶಾಂತಿ ಮಾಡ್ಸೋನೊ."

ಬೋಳಂತಾಯ ಬಟ್ರ್ ಮತ್ತೆ ಜ್ಯೋತಿಲಿ ತಲ್ಲೀನರಾದೊ.

"ಶಾಂತಿ ಸಿಕ್ಕದ ಮನುಷ್ಯ ಪ್ರೇತಗ ಇಲ್ಲಿ ಕಾಂಬೋದಿಲ್ಲೆ. ಪ್ರಾಣಿಗಳ ಪ್ರೇತಗ ಕಂಡವೆ. ಆದರೆ ಯಾವ ಪ್ರಾಣಿಗಳ್ದ್‌ಂತ ಸ್ಪಷ್ಟ ಆದುಲ್ಲೆ."

"ಮತ್ಯಾವ ಪ್ರಾಣಿಗಳ್ದ್ ಸ್ವಾಮಿ? ಹುಲಿ ಹಿಡ್ದ ದನಗಳ್ದೇ ಇರೋಕು. ಅವ್ಗಳಿಗೆ ಏನ್ ಮಾಡೋಕು?"

"ಅವುಗಳ್‌ಂದ ದೊಡ್ಡ ತೊಂದರೆಯೇನಿಲ್ಲೆ. ದನಗಳ ಪ್ರೇತ ಶಾಂತಿಗಾಗಿ ನೀವ್ ಹನ್ನೆರಡ್ ಮಂದಿ ಬ್ರಾಹ್ಮಣರಿಗೆ ಸುವರ್ಣ ದಾನ ಮತ್ತು ಗೋದಾನ ಮಾಡೋಕು. ಆಗ ಎಲ್ಲಾ ತೊಂದರೆಗ ನಿವಾರಣೆಯಾದೆ."

ಬೋಳಂತಾಯ ಬಟ್ರ್ ಜ್ಯೋತಿಂದ ದೃಷ್ಟಿ ತೆಗ್ತ್ತೆ.

"ಇನ್ನೂ ಒಂದು ಪ್ರಶ್ನೆನ ಪರಿಹರ್ಸೋಕಾದೆ. ಇಲ್ಲಿರುವ ಬೂತಸ್ತಾನದ ದೈವಗಳಿಗೆ ಕೋಪ ಬಂದ ಹಾಂಗೆ ಕಂಡದೆ. ಕೆಲವು ವರ್ಷಗಳ್‌ಂದ ನೀವು ಕಾಟಾಚಾರಕ್ಕೆ ತಂಬಿಲ ಮಾಡ್ದಂಗೆ ಕಂಡದೆ. ಅದಕ್ಕೆ ದೈವಗ ಮುನ್ದೊಳೊ."

ಅಪ್ಪನ ಮೋರೆಲಿದ್ದ ರಕ್ತ ಆರಿ ಹೋಗಿತ್ತ್. ಮಾತಾಡಿಕೆ ಸ್ವರ ಬಾರದೆ ದೈನತೆಂದ ಕೈಮುಗ್ತ್.

"ಆತಂಕೇನು ಬೇಡ. ಆ ಬೂತಸ್ತಾನಗಳಿಗೆ ಬ್ರಹ್ಮಕಲಶ ಆಕು. ಹಾರೋಂವ್ಕೆ ಸುವರ್ಣದಾನ ಮತ್ತು ವಸ್ತ್ರದಾನ ಮಾಡೋಕು. ಎಲ್ಲ ಸರಿಹೋದೆ. ಇನ್ನೇನೂ ನಂಗೆ ಇಲ್ಲಿ ಕಾಂಬೋದ್ಲೆ. ಆತಲ್ಲ, ಎಲ್ಲರ ಅಪ್ಪಣೆ ಮೇರೇಗೆ ಅಷ್ಟಮಂಗಲ ಪ್ರಶ್ನಾ ಕಾರ್ಯಕ್ರಮ ಮುಗಿಸ್ತೊಳೆ."

ಅಪ್ಪ ಏನೂ ಹೇಳ್ವ ಸ್ತಿತಿಲಿ ಇತ್ಲೆ. ಬೋಳಂತಾಯ ಬಟ್ರ್ ಹಸಿರ್ ಲುಂಗಿ ಮಾಣಿನ ನೋಡ್ತ್. ಅಂವ ತಯಾರ್ ಮಾಡಿಸಿದ ಆರತಿನ ಅವನ ಕೈಗೆ ಕೊಟ್ಟತ್. ಅವು ಕಾಲ್‌ದೀಪಂದ ಅದರ ಹೊತ್ತಿಸಿ ತುಳ್ಸಿಗೆ ಮಂಗಳಾರತಿ ಎತ್ತಿದೊ. ಹಸಿರ್ ಲುಂಗಿಯ ಮಾಣಿ ಶಂಖ ಊದಿತ್. ಇನ್ನೊಬ್ಬ ಜಾಗಟೆ ಬಾರಿಸಿತ್. ಮಂಗಳಾರತಿ ಆಕನೂ ಅವಿಬ್ಬರ್ ಬಾಳಕ್ಕ ಮತ್ತು ಅಮ್ಮಣ್ಣಿಯರ್ನ ನೋಡ್ತಿದ್ದೊ. ಅಮ್ಮಣ್ಣಿ ಬಾಳಕ್ಕಂಗೆ ಕಣ್ಸನ್ನೆ ಮಾಡಿಕಾಕನ ಅವ್ಳ್ ನಗಾಡ್ತ್.

ಮಂಗಳಾರತಿ ಮುಗ್ಸಿ ಬೋಳಂತಾಯ ಬಟ್ರ್ ಮಣೆಂದ ಎದ್ದೊ. ಹಸ್ರ್ ಲುಂಗಿಯ ಮಾಣಿ ಅದೇ ಮಣೆಲಿ ಕುದ್ದ್ ತೀರ್ತಪ್ರಸಾದ ಕೊಡಿಕೆ ಸುರುಮಾಡ್ತ್. ಕಡೆಗೆ ಅಮ್ಮಣ್ಣಿ ಕೈಯೊಡ್ಡಿತ್. ಎಲ್ಲರ ಬೊಗಸೆಗೆ ಪ್ರಸಾದನ ದೂರಂದ ಬೀಸಾಡ್ತಿದ್ದ ಮಾಣಿ ಅಮ್ಮಣ್ಣಿಗೆ ಮಾತ್ರ ಕೈ ತಾಗ್ಸಿ ಪ್ರಸಾದ ಕೊಟ್ಟಿತ್. ಅಮ್ಮಣ್ಣಿ ಆಶ್ಚರ್ಯಂದ ಅವ್ನ ಮೋರೆ ನೋಡ್ತ್. ಅಲ್ಲೊಂದು ತರಾದ ನಗೆಯಿತ್ತ್.

"ನಿಮ್ಮ ಬಾಗವತಿಕೆ ಕೇಳಿಯೊಳೆ. ಇಷ್ಟ್ ಹತ್ರಂದ ನೋಡುತ್ತಿರುದು ಇದೇ ಸುರು. ನೀವು ಪೊರ್ಲೋ ನಿಮ್ಮ ಹಾಡ್ ಪೊರ್ಲೋಂತ ಹೇಳುದೆ ಕಷ್ಟ."

ಅಂವ ಅಮ್ಮಣ್ಣಿಗೆ ಮಾತ್ರ ಕೇಳ್ಸುವ ಹಾಂಗೆ ಮೆಲ್ಲನೆ ಪಿಸುಗುಟ್ಟಿತ್. ಅಮ್ಮಣ್ಣಿ ದುರದುರನೆ ಅವನ ನೋಡ್ತ್. "ದೇವತಾ ಕಾರ್ಯದ ನಡುವೆನೂ ನಿಮ್ಮದ್ ಕಳ್ಳಾಟ. ನಿಮ್ಮಿಬ್ಬರಲ್ಲಿ ಯಾರ್ ಹೆಚ್ಚ್ ಪಟಿಂಗರ್‌ಂತ ಹೇಳ್ದು ನಂಗೂ ಕಷ್ಟನೆ."

ಹಸ್ರ್ ಲುಂಗಿ ಮಾಣಿ ಅವಳ ಮಾತ್‌ಂದ ಕೋಪಿಸಿಕಣ್ತ್‌ಲೆ. ಬದಲಾಗಿ ಕಿರುನಗೆ ಬೀರ್ತಾ ಹೇಳ್ತ್, "ಪಟಿಂಗಂತೇಳಿರೆ ಬ್ರಹ್ಮಚಾರಿಗಂತಲೂ ಅರ್ತ ಉಟ್ಟು." ಇಂತವನಲ್ಲಿ ಮಾತಾಡಿ ಸುಖ ಇಲ್ಲೆಂತ ಅಮ್ಮಣ್ಣಿ ಬಾಳಕ್ಕನ ಹುಡ್ಕಿತ್.

"ಏನಕ್ಕಾ ಅದ್? ಮಾಣಿ ಪ್ರೇಮ ಸಲ್ಲಾಪನ ಸುರುಮಾಡ್ದ ಹಾಂಗುಟ್ಟು?"

"ಸುಮ್ಮನಿರಪ್ಪ ನೀನ್. ಆ ಪಟಿಂಗ ಕಾಮುಕನಲ್ಲಿ ಪ್ರೇಮ ಸಲ್ಲಾಪಗಡ."

ಅಂಗಳದ ಕರೇಲಿ ನಿತ್ತ್‌ಕಂಡ್ ಬೋಳಂತಾಯ ಬಟ್ರ್ ಅಪ್ಪಂಗೆ ಸಲಹೆ ನೀಡ್ತಿದ್ದೊ.

"ಈಗ ಹೇಳ್ದ ಸಂಗತಿಗಳನ್ನೆಲ್ಲಾ ಬೇಗ ಮುಗ್ಸಿಬುಡೋಕು. ಮುಕ್ತಿ ಸಿಕ್ಕದ ಪ್ರೇತಾತ್ಮಗ ಏನೇನ್ ಅನಾಹುತ ಮಾಡಿ ಬುಡುವೊಂತ ಹೇಳಿಕಾದುಲೆ. ದೇವತಾ ಕಾರ್ಯ ಅದ್ದರ್‌ಂದ ಬ್ರಹ್ಮಕಲಶ ಸುರೂಗೆ ಮಾಡಿಬುಡಿ. ಸಣ್ಣ ಮಟ್ಟಲಿ ಮಾಡಿರೆ ಸಾಕ್. ಅವ್ ಮುಗ್ದಮೇಲೆ ನಿಮ್ಮ ಅವ್ವಂಗೆ ಸಮಾದಿ ರಚಿಸಿ ಅಸುರ ಕ್ರಿಯೆ ಪ್ರೇತ ಶಾಂತಿ ಹೋಮ ಮಾಡ್ಸಿಬುಡೋನೊ. ಅವೆರಡಕ್ಕೆ ನಾನ್ ಬನ್ನೆ. ಮತ್ತೆ ನಿಮ್ಮ ಅಕ್ಕನ ಪ್ರೇತಕ್ಕೆ ಮದ್ವೆ ಆಕು. ಅದಕ್ಕೆ ನಾನಿಲ್ಲೆ. ಅದ್ ನಿಮ್ಮ ಜಾತಿ ಕಟ್ಟಳೆ ಪ್ರಕಾರ ನಡಿಯೋಕು."

ಅಪ್ಪ ಅವರ ಮಾತಿನ ಪ್ರಕಾರ ನಡ್ಕಂಡತ್. ಮುಂದೆ ಬೂತಸ್ತಾನಗಳಿಗೆ ಸುಣ್ಣ ಬಣ್ಣ ಬಳ್ದ್ ಬ್ರಹ್ಮಕಲಶ ಮಾಡ್ಸಿತ್. ಮೂರು ದಿನ ಬ್ರಹ್ಮ ಸಂತರ್ಪಣೆ ಮತ್ತು ಅದಾಗಿ ಶೂದ್ರ ಸಂತರ್ಪಣೆ ನಡ್ತ್. ಅಪ್ಪ ಹನ್ನೆರಡ್ ಜನ ವೇದಮೂರ್ತಿಗಳಿಗೆ ಸುವರ್ಣದಾನ, ವಸ್ತ್ರದಾನ, ಗೋದಾನ ಮಾಡ್ತ್. ಆ ಮೂರು ದಿನ ಅಮ್ಮಣ್ಣಿ ಮತ್ತು ಬಾಳಕ್ಕಂಗೆ ಪುರ್ಸೊತ್ತೇ ಇತ್ಲೆ.

ಮೂರು ದಿನನೂ ಅವೆರ್ಡ್ ಮಾಣಿಗಳೊಟ್ಟಿಗೆ ಬೋಳಂತಾಯ ಬಟ್ರ್ ಕಜೆ ಮನೆನ ಅಂಗ್ಳಲೇ ಬಿಡಾರ ಹೂಡಿದ್ದೊ.

ದಾನ ಪಡ್ದ ವೇದಮೂರ್ತಿಗ ಬಟ್ರ ನೆಂಟ್ರೇ ಆದ್ದರ್‌ಂದ ಬೋಳಂತಾಯ ಬಟ್ರ್ ಸಂತೃಪ್ತರಾಗಿದ್ದೊ. ಅವ್ಕ ಅಪ್ಪ ಅವ್ವನೊಟ್ಟಿಗೆ ಮೂರು ತರದ ದಾನಗಳ ಮಾಡಿ ಸಾಷ್ಟಾಂಗ ನಮಸ್ಕಾರ ಮಾಡ್ತ್.

ಎಲ್ಲವುಕ್ಕಿಂತ ಹೆಚ್ಚ್ ಸಂತೃಪ್ತರಾದೊವುಂತೇಳಿರೆ ಆ ಮಾಣಿಗ. ಅಷ್ಟಮಂಗಲ ಸಮಯಲಿ ಅವರ ನೋಡಟ ಹೇಂಗಿತ್ತೋ ಹಾಂಗೆ ಮುಂದುವರಿದಿತ್ತ್ ಬ್ರಹ್ಮಕಲಶ ಸಮಯಲಿ ಕೂಡ. ಹಸ್ರ್ ಲುಂಗಿ ಮಾಣಿ ಇಲ್ಲದ ಕಾರಣ ಹುಡ್ಕಿ ಅಮ್ಮಣ್ಣಿಯೊಟ್ಟಿಗೆ ಏನಾದ್ರ್ ಮಾತಾಡ್ತಿತ್ತ್. ಹಳದಿ ಲುಂಗಿಯಂವ ಬಾಳಕ್ಕನ ಬೆನ್ನ್ ಹತ್ತಿತ್‌ಂತ ಬೇರೆ ಹೇಳಕಾಗಿಲ್ಲೆ. ಮದ್ಯಾಹ್ನದ ಸಂತರ್ಪಣೆ ಕಾಲಲಿ ಬಾಳಕ್ಕ ಹೇಳ್ತ್,

"ನಮ್ಮನ್ ಆ ಮಾಣಿಗ ಹಂಚಿಕಂಡಂಗೆ ಆಡುತ್ತೊಳೊ. ಹಸ್ರ್ ಲುಂಗಿಯಂವ ನಿನ್ನನ್ನೇ ಮಾತಾಡ್ಸಿದೆ. ಹಳದಿ ಲುಂಗಿಯಂವ ನನ್ನ ಹಿಂದೆ ಬಿದ್ದುಟು. ಅವನ ಒಂದು ಕೈ ನೋಡಿಕುಟ್ಟು, ಅಂವ ಏನಾದ್ರ್ ಪಿಕಲಾಟ ಮಾಡ್ತೋ ಬಟ್ಟನ ಪುಳಿ ಕಕ್ಕಿಸ್ನೆ. ನೀನ್ ಮಾತ್ರ ಎಚ್ಚರಂದ ಇರಕ್ಕ. ಇಲ್ಲದಿದ್ರೆ ಬ್ರಹ್ಮಕಲಶ ಮುಗಿಯಕಾಕನ ಅಪ್ಪ ವಸ್ತ್ರದಾನ, ಗೋದಾನ, ಸುವರ್ಣದಾನದೊಟ್ಟಿಗೆ ಕನ್ಯಾದಾನನೂ ಮಾಡೋಕಾದೆ."

ಅಮ್ಮಣ್ಣಿಗೆ ನಗೆ ಬಾತ್.

"ನೀನ್ಯಾಕೆ ಗಾಬರಿ ಆದು. ಮನೆಲಿ ಇಷ್ಟ್ ಜನ ಇರಿಕಾಕನ ಅವರ್‌ಂದ ಏನ್ ಮಾಡಿಕಾದು? ನೀನಿನ್ನ್ ಏನೇನೋ ರಾಮಾಯಣ ಮಾಡಿ ಬುಡ್ಬಡ ಪುಣ್ಯಾತ್ಗಿತ್ತಿ.

ಆಮೇಲೆ ಬ್ರಾಹ್ಮಣ ವಟು ಅಪಮಾನ ದೋಷ ನಿವಾರಣಾರ್ತ ಇನ್ನೊಂದು ಬ್ರಹ್ಮಕಲಶ ಆಕೂಂತ ಬಟ್ರ್ ಕವಡೆ ಹಾಕಿ ಹೇಳೀಬುಡುವೊ. ಅಪ್ಪನೂ ಮಾಡಿಕೆ ಹೊರ್ಡುದು. ಈಗಳೇ ಎಷ್ಟ್ ಕರ್ಚಾತೊ ಇನ್ನೊಂದು ಬ್ರಹ್ಮಕಲಶಂತೇಳಿರೆ ಮನೆನೇ ಮಾರೋಕಾದು."

ಇಬ್ಬರ್ ಒಟ್ಟಿಗೆ ನಗಾಡ್ದೊ.

ಅಂದ್ ಹಿಂಬೊತ್ತಿನ ಹೊತ್ತು. ಅಮ್ಮಣ್ಣಿ ಅಂಗಳ ಗುಡ್ಸ್‌ತಾ ಇತ್. ಹಸ್ರ್ ಲುಂಗಿನ ಮಾಣಿ ಒಂದು ಚೊಂಬು ಹಿಡ್ಕಂಡ್ ಅವಳ ಹತ್ರ ಬಂದ್ ಹೇಳ್ತ್.

"ಪಂಚಗವ್ಯಕ್ಕೆ ಗೋಮೂತ್ರ ಬೇಕು. ಕಪಿಲೆ ದನದ್ದೇ ಆಕು. ನಿಮ್ಮ ದನಗಳ್ಗೆ ನನ್ನ ಗುರ್ತು ಇಲ್ಲೆ. ನಾನ್ ಸೀದಾ ಹೋಗಿಬುಟ್ಟರೆ ಅವು ಗಾಬರಿ ಆಗಿಬುಡುವೊ. ನೀವು ಹಂಞ ಗೋಮೂತ್ರ ತಕಂಡ್ ಕೊಟ್ಟರೆನೋ?"

"ಕೊಡಕ್. ಆದ್ರೆ ಒಬ್ಬಳ್ ಶೂದ್ರ ಹೆಣ್ಣ್ ಗೋಮೂತ್ರ ತೆಗ್ದ್ ಕೊಟ್ಟರೆ ಮಡಿ ಕೆಡಿಕಿಲ್ಲೆನೋ?"

"ಅದಕ್ಕೆಲ್ಲಾ ದಾರಿ ಉಟ್ಟು. ಚೊಂಬಿಗೆ ಮಂತ್ರದ ನೀರ್ನ ಹನ್ಕಿಸಿರೆ ಸಾಕ್. ಕೆಟ್ಟ ಮಡಿ ಸರಿಯಾದೆ. ನೀವು ಅದರ ಬಗ್ಗೆ ತಲೆ ಕೆಡ್ಸಿಕಂಬದು ಬೇಡ. ಯಾವ ದೋಷಕ್ಕೂ ನಮ್ಮ ಬೋಳಂತಾಯ ಬಟ್ರಲ್ಲಿ ಪರಿಹಾರ ಉಟ್ಟು." ಅವಳ್ ಹಟ್ಟಿಗೆ ಹೋತು. ಹಸ್ರ್ ಲುಂಗಿಯ ಮಾಣಿ ಅವಳ್ನ ಹಿಂಬಾಲಿಸಿತ್. ಅಮ್ಮಣ್ಣಿನ ಕಂಡ್ ಕಪಿಲೆ ಹಸ್ ಎದ್ದ್ ನಿತ್ತತ್. ಮಾಣಿ ಚೊಂಬುನ ಅವ್ಳ ಕೈಗೆ ಕೊಟ್ಟತ್.

"ಶಾಸ್ತ್ರ ಪ್ರಕಾರ ನಾನೇ ಗೋಮೂತ್ರ ಸಂಗ್ರಹಿಸಕಾದ್ ಸರಿ. ಒಮ್ಮೆ ಏನಾತ್‌ತ ಗೊತ್ತೋ? ಗೋಮೂತ್ರ ತಕಂಕೆ ಹಸ್ ಹತ್ರ ಹೋಕಾಕನ ಅದ್ ಒದ್ದದರ್‍ಲ್ಲಿ ಅಷ್ಟ್ ದೂರ ಬಿದ್ದಿದ್ದೆ. ಗುರ್ತ ಇಲ್ಲದವರ್ನ ಕಾಂಬಕಾಕನ ಕೆಲವು ದನಗಳಿಗೆ ಗಾಬ್ರಿನೂ ಆದೆ ಸಿಟ್ಟ್‌ನೂ ಬಂದದೆ. ನೀವೀಗ ದಯಮಾಡಿ ಹಂಞ ಗೋಮೂತ್ರ ಸಂಗ್ರಹಿಸಿ ಕೊಡಿ."

"ಮಡಿ ಕೆಡದಾಂಗೆ ನೀವು ಮಂತ್ರದ ನೀರ್ನ ಹಾಕಕ್. ಆದ್ರೆ ಇನ್ನ್ ಯಾಗಾದ್ರ್ ನಿಮ್ಮ ಬೋಳಂತಾಯ ಬಟ್ರ್ ಅಷ್ಟಮಂಗಲ ಪ್ರಶ್ನೆ ಇಸಿ ಕಾಲ್ದೀಪದ ಜ್ಯೋತಿ ನೋಡಿಕಾಕನ ಅದರ್ಲಿ ನೀವು ಗೋಮೂತ್ರ ಹಿಡಿವ ಬದಲ್ ನಾನ್ ಗೋಮೂತ್ರ ಹಿಡ್ದದ್ ಕಂಡ್‌ಬಂದ್ ಹಳೆ ಬ್ರಹ್ಮಕಲಶ ಅಶುದ್ದಾಗುಟು, ಹೊಸ್ತೊಂದು ಮಾಡೊಕುಂತೇಳಿರೆ ಏನ್ ಮಾಡ್ದು? ಮತ್ತೆ ನೀವ್ಗೆ ದನ ಮೆಟ್ಟಿದ ಕತೆ ಹೇಳ್ದರಲ್ಲಾ? ಹಾಲ್ ಕರೆಕಾಕನ ಕೆಲವು ದನಗ ಮೆಟ್ಟುದುಟ್ಟು. ಆದ್ರೆ ಗೋಮೂತ್ರ ಸಂಗ್ರಹಿಸಿಕಾಕನ

ಮೆಟ್ಟುವ ಚಾನ್ಸೇ ಇಲ್ಲೆ. ಅಲ್ಲ, ನೀವೇನಾದ್ರ್ ಹಸಿಗೆ ಬಸವನ ಕೆಲ್ಸ ಮಾಡಿ
ಹೋತ್ಲೆ ತಾನೆ?"

ಮಾಣಿ ಪೆಚ್ಚು ಪೆಚ್ಚಾಗಿ ನಗಾಡ್ತಾ ಹೇಳ್ತ್,

"ಲಾಯ್ಕಾಗಿ ಮಾತಾಡ್ರೆ ನೀವು. ಎಷ್ಟಾದ್ರೂ ಯಕ್ಷಗಾನದ ಬಾಗವತರಲ್ಲೋ
ನಾನ್ ಹಾಂಗೆ ನಿಮ್ಮ ನೋಡುತ್ತಿರುದಕ್ಕೆ, ಅಷ್ಟಮಂಗಲದ ದಿನ ಮಾತಾಡ್ಸಿದ
ನೀವ್ಗೆ ನನ್ನ ಮೇಲೆ ಸಿಟ್ಟಿರುದು. ಈ ಪ್ರಾಯಲಿ ಅದ್ ಕುಸಿಕೊಡುವ ತಪ್ಪುಗ. ನಿ
ಹೇಳುವಾಂಗಿದ್ದರೆ, ನೀವು ನೋಡುವ ಹಾಂಗೊಳರಿ. ಈ ಪ್ರಾಯಲಿ ಮನಸ
ಬುದ್ದಿಯ ಮಾತ್‌ಗಳ್ನ ಕೇಳ್ದುಲೆ. ನಂಗೆ ಅಷ್ಟಮಂಗಲ, ಬ್ರಹ್ಮಕಲಶಗಳ್ಲಿ ನಿಮಿಗಿಂತಲೂ
ಪೊರ್ಲುನ ಗೂಡೆಗ ಕಾಂಬಕೆ ಸಿಕ್ಕಿವೆ. ಪ್ರಾಯ ಅಲ್ಲಾ? ನೋಡಿ ಹೋದೆ. ಆದ್ರ
ಇಲ್ಲದ ನೆಪ ಹೇಳಿ ಅವರ್ನ ಮಾತಾಡ್ಸೋಕುಂತ ನಂಗೆ ಅನ್ಸುದ್ಲೆ. ನಿಮ್ಮ ಬಾಗವತಿ
ಕೇಳ್ಳ್ಯೊಳೆ. ನಾನು ಬಾಗವತಿಕೆ ಕಲಿಯಕೆ ಹಂಞ ಯತ್ನಿಸಿದೆ. ಆದ್ರೆ ಯಾಕೊ
ಆತ್ಲೆ. ಶೂದ್ರರ ಮನೆನ ಹೆಣ್ಣೊಬ್ಬಳ್ ಮಂತ್ರ ತಿಳ್ದ ಬ್ರಾಹ್ಮಣರ್‌ಂದಾಗದನ್ನ ಸಾದಿಸಿದ
ನೋಡಿ ನಿಮ್ಮ ಬಗ್ಗೆ ಮೆಚ್ಚುಗೆ ಮೂಡ್ತ್. ಅದಕ್ಕೇ ನನ್ನ ಮನ್ಸ್ ನಿಮ್ಮನ್ನ
ಹಿಂಬಾಲ್ಸಿದೆ."

ಅಮ್ಮಣ್ಣಿಗೆ ಅವ್ನ ಮಾತ್‌ಗಳ್ಲಿ ಕೃತಿಮತೆ ಕಂಡತ್ಲೆ. ಆದ್ರೂ ಅವನ ಕೆಣ್ಕೊಕುಂ
ಅನ್ಸಿತ್.

"ನೀವು ನಿಮ್ಮ ಮನ್ಸಿಲಿರುದರ್ನ ನೇರಾಗಿ ಹೇಳ್ದರಿ. ನಿಮ್ಮ ನೇರ ನಡ್ತೆ ನಂ
ಕುಸಿಯಾತ್. ನೀವ್ಗೆ ನಾನ್ ಅಷ್ಟೊಂದು ಇಷ್ಟಾದ್ರೆ ನೀವ್ ಮನ್ಸ್‌ಲೇ ಮಂಡಿ
ಮೆಲ್ಲುದೇಕೆ? ನಾನ್ ಈ ಮನೆಯ ಹಿರಿಯವ್ಳ್. ಮೆಜಾರಿಟಿಗೆ ಬಂದ್ ಒಂದು
ವರ್ಷ ಆತ್. ನೀವ್ಗೆ ಬಹುಷ್ಯ ಇಪ್ಪತ್ತೊಂದು ದಾಟಿದ್ರ್ಂತ ಕಂಡದೆ. ನಾವ್ಯಾ
ಮದುವೆ ಆಕೆ ಆಗದ್. ಜಾತಿ ಬಗ್ಗೆ ನಾನ್ ಯೋಚಿಸುದ್ಲೆ. ನನ್ನ ಯಕ್ಷಗಾನ
ಗುರುಗ ಮಂಜುನಾಥ ಬಾಗವತರ್. ಅವು ಮನುಷ್ಯರೆಲ್ಲ ಒಂದೇ ಜಾತಿಂತೇಳೊವ
ಜನಿವಾರ ಕಿತ್ತ್ ಬೀಸಾಡ್ದ ಮನುಷ್ಯ ಅವು. ಅವ್ಕೆ ಒಂದು ಮಾತ್ ಹೇಳ್ರೆ ಸಾಕ್
ಅವೇ ಮುಂದೆ ನಿಂತ್ ಮದ್ವೆ ಮಾಡ್ಸುವೆ. ಹೇಂಗೂ ಇಷ್ಟ್ ಕರ್ಚಾತ್. ಮಗಳಿಗಾಗಿ
ಇನ್ನೊಂದಿಷ್ಟ್ ಕರ್ಚ್ ಮಾಡಿಕೆ ಅಪ್ಪ ಹಿಂಜರಿಕಿಲೆ."

ಹಸ್ರ್ ಲುಂಗಿಯ ಮಾಣಿ ಪೆಚ್ಚಾಗಿ ನಿಂತತ್.

"ನೀವು ಏನ್ ಹೇಳ್ದ್? ನಾನ್ ನಿಮ್ಮನ ಮದ್ವೆಯಾದೋ? ಉದ್ಯೋ
ಕೊಡುವ ವಿದ್ಯೆ ನಂಗೆ ಯಾಕೋ ತಲೆಗೆ ಹತ್ತಿತ್ಲೆ. ನನ್ನದ್‌ಂತೇಳುವ ಒಂದು

ತುಂಡು ನೆಲ ಇಲ್ಲೆ. ಪೌರೋಹಿತ್ಯಂದ ಬದ್ಕಿದ ಅಪ್ಪ ನಂಗೆ ಅರ್ತ ಗೊತ್ತಿಲ್ಲದ ನಾಲ್ಕ್ ಮಂತ್ರ ಬಾಯ್ಪಾಟ ಮಾಡ್ಸಿಟು. ಅದರ ಹೇಳಿಕೆ ಹೋದ್ರೆ ಮಂತ್ರಕ್ಕಿಂತ ಉಗುಳೇ ಜಾಸ್ತಿ. ಇದರ್ಲಿ ಯಾಗಾದ್ರ್ ನಾಲ್ಕ್ ಕಾಸ್ ಬಂದ್ರೆ ಅದೇ ಹೆಚ್ಚ್. ಆ ಹಣಲಿ ನಾನ್ ಸಂಸಾರ ಸಾಗ್ಸುದುಟ್ರೊ, ಮತ್ತೆ ನನ್ನನ್ ಮದ್ವೆಯಾಗೋವು ಸುಕಲಿ ಬಾಳಿಕುಟ್ರೋ? ಈಗ ಅಷ್ಟಮಂಗಲನೋ, ಬ್ರಹ್ಮಕಲಶನೋ, ಶಾಂತಿ ಹೋಮನೋಂತೇಳಿ ಹೇಂಗೋ ಒಟ್ಟು ದಿನ ಕಳ್ದದೆ. ನೀವೇನೋ ನಂಗೆ ಇಷ್ಟನೆ. ಆದರೆ ನಿಮ್ಮನ್ ನಾನ್ ಮದ್ವೆಯಾದ್ರೆ ನನ್ನನ್ ಯಾರಾದ್ರ್ ಪೂಜೆಗೆ ಕರೆವೊನೋ? ಆಗ ನಂಗೆ ಬವಿಷ್ಯಂತೇಳುವಂತದ್ದೇ ಇರಿಕಿಲ್ಲೆ. ಈಗ ಈ ಸ್ತಿತಿಲಾದ್ರ್ ನಾನ್ ಸುಂದರ ಕನ್ಸ್‌ನ ಕಾಂಬಕಾಗದೋ?"

ಅಮ್ಮಣ್ಣಿ ಮಾತ್ ಮುಂದವರ್ಸಿತ್ತೆ. ಅವ್ಳ್ ಕಪಿಲೆ ಹಸ್‌ನ ಮಾಲೀಸ್ ಮಾಡಿ ಕೆಚ್ಚ್‌ಲ್ ಸವರ್ತ್. ಹಂಞ ಹೊತ್ಲಿ ಕಪಿಲೆ ಬಾಲ ಎತ್ತಿ ಉಚ್ಚೆ ಹೊಯ್ತ್. ಚೊಂಬು ತುಂಬುವಷ್ಟ್ ಮೂತ್ರ ಹಿಡ್ಕಣ್ತ್.

"ನಿಮ್ಮ ಮನ್ಸಿಗೆ ಬೇನೆ ಮಾಡುವ ಉದ್ದೇಶ ನನ್ನದಲ್ಲ. ಗಂಡ್ ಹೆಣ್ಣ್ ಪರಸ್ಪರ ನೋಡುದರ್ನೂ ನಾನ್ ತಪ್ಪುಂತೇಳ್ತುಲೆ. ಅದಕ್ಕೊಂದು ಸಬ್ಯತನ, ಎಲ್ಲೆ ಇರ್ಲಿಂತ ನಾನ್ ಹೇಳ್ದು. ನಂಗೆ ಅಪ್ಪ, ಅವ್ವ, ತಂಗೆ, ತಮ್ಮ ಎಲ್ಲವೂ ಒಳೊ. ಮರ್ಯಾದೆಂದ ಬದ್ಕಿಕೆ ತೋಟ ಉಟ್ಟು. ಆದ್ರೂ ಒಮ್ಮೊಮ್ಮೆ ನನ್ನೊವುಂತೇಳೊವು ಯಾರೂ ಇಲ್ಲೆಂತೇಳುವ ಏಕಾಕಿತನ ಮನ್ಸ್‌ನ ಕಾಡ್ದೆ. ಕನ್ಸ್‌ಗ ನಮ್ಮನ್ ಬದ್ಕಿಸಿದೆ. ಅದಿಲ್ಲದಿದ್ದರೆ ಈ ಬದ್ಕ್ ಕಷ್ಟ ಆಕೂ ಸಾಕ್. ನೀವು ನಿಮ್ಮ ಸಾಮಾರ್ತ್ಯನ ತಪ್ಪಾಗಿ ತಿಳ್ಕೊಂಡಳರಿ. ನಿಮ್ಮ ವೃತ್ತಿಲಿರುವ ಗಳಿಕೆ ಏನ್ ಕಡ್ಮೆನೋ? ಈ ಊರ್‍ನ ಜನ ಬ್ರಹ್ಮಕಲಶ ಅದ್ ಇದ್‌ಂತೇಳಿ ಎಷ್ಟ್ ಬೇಕರೂ ಕೊಟ್ಟವೆ. ಬೋಳಂತಾಯ ಬಟ್ರ ಹಾಂಗೆ ನೀವು ಅಷ್ಟಮಂಗಲ ಪ್ರಶ್ನೆ ಇಸುವಾಂಗಿದ್ದರೆ ನೀವು ಮಾತ್ರ ಅಲ್ಲ ನಿಮ್ಮ ಮರಿಮಕ್ಕಳೂ ಕುದ್ದು ಉಣ್ಣುವಷ್ಟ್ ಸಂಪಾದಿಸಕ್. ನಿಮ್ಮನ್ನ್ ನೀವೇ ಕೀಳಾಗಿ ಕಾಂಬ ಯೋಚನೆ ಬುಟ್ಟು ಸುಂದರ ಕನ್ಸ್‌ಕಾಂಬಕೆ ಅಬ್ಯಾಸಮಾಡಿ."

ಹಸ್ರ್ ಲುಂಗಿಯ ಮಾಣಿ ಅದಕ್ಕೆ ಏನೂ ಹೇಳ್ತ್‌ಲೆ. ಒಮ್ಮೆ ಆಚೆ ಈಚೆ ನೋಡ್ತ್. ಬೆಳ್ಕ್ ಮುಸುಕಾಗಿತ್ತ್. ಹತ್ತಿರಲಿ ಯಾರೂ ಕಣ್ಣಿಗೆ ಬೀತ್ಲೆ. ಅಮ್ಮಣ್ಣಿನ ಕೈಯಿಂದ ಚೊಂಬು ತಕಂಡ್ ಬಲ್ದ ಕೈಲಿ ಹಿಡ್ಕಣ್ತ್. ಅಮ್ಮಣ್ಣಿನ ಎಡಕೈಯಿಂದ ಬಳ್ಸಿ ಎದೆಗೊತ್ತಿಕಣ್ತ್. ಏನಾಗುತುಟ್ಟುಂತ ಅವ್ಳಿಗೆ ಗೊತ್ತಾಕೆ ಮುಂದೆ ಅವನ ತುಟಿಗಳ್ನ ಅವ್ಳ ಕೆನ್ನೆ ಮೇಲೆ ಊರ್ತ್. ಮತ್ತೆ ಅವ್ಳ ತುಟಿಗಳಿಗೆ ಬಿಗಿಯಾಗಿ ಮುತ್ತು

ಕೊಟ್ಟತ್. "ಇನ್ನ್ ಮುಂದೆ ನಂಗೆ ಕನ್ಸ್‌ಗಳ ಕಾಂಬಕೆ ಸಾದ್ಯ ಆದು" ಅಂತ
ಅವ್ವ ಕೆಬಿ ಹತ್ರ ಹೇಳಿ ಗೋಮೂತ್ರ ಸಹಿತ ನಡ್ತ್.

ಸುರೂಗೆ ಅಮ್ಮಣ್ಣಿಗೆ ಏನೂ ಅನ್ನಿಸ್‌ತ್ಲೆ. ನಡ್ದ ಸಂಗತಿನ ಮತ್ತೆ ಮತ್ತೆ
ನೆನ್ಸಿಕಾಕನ ಮೈ ರೋಮಾಂಚನಾತ್. ಏನೋ ಒಂದು ಹೊಸತನದ ಕುಸಿ. ಅದರ
ಅಲೆ ತಲೆಂದ ಪಾದದವರೇಗೆ ಓಡಾಡಿದಂಗಾತ್. ಮಾಣಿ ಮುತ್ತು ಕೊಟ್ಟ ಕೆನ್ನೆ,
ತುಟಿಗಳ್ನ ಬಟ್ಟೆಂದ ಉಜ್ಜಿಕಂಕೆ ಅವ್ಳಿಗೆ ಮನ್ಸಾತ್ಲೆ. ಯಾವುದನ್ನೂ ಬಾಳಕ್ಕಂದ
ಮುಚ್ಚಿಡದವಳಿಗೆ ಮುಸ್ಸಂಜೆನ ಮುತ್ತಿನ ಕತೆ ಮಾತ್ರ ಹೇಳಕುಂತ್ಲೂ ಅನ್ನಿತ್ಲೆ.

———***———

# ೭. ಪ್ರೇತಾತ್ಮಗಳ ಮೊದುವೆ.

ಬ್ರಹ್ಮಕಲಶ ಮುಗ್ದ ಮೇಲೆ ಬೋಳಂತಾಯ ಬಟ್ರ್ ಪ್ರೇತ ಶಾಂತಿ ಹೋಮ ಮಾಡ್ದೊ.

"ಚಿನ್ನಪ್ಪಾ, ಎರಡೂ ಪ್ರೇತಗಳಿಗೆ ಶಾಂತಿ ಮಾಡ್ಯೊಳೆ. ನಿನ್ನ ಅವ್ವ ಇನ್ನ್ ನೆಮ್ಮದಿಂದ ಇದ್ದವೆ. ತುಂಬ ಯೌವ್ವನಲಿ ತೀರಿ ಹೋದ ನಿನ್ನ ಅಕ್ಕಂಗೆ ಈಗ ತಾತ್ಕಾಲಿಕ ಶಾಂತಿ ಆಗುಟು. ನೀನ್ ಇನ್ನ್ ಪ್ರೇತಾತ್ಮಗಳ ಮದುವೆ ಮಾಡ್ಸ್. ಆಮೇಲೆ ಮಾತ್ರ ಅವ್ಳ ಆತ್ಮಕ್ಕೆ ಪೂರ್ತಿ ಶಾಂತಿ ಸಿಕ್ಕಿದೆ."

ಅಪ್ಪ ತಲೆಯಾಡ್ಸಿತ್. ಅಜ್ಜನ ದೂಪೆ ಪಕ್ಕಲಿ ಅಜ್ಜಿಗೊಂದು ದೂಪೆ ತಯಾರಾತ್. ಅಪ್ಪ ಇಬ್ಬರ ದೂಪೆನ ಸಿಮೆಂಟಿಂದ ಕಟ್ಸಿತ್. ಅಜ್ಜನ ದೂಪೆಲಿ ಸೂರ್ಯನ ಚಿತ್ರ ಬುಡ್ಸಿ ಕೆಳಗೆ ದಾಸಪ್ಪಂತ್ಲೂ, ಅಜ್ಜಿನ ದೂಪೆಲಿ ಚಂದ್ರನ ಬುಡ್ಸಿ ಕುಂಞಕ್ಕಂತ್ಲೂ ಬರ್ಸಿತ್. ಇಬ್ಬರಿಗೂ ಹದ್ನಾರ್ ದಿನಗಳ ಕುಲೆ ಕಾರ್ಯಕ್ರಮ ನಡ್ತ್. ಎಲ್ಲಾ ಕಾರ್ಯಗಳೂ ಊರ್‌ಗೌಡ್ರ್ ಮತ್ತು ಪಟೇಲ್ರ್ ಹೇಳ್ದ ಹಾಂಗೆ ಕ್ರಮಪ್ರಕಾರ ನಡ್ತ್.

ಎಲ್ಲ ಮುಗ್ದ ಮೇಲೆ ಪಟೇಲ್ರ್ ಹೇಳ್ದೊ: "ನೀನ್ ಇಷ್ಟೊಂದು ಬದ್ಲಾದಿಯಂತ ನಾನ್ ಗ್ರಹಿಸಿತ್ಲೆ ಚಿನ್ನಪ್ಪಾ. ಹೀಂಗೆ ನೀನ್ ಮನ್ಸಿಟ್ಟ್ ಕಾರ್ಯ ಮಾಡ್ದಮೇಲೆ ಅಜ್ಜ-ಅಜ್ಜಿ ವೈಕುಂಟಲಿ ವಿಷ್ಣು-ಲಕ್ಷ್ಮಿಯರ ಹಾಂಗೆ ಸುಕವಾಗಿದ್ದವೆ."

ಅಪ್ಪಂಗೆ ತಾನ್ ಮಾಡ್ದ ಕೆಲ್ಸ ಸಾರ್ತಕ ಆತ್‌ಂತ ಅನ್ಸಿತ್. ಆ ಕುಸಿ ಅವ್ನ ಮೋರೆಲಿ ಕಾಂಬತಿತ್ತ್. ಅವ್ವನೂ ಈಗ ತುಂಬಾ ಕುಸಿಂದ ಇತ್ತ್. ಮನೆಲಿ ಈಗ ನೆಮ್ಮದಿ ಇತ್ತ್. ಬ್ರಹ್ಮಕಲಶಕ್ಕೆ ಚಿಕ್ಕಪ್ಪನೂ ಸಹಾಯ ಮಾಡ್ದರ್‌ಂದ ಯಾವ ತೊಂದರೆನೂ ಇಲ್ಲದೆ ನಡ್ದಿತ್ತ್. ಕುಲೆ ಮದ್ವೆ ಮಾಡ್ಸಿಕೆ ಅಪ್ಪನ ಹತ್ರ ದುಡ್ಡಿತ್ಲೆ. ಚಿಕ್ಕಪ್ಪನ ಕೇಳಿಕೆ ಮನ್ಸ್ ಬಾತ್ಲೆ. ಅಪ್ಪ ಯೋಚಿಸಿ, ಯೋಚಿಸಿ ಸೀದಾ ಎದ್ದ್‌ಹೋತ್. ಮಾರ್ನೆ ದಿನ ಬಾಕಾಕನ ಅವ್ನ ಕೈಲಿ ಎರ್ಡ್ ಲಕ್ಷ ನಗದ್ ಹಣ ಇತ್ತ್.

"ನಮ್ಮ ಸಂಸಾರಕ್ಕೆ ಒಳ್ಳೆದಾದೆಂತ ಅವಳ್‌ಂದ ಸಾಲಮಾಡಿ ತಂದೊಳೆ. ಜಾಗದ ಉತ್ಪತ್ತಿಂದ ನಿದಾನಾಗಿ ತೀರ್ಸಿದರಾತ್. ಅಮ್ಮಣ್ಣಿಗೆ ಶಾಲೆ ಖರ್ಚಿಲ್ಲೆ. ಮುಂದಿನ ವರ್ಷ ಬಾಳಕ್ಕನೂ ಓದು ನಿಲ್ಲಿಸಿಬುಡುದರ್ಲಿಟ್ಟು, ಸದ್ಯಕ್ಕೆ ಬೇರೆ ದೊಡ್ಡ ಕರ್ಚೇನೂ ಇಲ್ಲೆ. ಅಮ್ಮಣ್ಣಿಗೆ ಸಂಬಂದ ಬಾಕನ ಯೋಚಿಸಿದರಾತ್. ಕಷ್ಟ ಕಾಲಲಿ ಶಿವಪ್ಪ ಸಹಾಯ ಮಾಡ್ದೆ. ನಿನ್ನ ತಮ್ಮ ಕೃಷ್ಣಪ್ಪನೂ ಉಟ್ಟು." ಆಗ ಅವ್ವ ಹೇಳ್ತ್ :

“ಕೆಲವು ದಿನಗಳ್‌ಂದ ನನ್ನ ತಲೆಲಿ ಒಂದು ಯೋಚನೆ ಬರ್‍ತಾ ಉಟ್ಟು. ತುಂಬಾ ಹಿಂದೆ ಅಂತದೊಂದು ಕ್ರಮ ನಮ್ಮಲ್ಲೂ ಇತ್ತ್‌ಗಡ. ಈಗ ಮೇಲೆ ಗಟ್ಟಲಿ ಮಾತ್ರ ಉಳ್ಕೊಂಡುಟ್ಟು. ಅಕ್ಕನ ಮಗಳ್ನ ತಮ್ಮ ಮದುವೆಯಾದು. ಇಂತ ಸಂಪ್ರದಾಯ ಇತ್ತ್‌ಂತಾದರೆ ಅಮ್ಮಣ್ಣಿನ ಯಾಕೆ ನಮ್ಮ ಕೃಷ್ಣಪ್ಪಂಗೆ ಕೊಡಿಕಾಗದ್. ನಾನಿನ್ನ್ ಅವ್ನ ಕೆಬಿಗೆ ಈ ವಿಷಯ ಹಾಕಿತೊಲೆ, ಮತ್ತೆ ಅವನ ಮನಸ್ಸೇನ್‌ಂತ ತಿಳ್ಕಂತೂಲೆ. ಯಾವುದಕ್ಕೂ ಒಂದು ಮಾತ್ ನಿಮ್ಮಲ್ಲಿ ಕೇಳಿಯೇ ಮುಂದುವರಿಯನೋ ಅಂತಿದ್ದೆ.”

“ಅಕ್ಕನ ಮಗಳ್ ಸ್ವಂತ ಮಗಳ ಹಾಂಗೆ. ಅದ್ ಕೆಟ್ಟ ಸಂಪ್ರದಾಯ. ಅಕ್ಕನ ಮಗಳ್ನ ಬುಡು ಸೋದರ ಮಾವನ ಮಗಳ್ನ ಮದುವೆಯಾದು ಸರಿಯಲ್ಲ. ಅವ್ವನ ಕಡೆಂದ ಒಂಬತ್ತ್ ತಲೆಮಾರ್ ಅಪ್ಪನ ಕಡೆಂದ ಏಳ್ ತಲೆಮಾರ್ ಏನೋ ಮದುವೆಯಾದು ಸಂತಾನದ ಏಳಿಗೆ ದೃಷ್ಟಿಂದ ಸರಿಯಲ್ಲಗಡ. ಅದೆಲ್ಲ ಕುಟುಂಬದ ಆಸ್ತಿ ಅನ್ಯರ ಪಾಲಾಗದಿರ್ಲಿಂತ ಮಾಡಿಕಂಡ ತಪ್ಪು ಸಂಪ್ರದಾಯ. ಅಪ್ಪ ಯಾ ಅವ್ವನ ರಕ್ತ ಸಂಬಂದಲಿ ಹುಟ್ಟುವ ಮಕ್ಕ ಹೆಚ್ಚಾಗಿ ರೋಗಿಷ್ಟರಾಗಿದ್ದವೆ. ಹೆಚ್ಚಿನವು ದಡ್ಡರಾದ್ದೂ ಉಟ್ಟು. ಮೊನ್ನೆ ವಿಪರೀತ ಬೆನ್ನ್ ಬೇನೆ ಆದದ್ದಕ್ಕೆ ಡಾಕ್ಟ್ರ ಹತ್ರ ಹೋಗಿದ್ದೆ. ಅವು ಹೇಳ್ದ್ ಇದ್. ಬುದ್ಧಿವಂತ ಮಕ್ಕ ಹುಟ್ಟೋಕುಂತಾದರೆ ಸಂಬಂದದ ಹೊರಗೆ ಮೊದುವೆ ಆಕುಗಡ. ಬೇರೆ ಜಾತಿಂದ ಮದುವೆ ಆದರೆ ಇನ್ನೂ ಒಳ್ಳೆದ್. ಅಮ್ಮಣ್ಣಿಗೆ ಈಗ ಹತ್ತೊಂಬತ್ತು. ಈಗಿನ ಗೂಡೆಗ ಮೂವತ್ತಕ್ಕೆ ಮುಂದೆ ಮೊದುವೆಯಾದುಲೆ. ಮದ್ವೆಯಾದರೆ ಮತ್ತೇನುಟ್ಟು ಮಣ್ಣ್? ವರ್ಷಕ್ಕೊಂದು ಹೆರುದಷ್ಟೆ ಆ ಮಕ್ಕಳ ಸಾಕಿ, ಬೆಳ್ಸುದರ್‍ಲ್ಲೆ ಜೀವನ ಕಳ್ದ್ ಹೋದೆ. ನನ್ನ-ನಿನ್ನ ಹಾಂಗೆ ಬರೇ ತಿಂದುಂಡು ಮಕ್ಕಳ್ನ ಮಾಡಿರೆ ಈಗ ಯಾರೂ ಗೌರವ ಕೊಡ್ದುಲೆ. ಅಪ್ಪಂಗೆ ಒಳ್ಳೆ ಹೆಸ್ರಿತ್ತ್. ಯಾಕೆ ಹೇಳ್? ಅಂವ ಕಲಾವಿದನಾಗಿತ್ತ್. ಈಗ ಅಮ್ಮಣ್ಣಿಗೆ ಅಂವಗಿಂತ್ಲೂ ದೊಡ್ಡ ಹೆಸ್ರ್ ಬಂದುಟು. ಅವ್ಳ್ ಅದೇ ದಾರ್‍ಲಿ ಸದ್ಯಕ್ಕೆ ಮುಂದುವರಿಲಿ. ಈಗಳೇ ಮದ್ವೆ ಮಾಡಿಬುಟ್ಟರೆ ಅವ್ಳ್ ಕಲ್ತದೆಲ್ಲ ನೀರಿಗೆ ಹೋಮ ಮಾಡಿದಾಂಗಾದೆ.”

ಅಪ್ಪನ ಮಾತ್ನ ಕೇಳ್ಸಿಕಂಡ ಅಮ್ಮಣ್ಣಿ ಸಮಾದಾನದ ಉಸುರ್ ಬುಟ್ಟತ್. ಅವ್ಳಿಗೆ ಪೋಲೀಸ್ ಮಾವನ ಗಂಡಂತ ಒಪ್ಪಿಕಂಬಕೆ ಸತಾರಾಮ್ ಅವ್ಳ ಮನಸ್ಸ್ ತಯಾರಿತ್ಲೆ. ಬಿ.ಎ. ಮಾಡೋಕು ಮತ್ತು ದೊಡ್ಡ ಬಾಗವತಳಾಕುಂತಲ್ಲದೆ ಅವ್ಳ ತಲೆಲಿ ಮದುವೆಯ ಆಲೋಚನೆ ಸುಳ್ದೇ ಇತ್ಲೆ. ಈಗ ಪ್ರಸ್ತಾಪ ಬಾಕನ ಮೊನ್ನೆ ಹಿಂಬೊತ್ತಿನ ಗಟನೆ ನೆನ್ಪಾಗಿ ಮೈ ಪುಳಕ ಆತ್.

ಅಪ್ಪನ ಅಕ್ಕ ಗೌರಮ್ಮಂಗೆ ಸಂಬಂದ ಹುಡ್ಕಿಕೆ ಹೋಗಿದ್ದ ತ್ಯಾಂಪಣ್ಣ ಗಂಡಾಗಿ

ಬಂದಿತ್ತ್. ಕಪಿಲೇಶ್ವರ ದೇವಸ್ತಾನಂದ ಎರ್ಡ್ ಮೈಲ್ ಕೆಳಗಿನ ಕಾನದ ಮನೆನ ಸಂಬಂದನ ಮಾತಾಡ್ಸಿಕಂಡ್ ಬಂದಿತ್ತ್. ಕಾನದ ಮನೆವು ದೂರಲಿ ತ್ಯಾಂಪಣ್ಣಂಗೆ ನೆಂಟ್ರ್‌ಗಡ. ಕಾನನ ಮನೆನ ಹೂವಯ್ಯನ ಅಣ್ಣ ಹುಕ್ರಪ್ಪ ತಪಸ್ವಿನಿಲಿ ಬೊಳ್ಳ ಬಂದಿರಿಕಾಕನ ಪಿಂಡಿ ಬುಡಿಕೆ ಹೋದಂವ ಪಿಂಡಿ ಮಗ್ಚಿ ನೀರ್ ಪಾಲಾಗಿತ್ತ್ ಗಡ. ಅವಂಗೆ ಮೊದುವೆಯಾಗಿತ್ಲೆ. ಪ್ರಾಯ ಲೆಕ್ಕ ಹಾಕಿಕಾಕನ ಗೌರಮ್ಮಗಿಂತ ಆರ್ ವರ್ಷಕ್ಕೆ ದೊಡ್ಡಂವಾದೆ. ಒಂದೇ ಬಳಿ ಅಲ್ಲಂತಾದ ಮೇಲೆ ಬೇರೆ ಯಾವ ಸಮಸ್ಯೆನೂ ಇತ್ಲೆ. ಗಂಡಿನ ಮನೆವುಕೆ ಹೆಣ್ ಇಷ್ಟ ಆಗುಟು. ಮದುವೆ ನಿಶ್ಚಿತಾರ್ತಕ್ಕೆ ಮುಂದಿನ ದಿನವೇ ಬಾದುಂತ ನಿಶ್ವಯ ಮಾಡಿ ತ್ಯಾಂಪಣ್ಣ ಬಂದಿತ್ತ್.

ತ್ಯಾಂಪಣ್ಣ ಹೇಳ್ದ ಪ್ರಕಾರ ಮರುದಿನ ಗಂಡಿನ ಕಡೆವು ಹೊತ್ತಿಗೆ ಸರಿಯಾಗಿ ಬಂದೊ. ಮನೆ ಯಜಮಾನ ಹೂವಯ್ಯನ ಮೋರೆಲಿ ದುಡ್ಡಿನ ಗತ್ತ್ ಎದ್ದ್‌ಕಾಣ್ತಿತ್ತ್. ಹೂವಯ್ಯ ಎತ್ತರದ ಆಳ್. ಸಿಲ್ಕ್ ಪಂಚೆ ಉಟ್ಟ್, ಜುಬ್ಬಾ ಹಾಕಿ, ಜರತಾರಿ ಶಾಲ್ನ ಎಡ ಬುಜಂದ ಇಳಿಬುಟ್ಟಿದ್ದೊ. ಅವರ ಎಂಟ್ ಬೆರ್ಳ್‌ಗಲ್ಲಿ ಉಂಗುರ ಇದ್ದದರ್ನ ಅಮ್ಮಣ್ಣಿ ಗಮನಿಸಿತ್ತ್. ಅವ್ರ ಯಜಮಾನ್ತಿ ಯಶೋದೆಂತೇಳೊವು ಕಾಂಜೀವರಂ ಸಿಲ್ಕ್ ಉಟ್ಟ್ ಇಪ್ಪತ್ತೆಂಟ್ ಕಾಸಿನ ಮಿಸ್ರಿ ಮಾಲೆ ಹಾಕಿಕೊಂಡಿದ್ದೊ. ಅವರ ಬೆಂಡೋಲೆ ವಜ್ರದ್ದೇ ಇರೋಕುಂತ ಅಮ್ಮಣ್ಣಿಗೆ ಗುಮಾನಿ ಆತ್. ಅವು ನಿಲ್ಲುವ ರೀತಿ, ಮಾತಿನ ಗತ್ತ್, ಓಡಾಟ ನೋಡಿಕಾಕನ ಅವ್ವ ಅವರೆದ್‌ರ್ ಏನೇನೂ ಅಲ್ಲಂತ ಅಮ್ಮಣ್ಣಿಗೆ ಅನ್ನಿಸಿತ್ತ್. ಅವ್ವನತ್ರ ಒಳ್ಳ ಸೀರೆ ಇತ್ಲೆಂತಲ್ಲ. ಆದರೆ ಉಡಿಕೆ ಗೊತ್ತಿರೋಕಲ್ಲ. ಮೊಣಕಾಲ್ ಕಾಣುವಂಗೆ ಅವ್ಳ್ ಸೀರೆ ಉಡುತಿತ್ತ್. ಸರಿಯಾಗಿ ನೆರಿಗೆ ಬುಡಿಕೆ ಅವ್ಳಿಗೆ ಗೊತ್ತೇ ಆಗಿತ್ಲೆ. ಅವ್ಳ್ ಹೇಂಗೆ ಸೀರೆ ಉಟ್ಟರೂ ಅಕ್ಕಿಮುಡಿಗೆ ಸೀರೆ ಸಿಕ್ಕಿಸಿದಂಗೆ ಕಾಂಬತಿತ್ತ್.

ಬಂದೊವು ಚಪ್ಪರದಡಿ ಚಾಪೆಲಿ ಮನೆಯವುಕೆ ಮೋರೆ ಮಾಡಿ ಕುದ್ದೊ. ಪಟೇಲ್ರ್ ಮತ್ತು ಊರ್‌ಗೌಡ್ರ್ ಎಡಬಲಗಲ್ಲಿ ಗತ್ತ್‌ಂದ ಕುದ್ದೊ. ಕುಡಿಯಕೆ ಎಲ್ಲಾ ಕುಡ್ದಾದ ಮೇಲೆ ಹೂವಯ್ಯನವು ಹೇಳ್ದೊ,

"ನಿಮ್ಮ ಕಡೆ ಹಿರಿಯವುಂತ ಇರ್ದು ತ್ಯಾಂಪಣ್ಣನವು. ಅವ್ ನಾವ್‌ಗೂ ಬೇಕಾದವೆ. ಉಬಯ ಕಡೆಯವರಾಗಿ ತ್ಯಾಂಪಣ್ಣನವು ಈ ಕುಲೆ ಮದ್ವೆನ ಕುಲಾಚಾರ ಪ್ರಕಾರ ನಡ್ಸಿಕೊಡೊಕು. ಪಟೇಲ್ರ್ ಮತ್ತು ಊರ್‌ಗೌಡ್ರ್ ಮುಂದಾಗಿ ನಿಂತ್ ಎಲ್ಲಾ ಕಾರ್ಯಕ್ರಮ ನಡೆಕಾದ ರೀತಿನ ತಿಳ್ಸಿಕೊಡೊಕು. ನೀವು ದಿನ ನಿಶ್ಚಯ ಮಾಡಿರೆ ನಮ್ಮ ಕಡೆಯ ತಯಾರಿ ನಾವ್ ಮಾಡಿಕಂಡವೆ."

ಸೇರ್ದ ಸರ್ವರ ಸಮ್ಮುಕಲಿ ನಿಶ್ಚಿತಾರ್ತ ಕಾರ್ಯಕ್ರಮ ನಡ್ತ್. ಸುರೂಗೆ ಹರಿವಾಣಲಿ ಐದ್ ಕವಳಿಗೆ ಎಲೆ ಮತ್ತು ಅಡಿಕೆ ಇಸಿ ಹೆಣ್ಣ್ ಮಾತಾಡ್ದೊ. ಮತ್ತೆ ಅಷ್ಟೆ ಎಲೆ ಅಡಿಕೆ ಇಸಿ ಬಳಿ ನಿರ್ಣಯ ಮಾಡ್ದೊ. ಆಮೇಲೆ ಹೆಣ್ಣ್‌ನ ಮನೆ ತುಂಬಿಸಿಕಂಕೆ ತಮ್ಮ ಸಮ್ಮತಿ ಉಟ್ಟುಂತ ಗಂಡಿನ ಕಡೆವು ಹೇಳ್ದೊ. ಮುಂದಿನ ಹುಣ್ಣಿಮೆ ದಿನ ಮದುವೆಂತ ಊರ್‌ಗೌಡ್ರ್ ತೀರ್ಮಾನಿಸಿದಕ್ಕೆ ಎರ್ಡೂ ಕಡೆವು ಒಪ್ಪಿಗೆ ಕೊಟ್ಟೊ. ಪ್ರತಿ ಸರ್ತಿನೂ ಎಲೆ ಅಡಿಕೆ ಇಸಿ ಕೈ ಬದಲಾಯ್ಸಿಕಂಡೊ. ದೇವ್ರಿಗೆ, ಗುರುಕಾರ್ನೂರಿಗೆ, ಪಟೇಲ್ರ್‌ಗೆ, ಊರ್‌ಗೌಡ್ರಿಗೆ ತಾಂಬೂಲ ಮರ್ಯಾದೆ ಕೊಟ್ಟೊ. ಆ ಮೇಲೆ ಚಪ್ಪರದಡಿಲೇ ಊಟ ಮುಗ್ಸಿ ವರನ ಕಡೆವು ಅಲ್ಲಿಂದ್ಲೇ ವಾಪಾಸಾದೋ. ಶಾಸ್ತ್ರ ಪ್ರಕಾರ ಮದುವೆ ಆಗುವವರೇಗೆ ಹೈದನ ಕಡೆವು ಗೂಡೆನ ಮನೆಯೊಳಗೆ ಬರುವಂತಿಲ್ಲೆ. ಹಾಂಗಾಗಿ ಅವು ಯಾರೂ ಮನೆ ಒಳಗೆ ಬಾತ್ಲೆ.

ಕುಲೆ ಮದ್ವೆಗೆ ಅಜ್ಜನ ಬೊಜ್ಜಕ್ಕೆ ಸೇರ್ದ ಜನಕಿಂತ್ಲೂ ಹೆಚ್ಚಿಗೆ ಜನ ಬಂದಿದ್ದೊ. ಆಸುಪಾಸಿಲಿ ಎಲ್ಲೂ ಕುಲೆ ಮದ್ವೆ ನಡ್ದದ್ ಯಾರಿಗೂ ಗೊತ್ತಿತ್ಲೆ. ತ್ಯಾಂಪಣ್ಣನೂ ಕಂಡದಿಲ್ಲೆ. ಅಪ್ರೂಪದ ಕಾರ್ಯಕ್ರಮಂತ ಸುದ್ದಿ ಕೇಳಿ ಬಂದೊವೇ ತುಂಬಾ ಜನ ಇದ್ದೊ. ಸೇರ್ದ ಜನ್ರ ಕಂಡ್ ಅಪ್ಪ ಗಾಬ್ರಿ ಆತ್. ಮುನ್ನೂರು ಜನ್ರ ಅಂದಾಜಿಗೆ ಅಡುಗೆ ತಯಾರಾಗಿತ್ತ್. ನೋಡಿರೆ ಜನಗ ಸಾವಿರ ಮೀರುವಾಂಗೆ ಇತ್ತ್. ಹೂವಯ್ಯನವರ ಜೀಪಿಲಿ ಚಿಕ್ಕಪ್ಪ ಮತ್ತು ಪೋಲೀಸ್ ಮಾವನ ಪೇಟೆಗೆ ಕಳ್ಸಿ ಅಕ್ಕಿ, ಬೇಳೆ ಬೇಕಾದ ಸಾಮಾನೆಲ್ಲ ತರ್ಸಿದೊ. ಕಪಿಲೇಶ್ವರ ದೇವಸ್ತಾನಂದ ಅನ್ನದ ಕೊಪ್ಪರಿಗೆ, ಪಾಯ್ಸದ ಹಂಡೆ, ಕಡಾಯ ಎಲ್ಲ ಬಾತ್. ಅಡುಗೆನೂ ತಯಾರಾತ್.

"ಇಂದ್ ನಾವ್ಗೆ ಊಟ ಉಳ್ದರೆ ಪುಣ್ಯ" ಬಾಳಕ್ಕ ಅಮ್ಮಣ್ಣಿನ ಕೆಬಿ ಹತ್ರ ಪಿಸುಗುಟ್ಟಿತ್.

ವರನ ಕಡೆವು ಬಸ್ಸ್ ಮಾಡಿಕಂಡ್ ಬಂದಿದ್ದೊ. ತಪಸ್ವಿನಿನ ಆಚೆ ದಡಂದ ಅವರ್‍ನ ನಾಗಸ್ವರ ವಾಲಗದ ಮರ್ಯಾದೆಲಿ ಕರ್ಕಂಡ್ ಬಂದೊ. ನಾಗಸ್ವರದ ಜೊತೆಲಿ ಶ್ರುತಿವಾದ್ಯನೂ ಇತ್ತ್. ಶ್ರುತಿ ವಾದ್ಯನ ಉರ್‍ಗುವಂಗೆ ಪುರ್‍ಸತ್ತೆ ಇತ್ಲೆ. ಅಂವ ಹನುಮಂತನ ಹಾಂಗೆ ದವಡೆ ಊದಿಸಿಕಂಡ್ ವಾದ್ಯ ಊದುತಿತ್ತ್. ಅವನ ಕುತ್ತಿಗೆನ ನರಗ ಉಬ್ಬಿ ಬಾತಿತ್ತ್. ಉಸ್ರಾಟಕ್ಕೆ ತೊಂದರೆ ಆಗದಾಂಗೆ ಪೊರ್ರೊತ್ತಿಲ್ಲದೆ ಉರ್‍ಗಿಕೆ ಹೇಂಗೆ ಕಲ್ತತೊ? ಅದಕ್ಕೆ ದಿನ ಎಷ್ಟ್ ಹಿಡ್ತೊ? ಆದ್ರೆ ಯಕ್ಷಗಾನ ಬಾಗವತಿಕೆಗೆ

ಶ್ರುತಿ ಹಿಡಿದು ತುಂಬಾ ಸುಲಬ. ಕೈಗೆ ಮಾತ್ರ ಕೆಲ್ಸ. ಯಾವುದೇ ಕೌಶಲ ಬೇಕಾಗಿಲ್ಲೆ. ಈ ವಾದ್ಯದವರ ಕೆಲಸ ಕಷ್ಟದ್ದ್. ಆದರೆ ಅದ್ ಯಾರ ಗಮನಕ್ಕೂ ಬಾದುಲೆ.

ಅಮ್ಮಣ್ಣಿ ಯೋಚನೆ ಮಾಡ್ತಾ ನಿಂತಲ್ಲಿಗೆ ಬಾಳಕ್ಕ ಬಂದ್ ಪಿಸುಗುಟ್ಟಿತ್.

"ಹಂಞ ನಗುಮೋರೆಂದ ಚುರ್ಕಾಗಿ ಓಡಾಡ್. ಗಂಡಿನ ಕಡೆಲಿ ಕಾಲೇಜಿನ ಹೈದಂಗ ಒಳಗಡ. ಓದು ಮುಗ್ಸಿ ಒಳ್ಳ ಕೆಲ್ಸಲಿರವು ಸಹ ಹೆಣ್ಣ್ ಹುಡ್ಕಿಕೆಂತೇಳಿಯೇ ಬಂದೊಳ ಗಡ. ಸುಮ್ಮನೆ ಬೋಳರ ಹಾಂಗೆ ಏನೇನೋ ಯೋಚಿಸಿಕಂಡ್ ನಿಲ್ಲ್‌ಬಡ. ನಿನ್ನ ಅದೃಷ್ಟ ಒಳ್ಳದಿದ್ರೆ ಯಾರಾದ್ರ್ ಕೃಪಾಕಟಾಕ್ಷ ಬೀರುವೊ."

"ಬಾಳಕ್ಕಾ ನೀನ್ ರಂಬೆ ಹಾಂಗೊಳ. ಹೆಣ್ಣ್ ಕೇಳವು ಅಕ್ಕ ಬೇಡ, ತಂಗೆ ಆದುಂತೇಳ್ವ ಚಾನ್ಸ್ ಉಟ್ಟು." ಬಾಳಕ್ಕ ಅಮ್ಮಣ್ಣಿನ ಬೆನ್ನಿಗೊಂದು ಗುದ್ದಿ ಕಿಲಕಿಲಂತ ನಗಾಡ್ತಾ ಓಡ್ತ್.

ನಿನ್ನೆ ರಾತ್ರಿ ಹಾಲೆಮರಂದ ಮದುಮಕ್ಕಳ ಆಕೃತಿನ ಮಾಡಿದ್ದೊ. ಗಂಡ್ ಆಕೃತಿನ ಕೆಳಗೆ ಹುಕ್ರಪ್ಪಂತ್ಲೂ, ಹೆಣ್ಣ್ ಆಕೃತಿನ ಕೆಳಗೆ ಗೌರಮ್ಮಂತ ಕಷ್ಟಪಟ್ಟ್ ಕೆತ್ತಿದ್ದೊ. ಮದುಮಕ್ಕಳಿಗಾಗಿ ಚಪ್ಪರದಡಿಲಿ ಎರ್ಡ್ ಮಣೆಗಳ್ನ ಇಸಿದ್ದೊ. ಗಂಡಿನ ಆಕೃತಿನ ಹಿಡ್ಕಂಡ್ ಬಲಬಾಗದ ಮಣೆಲಿ ತ್ಯಾಂಪಣ್ಣ ಕುದ್ದತ್. ಹೆಣ್ಣಿನ ಆಕೃತಿನ ಹಿಡ್ಕಂಡ್ ಎಡಬಾಗದ ಮಣೆಲಿ ಅವ್ವ ಕುದ್ದತ್. ಅದೇ ಹೊತ್ತಿಗೆ ಗರ್ನಾಲ್ ರಾಮಣ್ಣ ಹೊರ್ಕಡೆ ಗರ್ನಾಲ್ ಹೊಡ್ಸಿತ್. ವಾಲಗದವು ನಾಗಸ್ವರ ಉರ್ಗಿದೊ. ಹಿರಯವು ತ್ಯಾಂಪಣ್ಣ ಮತ್ತು ಅವ್ವನ ಕೈ ಹಿಡ್ದ್ ಎದ್ರಿಸಿ ಮನೆಸೂರಿನ ಅಡಿಗೆ ಕರ್ಕಂಡ್ ಬಂದ್ ನಿಲ್ಸಿದೊ ಈಗ ದಾರಾಮೂರ್ತಂತ ಊರ್‌ಗೌಡ್ರ್ ಕರ್ದ್ ಹೇಳ್ದೊ. ಮಾಡಿನ ಅಡಿಲಿ ಮನೆಗೆ ಮೋರೆ ಮಾಡಿ ತ್ಯಾಂಪಣ್ಣ ಹುಡ್ಗನ ಆಕೃತಿನ ಹಿಡ್ದ್ ನಿಂತತ್. ಮನೆಗೆ ಬೆನ್ನ್ ಹಾಕಿ ಗೌರಮ್ಮನ ಹಿಡ್ಕಂಡಿದ್ದ ಅವ್ವ ನಿಂತತ್. ತ್ಯಾಂಪಣ್ಣನ ಹಿಂದೆ ಗಂಡಿನ ಕಡೆಯ ಹೆಂಗ್ಸರ್ ಅವ್ವನ ಹಿಂದೆ ಹೆಣ್ಣಿನ ಕಡೆಯ ಹೆಂಗ್ಸರ್ ಕಳಶ ಕನ್ನಡಿ ಹಿಡ್ದ್ ನಿಂತೋ. ಮೊದೋಳಿಗೆನ ಕುರುಂಟು ಆಗಿ ಅಮ್ಮಣ್ಣಿನ ಒತ್ತಾಯಂದ ನಿಲ್ಸಿದೊ. ಮದುಮಂಞನ ಅಡೂಳಿಯಾಗಿ ಇಂಜಿನಿಯರ್ ಓದ್‌ತಿದ್ದ ಹೈದ ಒಬ್ಬ ನಿಂತತ್. ನೋಡಿಕೆ ಲಕ್ಷಣಾಗಿತ್ತ್. ಅಷ್ಟಮಂಗಲದ ಹಸ್ರ್ ಲುಂಗಿನ ಮಾಣಿಯಷ್ಟ್ ಅಲ್ಲದಿದ್ದರೂ ಅಂವ ಅಮ್ಮಣ್ಣಿನ ಕದ್ದ್‌ಮುಚ್ಚಿ ನೋಡ್ತಿತ್ತ್.

ಅಮ್ಮಣ್ಣಿ ಕಪಿಲಳ್ಳಿಯ ವೆಂಕಟಪ್ಪ ಗೌಡರ ಬಗ್ಗೆ ದಿನಾ ಕೇಳ್‌ತಿತ್ತ್. ಕುಲದೇವ್ರು ತಿರುಪತಿ ತಿಮ್ಮಪ್ಪನ ಹೆಸ್ರ್‌ಲಿ ಅವು ತುಂಬಾ ಕಾಲೇಜ್‌ಗಳ್ನ ಆರಂಬಿಸಿದ್ದೊ. ಅವು ಎಂಜಿನಿಯರಿಂಗ್ ಆರಂಬಸಿದ್ದೇ ಸರಿ ಕಪಿಲಳ್ಳಿಯ ಚಿತ್ರನೇ ಬದಲಾಗಿ ಹೋತ್.

ಹೆಸ್ರೇ ಇಲ್ಲದ ಹಳ್ಳಿಯ ಹೆಸ್ರ್ ರಾಷ್ಟ್ರದ ರಾಜದಾನಿಗೂ ಕೇಳ್ಸಿತ್. ಈಗ ಕಪಿಲಳ್ಳಿಲಿ ಮನೆಗೊಬ್ಬ ಇಂಜಿನಿಯರ್ ತಪ್ಪಿರೆ ಒಬ್ಬ ಬಿ.ಎ. ಆದ ಹೈದನೋ ಗೂಡೆನೋ ಇರುವಂತಾತ್. ಜಾತ್ರೆ, ಬೂತಕೋಲ, ಮದ್ವೆ, ಬೊಜ್ಜ ಅಂತ ತಿರ್‌ಗಿಕಂಡೋ, ಕಾಯಿಕುಟ್ಟಿಕಂಡ್, ಬಟ್ಟಿ ಇಳ್ಸಿಕಂಡ್, ಕೋಳಿಕಟ್ಟಂತ ತಿರ್‍ಗಾಡಿಕಂಡ್ ಕಾಲ ಕಳೆವ ಸಂಗ್ತಿ ಈಗಿತ್ಲೆ. ಇನ್ನ್ ಗೌಡ್ರ ಕಾಲೇಜ್‌ಗಂಳ್ದಾಗಿ ಊರ್‍ಲಿ ಸುದ್ದಿ ಪತ್ರಿಕೆನೂ ಸುರಾಗಿ ಪ್ರಚಾರಕ್ಕೆ ಬಾತ್. ಅದರ್‍ಲಿ ಪೋಟೋ ಹಾಕ್ಸಿಕಂಬದು ದೊಡ್ಡಸ್ತಿಕೆಂತಾತ್.

ಅಮ್ಮಣ್ಣಿಗೆ ಇಂಜಿನಿಯರಿಂಗ್ ಮಾಡೊಕೂಂತ ಇತ್ತ್. ಆದ್ರೆ ಜಪ್ಪಯ್ಯಂತೇಳಿರೂ ವಿಜ್ಞಾನ ಮತ್ತು ಲೆಕ್ಕ ಅವ್ಳ ತಲೆಗೆ ಹುಗಿಕೆ ಒಪ್ಪಿತ್ತೇಲೆ. ಪಿ.ಯು.ಸಿ. ಸುರುನ ವರ್ಷ ಅವ್ಳಿಗೆ ಪಾಟ ಮಾಡ್ದ ಮಾಸ್ಟ್ರ್‌ಗಳೇ ಪ್ರಶ್ನಪತ್ರಿಕೆ ತಯಾರಿಸಿ ಪರೀಕ್ಷೆ ನಡ್ಸಿದ್ದೊ. ಪೇಪರ್ರೂ ಅವೇ ತಿದ್ದಿದ್ದೊ. ಹಾಂಗಾಗಿ ಏನೋ ಅವಳ್ನ ಮುಂದೆಗೆ ತಳ್ಳಿದೊ. ಆದ್ರೆ ಎರಡ್ನೆ ವರ್ಷ ಫಬ್ಲಿಕ್ ಪರೀಕ್ಷೆ. ಕನ್ನಡ ಮತ್ತು ಇಂಗ್ಲಿಷ್ ಬುಟ್ಟ್ ಉಳ್ದರ್‍ಲಿ ಎರಡಂಕೆಗೆ ದಾಟಿಕೆ ಅವ್ಳಿಗೆ ಆತೇಲೆ. ಆದ್ರೆ ಅವ್ಳ್ ದಡ್ಡಿಂತ ಹೇಳುವಾಂಗಿಲ್ಲೆ. ಅವ್ಳೆ ಪಾಟನೂ ಸರಿಯಾಗಿ ಮಾಡ್ತ್‌ಲೆ. ಅವ್ಳಿಗೆ ಹೊಂದಿಕಂಕ್ಕೂ ಆತ್ಲೆ. ಅವಳ್ ಸಯನ್ಸಿಂದ ಆರ್ಟ್ಸ್‌ಗೆ ಬದಲಾಯ್ಸಿಕಣ್ತ್. ಅಪ್ಪಂಗೆ ಸುದ್ದಿ ತಿಳ್ಸದೆ ಪ್ರೈವೇಟಾಗಿ ಪರೀಕ್ಷೆ ಕಟ್ಟಿತ್. ಬಿ.ಇ. ಅಲ್ಲದಿದ್ರೂ ಬಿ.ಎ. ಆದ್ರೂ ಆಕೂಂತ ಸಂಕಲ್ಪ ಮಾಡಿಕಂಡತ್.

ಕಪಿಲಳ್ಳಿಯ ವೆಂಕಟಪ್ಪ ಗೌಡರ ಎಂಜಿನಿಯರಿಂಗ್ ಕಾಲೇಜಿಲಿ ಓದಿದವರ್‍ಲಿ ಕೆಲವುಕೆ ಅಮೆರಿಕಲಿ ಕೆಲ್ಸ ಸಿಕ್ಕಿಬುಟ್ಟಿತ್. ಅವು ತಿಂಗಳಿಗೆ ಲಕ್ಷಗಟ್ಲೆ ಸಂಪಾದಿಸ್‌ತಿದ್ದೊ. ಈ ಸುದ್ದಿ ಕಪಿಲಳ್ಳಿಲಿ ರೋಮ ನೆಟ್ಟಂಗಾಕೆ ಕಾರಣಾತ್. ಹೈದಂಗ, ಗೂಡೆಗೆಲ್ಲಾ ಎಂಜಿನಿಯರಿಂಗ್ ಕನ್ಸ್ ಕಾಣುವಂಗಾತ್. ಲೆಕ್ಕ, ವಿಜ್ಞಾನ ತಲೆಗೆ ಹೋಗದ ಗೂಡೆಗ ಎಂಜಿನಿಯರ್ ಗಂಡಂದಿರಿಗಾಗಿ ಆಸೆಪಟ್ಟೋ. ಒಮ್ಮೊಮ್ಮೆ ಅಮ್ಮಣ್ಣಿಗೂ ಅಂತ ಆಸೆ ಆಗ್‌ತಿತ್ತ್. ಯಾರಾದರೊಬ್ಬ ಎಂಜಿನಿಯರ್ ತನ್ನ ಕೈ ಹಿಡ್ದ್ರೆ ಅಮೆರಿಕಕ್ಕೆ ಹಾರಕಲ್ಲಾಂತ. ಆಹಾ! ವಿಮಾನಲಿ ಏಳ್ ಸಮುದ್ರ ದಾಟಿ ಅಮೆರಿಕಕ್ಕೆ ಹಾರ್‍ದು ಅಂದ್ರೆ ಅದೆಂತಹ ಅದೃಷ್ಟ!

ಊರ್‌ಗೌಡ್ರ್ ದಾರೆ ಎರೆಯುವ ಬಗ್ಗೆ ಕರ್ದ್ ಹೇಳಿಕಾಕನ ಅವ್ಳ ಯೋಚನಾ ಸರಣಿ ತುಂಡಾತ್. ದಾರೆ ಎರೆಯುದರ್‍ನ ಎಲ್ಲವುಕೂ ಕೇಳುವಾಂಗೆ ಗಟ್ಟಿಯಾಗಿ ಕರ್ದ್ ಹೇಳ್ದೊ.

"ಹತ್ತ್ ಕುಟುಂಬ ಹದಿನೆಂಟ್ ಗೋತ್ರ ಒಂದು ಬಾಂದವ ನೆಂಟರಿಷ್ಟರ್, ಸಮಜಾತಿ ಸಮಸ್ತರ್ ಕೂಡಿರುವಲ್ಲಿ ಮೇಲು ಕಪಿಲಳ್ಳಿ ಗ್ರಾಮದ ಕಜೆ ಕುಶಾಲಪ್ಪನವರ

ಮಗಳು ಚಾಲ್ಯರ ಗೋತ್ರದ ಚಿರಂಜೀವಿ, ಸೌಬಾಗ್ಯವತಿ, ಹರಿದ್ರಾ ಕುಂಕುಮ ಶೋಬಿತೆ ಗೌರಮ್ಮ ಎಂಬ ವದುನ ಕೆಳ ಕಪಿಲಳ್ಳಿ ಗ್ರಾಮದ ಕಾನ ಮುಂಡಪ್ಪನವರ ಮಂಜ ನಾಯರ್ ಗೋತ್ರದ ಚಿರಂಜೀವಿ ಹುಕ್ರಪ್ಪ ಎಂಬ ವರಂಗೆ ದಾರೆ ಎರ್ದ್ ಕೊಟ್ಟವೆಂತೇಳ್ವೋ"

ಅದಕ್ಕೆ ಉತ್ತರವಾಗಿ ಪಟೇಲ್ರ್ ಹೇಳ್ದೊ:

"ಹತ್ತ್ ಕುಟುಂಬ ಹದಿನೆಂಟ್ ಗೋತ್ರ ಬಂದು ಬಾಂದವ ನೆಂಟರಿಷ್ಟರ್, ಸಮಜಾತಿ ಸಮಸ್ತರ್ ಸೇರಿರುವಲ್ಲಿ ಕೆಳ ಕಪಿಲಳ್ಳಿ ಗ್ರಾಮದ ಕಾನ ಮುಂಡಪ್ಪನವರ ಮಂಜ ನಾಯರ್ ಗೋತ್ರದ ಚಿರಂಜೀವಿ ಹುಕ್ರಪ್ಪ ಎಂಬ ವರಂಗೆ, ಮೇಲು ಕಪಿಲಳ್ಳಿ ಗ್ರಾಮದ ಕಜೆ ಕುಶಾಲಪ್ಪನವರ ಮಗಳು ಚಾಲ್ಯರ ಗೋತ್ರದ ಚಿರಂಜೀವಿ, ಸೌಬಾಗ್ಯವತಿ, ಹರಿದ್ರಾ ಕುಂಕುಮ ಶೋಬಿತೆ ಗೌರಮ್ಮ ಎಂಬ ವದುವನ್ನು ದಾರೆ ಸಹಿತ ಎತ್ತಿಕಂಡವೆಂತೇಳ್ವೆ"

ಹೀಂಗೆ ಮೂರ್ ಮೂರ್ ಸರ್ತಿ ಹೇಳ್ದೋ. ಕೂಡಿದ ಸಮಸ್ತರ್ ಸಬೆಯ ಒಪ್ಪಿಗೆಂತ ಸಮ್ಮತಿ ಸೂಚಿಸಿದೊ. ಊರ್‌ಗೌಡ್ರ್ ದಾರೆ ಎರ್ದೋ. ಪಟೇಲ್ರ್ ಕಂಚಿನ ಬಟ್ಲ್‌ಲಿ ದಾರೆ ಹೊಯ್ದ ನೀರ್ನ ಹಿಡ್ದ್ ಚಾಳೆ ಬುಡಕ್ಕೆ ಹೊಯ್ದ್ ಬಂದೊ. ಕಲಶ ಕನ್ನಡಿ ಸಹಿತ ವರನ ಕಡೆವು ಮುಂದಾಗಿ ಮನೆ ಪ್ರವೇಶ ಮಾಡ್ದೋ. ವದುವಿನ ಕಡೆವು ಕಲಶ ಕನ್ನಡಿ ಸಹಿತ ಹಿಂಬಾಲಿಸಿದೊ. ನಡುಮನೆಲಿ ಹಸೆ ಬರ್ದಿದ್ದೊ. ಅಲ್ಲಿ ಹುಕ್ರಪ್ಪ ಮತ್ತು ಗೌರಮ್ಮರ ಆಕೃತಿಗಳ್ನ ಬೀಳದ ಹಾಂಗೆ ಹಿಂಬದಿಂದ ಆದಾರ ಕೊಟ್ಟ್ ನಿಲ್ಸಿದೊ.

ಹೊರ್ಕಡೆ ಒಂದೇ ಸವನೆ ರಾಮಣ್ಣ ಗರ್ನಾಲ್ ಹೊಡ್ಸಿತ್.

ವಾಲಗದಂವ ಯಾವ್ಯಾವುದೋ ಸಿನೇಮಾ ಹಾಡ್ ನುಡ್ಸಿತ್. ನಡುಮನೆಲಿ ಮದುಮಕ್ಕಳ ಕೂರ್ಸಿದಲ್ಲಿ ತೂಗುದೀಪ ಉರಿತಿತ್ತ್. ಎದ್‌ರ್‌ಗಡೆ ದೊಡ್ಡ ಕಾಲ್ದೀಪ, ಕಾಣಿಕೆ ಬಟ್ಲ್ ಮತ್ತು ಸೇಸೆ ಅಕ್ಕಿ ಇದ್ದ ಹರಿವಾಣ ಇಸಿದ್ದೊ. ಊರ್‌ಗೌಡ್ರ್ ಕಾಣಿಕೆ ಬಟ್ಲಿಗೆ ಇಪ್ಪತ್ತರ ನೋಟು ಹಾಕಿ ಮದುಮಕ್ಕಳಿಗೆ ಮೂರು ಸರ್ತಿ ಸೇಸೆ ಹಾಕಿ ದೀಪಕ್ಕೆ ಕೈ ಮುಗ್ದೋ.

ಅವು ಆದ್ಮೇಲೆ ಪಟೇಲ್ರ್ ಕೂಡ ಹಾಂಗೆ ಮಾಡ್ದೋ. ಮತ್ತೆ ಶೇಷೋಪಚಾರ ನಡ್ತ್. ಮದ್ಯಾಹ್ನ ಮದ್ವೆ ಔತಣ ಗೌಜಿಯಾಗಿತ್ತ್. ಪದಿಂಜಿ ಪಾಯ್ಸಕ್ಕೆ ಅವ್‌ಲಕ್ಕಿ ಹಾಕಿ ಕಲ್ಸಿ ತಿಂಬೋದೆಂದರೆ ಅಮ್ಮಣ್ಣಿಗೆ ಬಾರೀ ಕುಸಿ. ಅವ್ಳ್ ಮೂರ್ನೇ ಸರ್ತಿ ಹಾಂಗೆ ಕಲ್ಸಿ ತಿಂಬಕಾಕನ ತ್ಯಾಂಪಣ್ಣ ಎಲ್ಲಿಂದಲ್ಲೋ ಅವಳೆದ್‌ರ್ ಹಾಜರಾತ್.

"ತಿನ್ನ್ ತಿನ್ನ್. ಈ ಪ್ರಾಯಲಿ ತಿಂದದ್ದೇ ಬಾತ್. ನನ್ನ ಕತೆ ನೋಡು. ವಾಯು ದೇವ್ರಿಗೆ ನನ್ನ ಮೇಲೆ ಬಾರಿ ಪ್ರೀತಿ. ಇದನ್ನೆಲ್ಲಾ ತಿಂದರಂತೂ ಕೇಳುದೇ ಬೇಡ. ಮದುವೆಗೆ ಬೇರೆ ಗರ್ನಾಲಿನ ಅಗತ್ಯನೇ ಇಲ್ಲೆ."

ಊಟಾದ ಮೇಲೆ ಹೆಣ್ಣ್ ಇಳ್ಸಿಕೊಡುವ ಕ್ರಮ ನಡ್ತ್. ಚಿಕ್ಕಪ್ಪನ ಯಜಮಾನ್ತಿ ರಾದಾ ಚಿಕ್ಕಮ್ಮ ಇಂಪಾಗಿ ಹೆಣ್ಣ್ ಇಳ್ಸಿಕೊಡುವ ಹಾಡ್ ಹೇಳ್ವೋ.

"ಎಮ್ಮ ಮನೆಯಂಗಳದಿ ಬೆಳದೊಂದು ಹೂವನ್ನು
ನಿಮ್ಮ ಮಡಿಲೊಳಗಿಡಲು ತಂದಿರುವೆವು.
ಕೊಳ್ಳಿರೀ ಮಗುವನ್ನು ಎಮ್ಮ ಮನೆ ಬೆಳಕನ್ನು
ನಿಮ್ಮ ಮನೆಯನು ತುಂಬಲೊಪ್ಪಿಸುವೆವು"

........

ಅಮ್ಮಣ್ಣಿಗೆ ಹಾಡ್‌ಂತೇಳಿರೆ ತುಂಬಾ ಇಷ್ಟ. ಅದನ್ನ್ ಪ್ರತಿಸರ್ತಿ ಕೇಳಿಕಾಕನೂ ಅವ್ಳ ಕಣ್ಣ್‌ಂದ ನೀರ್ ದಾರೆ ಆಗಿ ಹರ್ದ್‌ಬುಡ್ತಿತ್ತ್. ಅದರ ತಡೆಕೆ ಅವ್ಳಿಗೆ ಆಗ್‌ತಿತ್ಲೆ. ಅಷ್ಟ್ ಒಳ್ಳ ಹಾಡ್ನ ಬರ್ದೊವು ಮಾತ್ರ ಯಾರ್‌ಂತ ಅವ್ಳಿಗೆ ಗೊತ್ತಿತ್ಲೆ. ಅಪ್ಪಂಗೂ, ಅವ್ವಂಗೂ, ಸ್ವತಹ ತ್ಯಾಂಪಣ್ಣಂಗೂ ಗೊತ್ತಿತ್ಲೆ. ಹೈಸ್ಕೂಲ್‌ಲಿ ಕನ್ನಡ ಮಾಸ್ಟ್ರ ಒಬ್ಬ ಇದ್ದೊ. ಅವು ಮಾತಾಡಿಕಾಕನ ಉಚ್ಚಾರಣೆ ದೋಷ ಆಗ್‌ತಿತ್ತ್. ಅವರಲ್ಲಿ ಕೇಳಿಕಾಕನ ಅವು "ಒಂದು ವಾರ ಟೇಮು ಕೊಡು ವುಡ್ಗೀ. ಅದ್ನ ಬರ್ದ ಕವಿ ಯಾವ್ನೊಂತ ವುಡ್ಕಿ ಏಳಿಬುಡ್ತೇನಿ" ಅಂತ ಸಮಜಾಯಿಸಿದ್ದೊ.

ಅದಾಗಿ ಎಷ್ಟೋ ದಿನಗಳ ಮೇಲೆ ಅವು ಹೇಳ್ದೊ, "ಎ ವುಡ್ಗೀ, ವುಡ್ಕೇ ಬುಟ್ಟೆ ಕಣೇ. ಅವ್ರು ಸೀತಾರಾಮಯ್ಯನೋರು. ಕನ್ನಡದ ಮೇಸ್ಟ್ರಲ್ಲ. ಅರ್ತಶಾಸ್ತ್ರದ ಮೇಸ್ಟ್ರು."

ಅಮ್ಮಣ್ಣಿಗೆ ಆಶ್ಚರ್ಯ ಆತ್. ಯಾವ ವಿಷಯದ ಮೇಸ್ಟ್ರಾದರೇನ್? ಇದೊಂದು ಹಾಡ್ ಸಾಕಲ್ಲ. ಅವು ಚಿರಂಜೀವಿಯಾಗಿ ಉಳಿಯಕೆ. ಪತ್ರಿಕೆಗಳ್ಲಿ ಕವನಂತೇಳಿ ಬರುವ ಸಾಲ್‌ಗಳ್ನ ಅವ್ಳ್ ಕೆಲವು ಸರ್ತಿ ಓದ್‌ತಿತ್ತ್. ಅದನ್ನ್ ತಾಳ ಹಾಕಿ ಓದಿಕೆ ಸಾದ್ಯ ಆಗ್‌ತಿತ್ಲೆ. ಅರ್ತನೂ ಆಗ್‌ತಿತ್ಲೆ. ಹಾಂಗೆ ಬರೆವ ಬದಲ್ ಪ್ರಬಂದ ರೂಪಲಾದ್ರ್ ಬರೀತಿದ್ರೆ ಅರ್ತವಾಡಿಕಂಬಕೆ ಆಗ್ತಿತ್ತೇನೋಂತ ಅಂದ್‌ಕಣ್ತಿತ್ತ್. ಎಮ್ಮ ಮನೆಯಂಗಳದಿ ಹಾಡ್ನ ಅವ್ಳ್ ತಾಳ ಹಾಕಿ ಹಾಡ್ತಿತ್ತ್. 'ಧಿನ್ನ-ದಿದ್ದಿನ್ನ' ತ್ವರಿತ ಝಂಪೆ ತಾಳಕ್ಕೆ 'ಸಾವೇಲಿ' ರಾಗಲಿ ಹಾಡಿರೆ ಕೇಳುವ ಎಂತವರ ಹೃದಯಾದ್ರೂ ಕರ್ಗೋಕೆ. ಆ ಮಾಸ್ಟ್ರಿಗೆ ಇಂತ ಒಂದು ಹೃದಯ ಕರ್ಗುವ ಪದ್ಯನ ಬರೆಕೆ ಹೇಂಗೆ

ಸಾದ್ಯ ಆತ್! ಬಹುಷ್ಯ ಅವ್ಕೆ ಹೆಣ್ಣ್‌ಮಗಳೊಬ್ಬ್‌ಳ್ ಇದ್ದಿರೋಕು. ಅವ್ಳಿಗೆ ಮೊದುವೆ ಮಾಡ್ಸಿ ಗಂಡನ ಮನೆಗೆ ಕಳ್ಸಿಕಾಕನ ಅವ್ರ ಮನ್ಸ್ ಎಷ್ಟ್ ಕರ್‍ಗಿತೋ ಏನೋ? ಕರ್‍ಗಿ ಕರ್‍ಗಿ ಕೊರಗಿದ್ದಕ್ಕೆ ಇಂತ ಹಾಡ್ ಅವ್ರ ಅಂತರಾಳಂದ ಹರ್‍ದ್ ಬಂದಿರೋಕು.

ಪೂರ್ತಿ ಹಾಡ್ ಮುಗಿಯಕಾಕನ ಸೇರ್ದವೆಲ್ಲಾ ಚಪ್ಪಾಳೆ ತಟ್ಟಿಬುಟ್ರೊ. ಮತ್ತೆ ಊರ್‌ಗೌಡ್ರ್ ದೊಡ್ಡ ಸೊರಲಿ ಹೇಳ್ದ್ರೊ,

"ಉಬಯ ಕುಟುಂಬಗಳ ಮತ್ತು ಹತ್ತ್ ಸಮಸ್ತರ ಮುಂದೆ ನಾವು ಕಾನಮನೆಯ ಹುಕ್ರಪ್ಪ ಮತ್ತು ಕಜೆಮನೆಯ ಗೌರಮ್ಮಳ್ನ ಕುಲಪದ್ದತಿ ಪ್ರಕಾರ ಇನ್ನ್‌ಮುಂದೆ ಗಂಡ ಹೆಣ್ಣ್‌ಂತ ಕರ್‍ದ್ ಹೇಳಿವೆ. ಅವರ ಪವಿತ್ರ ಆತ್ಮಗಳಿಗೆ ಚಿರಶಾಂತಿ ದೊರ್‍ತ್ ವೈಕುಂಟಲಿ ಶ್ರೀ ನಾರಾಯಣ ದೇವ್ರ ಸಮ್ಮುಕಲಿ ಸಕಲ ಸೌಬಾಗ್ಯ ಕೂಡಿ ಶಾಶ್ವತ ನೆಮ್ಮದಿಂದ ಇರೋಕುಂತ ಗುರು ಕಾರ್ನೂರುಗಳ್ನ ನೆನ್ಪಿಸಿಕಂಡ್ ಪ್ರಾರ್ತನೆ ಸಲ್ಲಿಸ್‌ತ್ತೊಳೊ."

ಮತ್ತೆ ಗರ್ನಾಲ್ ಸಿಡ್ತ್. ವಾಲಗ ಉರ್‍ಗಿದೊ. ಅವ್ವ ಗೌರಮ್ಮನ ಮೂರ್ತಿನ ಹಿಡ್‌ಕಣ್ತ್. ಹುಕ್ರಪ್ಪನ ಮೂರ್ತಿನ ಹಿಡ್ಕಂಡ್ ತ್ಯಾಂಪಣ್ಣ ನಡ್ತ್. ರಾಜರಸ್ತೆನ ಪಕ್ಕಲಿ ಇವ್ಕಾಗಿ ಕಾನದ ಮನೆನ ಸಿಂಗರ್‍ಸಿದ ಜೀಪು ತಯಾರಾಗಿ ನಿತಿತ್ತ್. ಡ್ರೈವರ್‍ನ ಪಕ್ಕಲಿ ಹುಕ್ರಪ್ಪನ ಮೂರ್ತಿ ಹಿಡ್ದ ತ್ಯಾಂಪಣ್ಣ ಕುದ್ದತ್. ಅವನ ಎಡಗಡೆಗೆ ಗೌರಮ್ಮನ ಮೂರ್ತಿ ಹಿಡ್ದ ಅವ್ವ ಕುದ್ದತ್. ಹಿಂದ್‌ಗಡೆ ಮೊದೊಳಿಗೆನ ಕುರುಂಟು ಅಮ್ಮಣ್ಣಿ, ಅವ್ಳಿಗೆ ಎದ್‌ರಾಗಿ ಮದುಮಂಜನ ಅಡುಳಿ ಎಂಜಿನೀಯರ್ ಹೈದ ಕುದ್ದತ್. ಬಸ್ಸಿಲಿ ಜಾಗ ಇಲ್ಲೆಂತೇಳಿ ನಾಲ್ಕ್ ಹೆಂಗ್ಸರ್ ಜೀಪಿನ ಹಿಂದ್‌ಗಡೆ ಸೀಟಿಲಿ ಕುದ್ದ್‌ಕಂಡೊ. ಜೀಪು ಮುಂದುಗಡೆಂದ, ಬಸ್ಸ್ ಹಿಂದ್‌ಗಡೆಂದ ಹೂವಯ್ಯನವರ ಕಾನದ ಮನೆಕಡೆ ಹೊರ್‍ಟತ್.

ತ್ಯಾಂಪಣ್ಣನ ನೆನ್‌ಪು ಅವ್ನ ಬಾಲ್ಯದ ದಿನಗಳ ಕಡೆ ಸರ್‍ತ್.

"ಗೌರಮ್ಮ ತುಂಬಾ ಒಳ್ಳ ಗೂಡೆಯಾಗಿತ್ತ್. ಅವ್ಳ ಹಾಂಗೆ ಕೋಳಿ ಗೈಪು ಮಾಡೋವು ನಮ್ಮ ಇಡೀ ಕಪಿಲಳ್ಳಿ ಸೀಮೆಲೇ ಇತ್ಲೆ. ಅವ್ಳಿಗೆ ಎಂತೆಂತಾ ಶೋಬಾನೆ ಹಾಡ್‌ಗ ಗೊತ್ತಿತ್ತ್. ಹಾಳಾದ ಮಲೇರಿಯಾ ಒಂದಲ್ಲದಿರ್‍ತ್ತಿದ್ದರೆ ತುಂಬು ಸಂಸಾರ ನಡ್ಸಿ ಎಲ್ರೂ ಕಡೆಯವರ್‌ಂದ ಸಾಬಾಸ್‌ಂತ ಹೇಳ್ಸಿಕಣ್‌ತಿತ್ತ್. ಈಗ ದೇವ್ರು ತಡಾದರೂ ಕಣ್ಣ್ ತೆರ್‍ತ್. ದೊಡ್ಡ ಮನೆತನದ ಸಂಬಂದ ಇದ್. ಅವ್ಳಿಗಿನ್ನ್ ಮುಕ್ತಿ ಸಿಕ್ಕಿಯೇ ಸಿಕ್ಕಿದೆ."

ಅವ್ವ ಗೌರಮ್ಮನ ನೋಡಿತ್ಲೆ. ತೀರ್ತದ ತ್ಯಾಂಪಣ್ಣನ ಮಾತಿಗೆ ಏನ್

ಹೇಳೋಕುಂತ ಅವ್ಳಿಗೆ ಗೊತ್ತಾತ್ತೆ. ಮಾತ್ ಬೇರೆ ಕಡೆ ತಿರ್ಗಿತ್. ಮಾತಿನ ನಡು
ಜೀಪಿನ ಡ್ರೈವರ್ ಒಗ್ಗ್ರಣೆ ಹಾಕ್ತಿತ್. ಹಿಂದೆ ಕುದ್ದಿದ್ದ ಹೆಂಗ್ಸರ್ ಅವರ್ದೇ ಮಾತಿ
ಲೋಕಲಿ ಮುಳ್ಗಿದ್ದೋ.

ಆಗಂಡ್ಲೆ ಅಮ್ಮಣ್ಣಿನನೇ ನೋಡ್ತಿದ್ದ ಇಂಜಿನಿಯರ್ ಹೈದ ಮುಂದೆಗೆ ಬೊ
ಅಮ್ಮಣ್ಣಿನೊಟ್ಟಿಗೆ ಮಾತಾಡ್ತ್.

"ನಾನ್ ನಾಗೇಶ. ಇಂಜಿನಿಯರಿಂಗ್ ಕಡೇ ವರ್ಷಲೊಳೆ. ಹೂವಯ್ಯನವ
ತಮ್ಮನ ಮಂಜ. ನೀವೇನ್ ಮಾಡ್ತೊಳರಿ?"

"ಪಿ.ಯು.ಸಿ ಕಟ್ಟಿಯೊಳೆ. ಪಾಸಾದರೆ ಬಿ.ಎ. ಮಾಡ್ನೆ. ನಂಗೆ ಇಂಜಿನಿಯರಿಂಗ
ಆಕೆ ಆಸೆ ಇತ್ತ್. ತಲೆಯೊಳಗೆ ಲೆಕ್ಕ ಮತ್ತು ವಿಜ್ಞಾನ ಹೋತೇಲೆ."

ಅಲ್ಲಿವರೇಗೆ ಅಮ್ಮಣ್ಣಿನ ಆಸೆ ಕಣ್ಣ್ ಗಳ್ ಂದ ನೋಡ್ತಿದ್ದ ನಾಗೇಶನ
ಮೋರೆಲಿ ತಾತ್ಸಾರದ ಬಾವನೆ ಮೂಡ್ದರ್ನ ಅವ್ಳ್ ಗಮನಿಸಿತ್. ತನ್ನ ಬಾಗವತಿಕೆನ
ಇಂವ ಕೇಳ್ತಿಲೆಂತ ಸ್ಪಷ್ಟ ಆತ್. ಕೇಳಿರ್‌ತಿದ್ದರೆ ಅದರ ಬಗ್ಗೆ ಮಾತಾಡ್ತಿತ್ತ್. ಅವ್ಳಿಗ
ಮುಸ್ಸಂಜೆನ ಮುತ್ತಿನ ಮಾಣಿನ ನೆನ್ಪಾತ್. ಒಟ್ಟಿಗೆ ಮೈಯ್ಲಿ ನವೀರಾದ ಬಾವನ
ಮೂಡಿ ಕೆನ್ನೆ ಕೆಂಪಾತ್.

"ನೀವ್ ಎಷ್ಟ್ ಮಕ್ಕ?" ನಾಗೇಶ ಕೇಳ್ತ್.

"ನಾನೇ ದೊಡ್ಡವ್ಳ್. ತಂಗೆ ಬಾಳಕ್ಕ ಪಿ.ಯು.ಸಿ. ಕಡೇ ವರ್ಷಲಿ ಕಲಿತುಟ್ಟು. ಅವ್
ಸಯನ್ಸ್ ತಕಂಡದ್. ಅವ್ಳಿಗೆ ಇಂಜಿನಿಯರಿಂಗ್ ಮಾಡುವ ಆಸೆ. ಮತ್ತೊಬ್ಬಳ್
ತಂಗೆ ಶಾರ್ದೆ ಏಳ್ರಲ್ಲಿ ಕಲಿತುಟ್ಟು. ಕಡೇಂವ ತಮ್ಮ ಪ್ರಸಾದ. ತುಂಬಾ
ಸಣ್ಣಂವ. ತುಂಬಾ ಚೂಟಿ. ಇಂದ್ ಅವ್ನ ಮನೇಲಿ ಬಾಳಕ್ಕನೇ ನೋಡಿಕಣಕ್ಕಷ್ಟೇ."

"ತಂಗೆ ಎಂಜಿನೀರಿಂಗ್ ಮಾಡ್ಲಿ. ನಾನ್ ಎಂ.ಟೆಕ್ಕ್ ಮಾಡಿ ಅಮೇರಿಕಕ್ಕ
ಹೋಕುಂತೊಳೆ. ಎಂಜಿನಿಯರಿಂಗ್ ಗೂಡೆನ ಮದ್ವೆಯಾಗಿ ಅಮೆರಿಕಕ್ಕೆ ಹೋಕುಂತ
ಅಪ್ಪ ಕಂಡಿಶನ್ ಹಾಕಿಟ್ಟು. ಇಲ್ಲದಿದ್ರೆ ಅಲ್ಲಿಂದ ಬಿಳೀ ಹೆಣ್ಣ್‌ನ ತಂದ್‌ಬುಡ್ವೆಂತ
ಅವ್ಕೆ ಹೆದ್ರಿಕೆ. ನಿಮ್ಮ ತಂಗೆ ಪೊರ್ಲು ಉಟ್ಟು. ಆದ್ರೆ ಅದೇನ್ ಹೆಸ್ರ್? ಅಮ್ಮಣ್ಣಿ
ಬಾಳಕ್ಕ! ಏನೇನೂ ಲಾಯ್ಕಿಲ್ಲೆ. ಕೋರ್ಟಿಗೆ ನೋಟರಿ ಮೂಲಕ ಅಪಿದಾವಿತ್
ಸಲ್ಸಿ ಹೆಸ್ರ್ ಬದಲಾಯ್ಸಿಬುಡಿ.

ಅಮ್ಮಣ್ಣಿಗೆ ಕಸಿವಿಸಿ ಆತ್. ಹಿರಿಯೊವು ಪ್ರೀತಿಂದ ಇಸಿದ ಹೆಸ್ರ್. ಅದ
ಅರ್ತ ಏನಾದ್ರ್ ಉಟ್ಟೋ ಇಲ್ಲೆನೋ. ಆದರೆ ಅದರ ಹಿಂದೆ ಪ್ರೀತಿನ ತುಡಿತ
ಉಟ್ಟು. ಇಂವ ಈಗಳೆ ಆರ್ಡರ್ ಕೊಡ್ತುಟ್ಟು. ಮದ್ವೆ ಆದಮೇಲೆ ಎಷ್ಟ್ ದಬ್ಬಾಳಿಕ

ನಡ್ಸಿದೆನೊ. ಎಂಜಿನೀಯರ್ ಆದಂವ ಎಂಜಿನೀಯರ್‌ಗಳನ್ನೇ ಮದ್ವೆ ಆಕುಂತೇಳ್ವ ಹೊಸ ಸಂಪ್ರಾದಾಯ ಈಗೀಗ ಸುರು ಆಗುತ್ತಾ ಉಟ್ಟು. ಬರೇ ಇಂಜಿನೀಯರ್‌ಂತಲ್ಲ. ಡಾಕ್ಟ್ರ ಡಾಕ್ಟ್ರನ, ಮಿಲ್ಟ್ರಿಗೆ ಹೋದೊವು ನರ್ಸ್‌ನನೋ, ಟೀಚರ್‍ನನೋ ಈಗೀಗ ಮದುವೆ ಆಗುತ್ತೊಳೊ. ಇದಕ್ಕೆಲ್ಲಾ ಅವ್ರ ಮನೆವೂ ಕಾರಣರೆ.

ಇಷ್ಟ್ ಓದಿದವಂಗೆ ತನಗೆಂತ ಜತೆಗಾರ್ತಿ ಬೇಕೂಂತ ನಿರ್ದರಿಸುವ ಹಕ್ಕ್ ಇಲ್ಲೆ. ಇಂವ ಈವರೇಗೆ ನನ್ನ ನೋಡ್ತಿತ್ತ್. ಈಗ ಬಾಳಕ್ಕನ ಬಗ್ಗೆ ಮಾತಾಡ್ತುಟ್ಟು. ಅವಳ್ ಸಯನ್ಸ್ ಓದುತುಟ್ಟಲ್ಲಾ ಅದ್ಕೇ ಇರೋಕು. ಇವಂಗೆ ಮದ್ವೆಂತೇಳಿರೆ ಒಂದು ವ್ಯವಹಾರ.

"ಯಾಕೆ ಸುಮ್ಮನಾದರಿ?"

"ಅಲ್ಲ ನೀವು ಎಂಜಿನೀಯರ್. ನಿಮ್ಮಲ್ಲಿ ಮಾತಾಡಿಕೆ ಎಲ್ಲಿ ತಪ್ಪಾಗಿ ಬುಟ್ಟದೆಂತ ಒಂದು ತರ ಹೆದ್ರಿಕೆ. ಹಂಞ ಯಕ್ಷಗಾನ ಕಲ್ತದ್ ಬುಟ್ಟರೆ ನಂಗೆ ಬೇರೇನೂ ಗೊತ್ತ್ಲೆ." ಅವನ ಮೋರೆಲಿ ಒಂದು ತರ ಬಾವನೆ ಮೂಡ್ದಾಂಗಾತ್.

"ಯಕ್ಷಗಾನನೋ? ತೂ ನಂಗದರ್‍ನ ಕಂಡರೆ ಕಕ್ಕಿಕೆ ಬಂದಾಂಗೆ ಆದೆ. ಮಣಗಟ್ಟಲೆ ಬಟ್ಟೆ ಹೇರಿಕಂಡ್, ಏನೇನೋ ಬಣ್ಣ ಮೆತ್ತಿಕಂಡ್, ಮಣಿಕಿರೀಟ ಹೊತ್ತ್‌ಕಂಡ್ ಹೋ........ಂತೇಳಿ ಕುಣ್ದವೆ. ಲಾಜಿಕೇ ಇಲ್ಲದ ಕತೆಗಳ್ನ ಆಡಿ ತೋರ್ಸಿರೆ ಏನ್ ಉಪಯೋಗ ಅದರ್‌ಂದ. ನಮ್ಮ ಎಂಜಿನೀಯರಿಂಗ್ ಡೇಗೆ ಬಂದ್ ನೋಡಿ. ಎಂತೆಂತಾ ಪ್ಯಾಶನ್ ಶೋಗ ಉಟ್ಟುತ ಗೊತ್ತೋ? ಪಾಪ್ ಮ್ಯೂಸಿಕ್ಕ್‌ಗೆ ಎಂತೆಂತಾ ಕುಣ್ತಗ. ನೀವ್ ಇನ್ನೂ ಕಂಟ್ರಿ ಯಕ್ಷಗಾನಲಿ ಒಳೊರಿ. ಡಿಸ್ಕೋ ಡಾನ್ಸ್, ಬ್ರೇಕ್ ಡಾನ್ಸ್ ಎಲ್ಲ ಕಲ್ತ್ ಇನ್ನಾದ್ರ್ ಗ್ಲೋಬಲೈಸ್ ಆಗಿ."

ಅವ್ಳ್ ಚರ್ಚೆ ಮಾಡಿಕೆ ಹೋತ್ಲೆ. ಹಣವಂತರ ಯೋಚನೆಗ ಹೀಂಗೇನೆ ಇರ್‍ದೋ ಏನೋ? ಇನ್ನಷ್ಟ್ ದುಡ್ಡು ಗಳ್ಸುದು, ಆ ಹಣಂದ ಮಜಾ ಮಾಡ್ದು ಇಂತವರ ಜೀವನ ಗುರಿ. ನೋಡಿಕೆ ಮಹಾ ಸಬ್ಯನ ಹಾಂಗೆ ಕಂಡದೆ. ಚಿಂತನೆಲಿ ಮಾತ್ರ ಅಸಬ್ಯತೆ. ಹಸ್ರ್ ಲುಂಗಿನ ಮುಸ್ಸಂಜೆಯ ಮುತ್ತಿನ ಮಾಣಿ, ಅವ್ನ ಹೆಸ್ರ್‌ನ ಅವ್ಳ್ ಕೇಳಿತ್ತ್‌ಲೆ. ಅಂವ ನೋಡಿಕೆ ಅಸಬ್ಯನ ಹಾಂಗೆ ಇತ್ತ್. ಆದರೆ ಅವಂಗೆ ಕಲೆಯ ಬಗ್ಗೆ ತುಂಬಾ ಪ್ರೀತಿ ಇತ್ತ್. ಅಂವ ತನ್ನ ಬಾಗವತಿಕೆಯೊಟ್ಟಿಗೆ ನನ್ನನ್ನೂ ಮೆಚ್ಚಿಕಂಡಿತ್ತ್. ಮೆಟ್ರಿಕ್ ಪಾಸ್ ಮಾಡಿಕಣದ ಅವಂಗೆ ಕಲೆಯೆಂದರೇನ್‌ಂತ ಗೊತ್ತಿತ್ತ್. ಈ ಇಂಜಿನೀಯರ್ ಅಸಬ್ಯ ದೇಹ ಪ್ರದರ್ಶನದ ಪ್ಯಾಶನ್ ಶೋಗಳ್ನ,

ಕೊಳ್ಕಟೆ ಅಶ್ಲೀಲ ಹಾಡ್‌ಗಳಿಗೆ ಅಂಗಾಂಗಗಳ್ನ ಕುಣ್ಸುದರ್ನೆ ಕಲೆಂತ ತಿಳ್ಕೊಂಡುಟ್ಟು, ಸಂಸ್ಕಾರ ಇಲ್ಲದಂವ. ಇವಗಿಂತ ಮಾಣಿನೇ ಸಾವಿರ ಪಾಲ್‌ವಾಸಿ. ಅಂವ ಜೀವನದ ಅಜ್ಞಾತ ಸುಖವೊಂದಕ್ಕೆ ಸುಮದುರ ಪೀಟಿಕೆ ಹಾಕಿತ್ತ್. ಇವಂಗೆ ಮದುವೆಂತೇಳ್ದು ಅಪ್ಪ ಹೇಳ್ದಂಗೆ ನಡೆವ ಒಂದು ಆಚರಣೆ ಮಾತ್ರ. ಇವನ ಮದುವೆಯಾಗೋವು ಸುಕವಾಗಿರಿಕೆ ಸಾದ್ಯನೇ ಇಲ್ಲೆ.

ಅಂವ ಈಗಳೂ ಅವಳ್ನೇ ನೋಡ್ತಿತ್. ಅವ್ಳಿಗೆ ಅಂವನ ನೋಡೋಕುಂತಾತ್ಲೆ. ಹೇಂಗೋ ದಾರಿ ಸಾಗಿತ್.

ಹೂವಯ್ಯನವರ ಮನೆ ಬಾತ್. ಚಪ್ಪರ ನೆಂಟರಿಷ್ಟರ್‌ಂದ ತುಂಬಿ ಹೋಗಿತ್ತ್. ಗರ್ನಾಲ್‌ಗಳ ಸದ್ದ್‌ಂದ ಕೆಬಿ ಬುಡಿಕಾತಿತ್ಲೆ. ಹೂವಯ್ಯನವು ತಮ್ಮ ಅಂತಸ್ತಿಕೆಗೆ ತಕ್ಕ ಹಾಂಗೆ ಬ್ಯಾಂಡ್ ವಾಲಗದವರ್ನ ತರ್ಸಿದ್ದೊ. ಅದರ ಸದ್ದಿಗೆ ಅಲೌಕಿಕ ಲೋಕದ ಸೃಷ್ಟಿ ಆದಂಗಿತ್ತ್. ಸುಮಂಗಲೆಯರ್ ಹುಕ್ರಪ್ಪನ ಮತ್ತು ಗೌರಮ್ಮಳ ಮೂರ್ತಿಗಳಿಗೆ ಆರತಿ ಎತ್ತಿ ಶೋಬಾನೆ ಹಾಡ್ದೊ. ಹೊಸ್ತಿಲಲಿದ್ದ ಸೇರಕ್ಕಿ ಬೆಲ್ಲನ ಕಾಲ್‌ಂದ ಒದ್ದ್ ಬಲಗಾಲ್ನ ಮುಂದಿಟ್ಟ್ ಅವ್ವ ಮನೆಪ್ರವೇಶ ಮಾಡ್ತ್. ನಡುಮನೆ ಗೋಡೆನ ಪಕ್ಕಲಿಸಿದ್ದಎರ್ಡ್ ಮಣೆಗಳ್ಲಿ ಮದುಮಕ್ಕಳ ಮೂರ್ತಿನ ಇಸಿ ಮುಂದಿನ ಕ್ರಮಕ್ಕೆ ತಯಾರಾದೊ.

ರಾತ್ರಿ ಕನ್ನಿಕಂಬದೆದ್‌ರ್ ಬಡ್ಸಿ ಹೂವಯ್ಯನವು ಪ್ರಾರ್ತನೆ ಮಾಡ್ದೊ.

"ನಮ್ಮ ಹಿರಿಯ ಹುಕ್ರಪ್ಪನವು ಮದ್ವೆಗೆ ಮುಂದೆ ಅವಗಡಲಿ ತೀರಿಹೋದೊ. ಅವ್ಕೆ ಇಂದ್ ಶಾಸ್ತ್ರ ಪ್ರಕಾರ ಮದುವೆ ಆಗುಟು. ಕಜೆ ಮನೆ ಗೌರಮ್ಮನವು ಈ ಮನೆಯ ಸೊಸೆಯಾಗಿ ಬಂದೊಳೊ. ನಿಮ್ಮ ಒಪ್ಪಿಗೆಯಿದ್ದೇ ನಡ್ದ ಮದುವೆ ಇದ್. ವೈಕುಂಟಲಿ ಅವು ಇಬ್ಬರ್ ನೆಮ್ಮದಿಂದ ಇರುವ ಹಾಂಗೆ ನೋಡಿಕಂಬ ಕೀರ್ತಿ ನೀವ್ಗೆ ಸೇರ್ದ್." ಅಂತ ಹೇಳಿ ಎಲ್ಲವು ಕೈಮುಗ್ದೋ.

ಕತ್ತಲೆಗೆ ಕೋಳಿರೊಟ್ಟಿ, ಹಂದಿಗೈಪು, ಅಪ್ಪದಿಟ್ಟ್‌ನ ಬಾರಿ ಔತಣ ನಡ್ತ್. ಈ ನಡುಲಿ ಇಂಜಿನಿಯರ್ ಪಾಸಾಡಿ ನಾಲ್ಕೈದ್ ಸರ್ತಿ ಅಮ್ಮಣ್ಣಿಗೆ ಎದ್‌ರಾಗಿತ್ತ್. ಆದ್ರೆ ಅವ್ಳಿಗೆ ಅವನ ನೋಡ್ವ ಮನ್ಸೇ ಇತ್ಲೆ.

ರಾತ್ರಿ ಅಮ್ಮಣ್ಣಿ ಅವ್ವನೊಟ್ಟಿಗೆ ಮಲ್ಗಿಕಾಕನ ಅವ್ವ್ ಹೇಳ್ತ್, "ಕುಲೆ ಮದ್ವೆಲಿ ನಿಜವಾದ ಮದುವೆ ಹಾಂಗೆ ಎಲ್ಲಾ ಕ್ರಮಗಳ್ನ ಮಾಡ್ವೆಗಡ. ತುಪ್ಪದ ಶಾಸ್ತ್ರನೂ ಮಾಡಿಕುಟ್ಟುಗಡ. ಉಳ್ದ ಶಾಸ್ತ್ರಗಳ್ನ ಮಾಡದಿದ್ದರೆ ತೊಂದ್ರೆ ಏನೂ ಇಲ್ಲೆಂತ ಊರ್‌ಗೌಡ್ರ್ ಹೇಳಿಯೊಳೊ. ಪಟೇಲ್ರ್ ಒಪ್ಪಿಯೊಳೊ. ಅಲ್ಲಿಗೆ ಎಲ್ಲ ಮುಕ್ತ್.

ನಾಳೆ ಬೇಗ ಮನೆಗೆ ಹೋಕು. ಪ್ರಸಾದಂಗೆ ಕುಪ್ಪಿಲಿ ಹಾಲ್ ಬಾಳಕ್ಕ ಕೊಟ್ಟಿದೆ. ಆದ್ರೂ ನಾನಿದ್ದ ಹಾಂಗೆ ಆದುಲೆಲ್ಲಾ?"

"ಆ ಮರದ ಮೂರ್ತಿಗಳ್ನ ಏನ್ಮಾಡುವೆ ಅವ್ವ?"

"ಇನ್ನೇನ್ ಮಾಡ್ದು? ದೈವಸ್ತಾನದ ಜಗಲಿನ ಮೇಲೆ ಸಣ್ಣ ಅಟ್ಟ ಉಟ್ಟಲ್ಲಾ? ಅಲ್ಲಿ ಇಸಿಬುಟ್ಟವೆ. ಕುಲೆ ಮದ್ವೆ ಕಳ್ದಮೇಲೆ ಅವೇನೂ ಮುಖ್ಯ ಅಲ್ಲ."

ಬೊಳ್ಳಿಗೆ ಬೇಗ ಎದ್ದ್ ಅಮ್ಮಣ್ಣಿ ಹಳ್ಳ ನೋಡಿ ಬಾತ್. ತಪಸ್ವಿನಿ ಅಲ್ಲಿ ಅಗಲಾಗಿತ್ತ್. ತುಂಬಾ ಗುಂಡಿನೂ ಇತ್ತ್. ಅದನ್ನ್ ನೋಡಿ ಅವ್ಳಿಗೆ ಮೀಸುವ ಆಸೆ ಆತ್. ನೆಂಟ್ರ್ ಏನ್ ತಿಳ್ಕಂಡವೆನೋಂತ ಹಿಂಜರ್ತ್. ಇನ್ನೊಂದು ದಿನ ಮೀಸಿಕ್ಕಾಗಿಯೇ ಬಾಳಕ್ಕನೊಟ್ಟಿಗೆ ಇಲ್ಲಿಗೆ ಬರೋಕುಂತ ಅಮ್ಮಣ್ಣಿ ಲೆಕ್ಕ ಹಾಕ್ತ್. ಬೊಳ್ಪುನ ತಿಂಡಿ ಆಗಿ ಹೊರ್ಡುವ ಹೊತ್ತು ಬಾತ್. ಎಂಜಿನಿಯರ್ ಪಾಸಾಡಿ ಅಮ್ಮಣ್ಣಿನ ಹತ್ರ ಬಂದ್ ಮೆಲ್ಲಂಗೆ ಹೇಳ್ತ್,

"ನಾನ್ ನಿನ್ನೆ ಹೇಳ್ದಿಲ್ಲಾ ಬಾಳಕ್ಕಂಗೆ ಹೇಳಿಬುಡ್ಬಡಿ. ಒಂದು ವೇಳೆ ಅವ್ಳ್ ಇಂಜಿನೀಯರ್ ಮಾಡಿರೆನೂ ನಾನ್ ಅವಳ್ನೇ ಮದುವೆ ಆಗಿ ಬುಡ್ವೆಂತ ಕಂಡಿತ ಹೇಳ್ವಾಂಗಿಲ್ಲೆ. ಈ ಸಂಗತಿಲಿ ಅಪ್ಪ ಹೇಂಗೆ ಹೇಳ್ವನೋ ಹಾಂಗೆ ನಾನ್ ಕೇಳೋಕಾದೆ."

ಅಮ್ಮಣ್ಣಿಗೆ ಅವ್ನ ಮುಸುಂಡಿಗೆ ಒದಿವಷ್ಟ್ ಸಿಟ್ಟ್ ಬಾತ್.

"ನನ್ನ ತಂಗೆಗೆ ನಿಮ್ಗಿಂತ ಒಳ್ಳ ಗಂಡ ಸಿಕ್ಕಿದೆ. ಎಂಜಿನೀಯರ್‌ಂತೇಳ್ವ ಮಾತ್ರಕ್ಕೆ ಏನ್ ಬೇಕಾದ್ರೂ ಹೇಳಕ್ಕ್ಂತ ತಿಳ್ಕಂಬಡಿ. ನಿಮ್ಮಲ್ಲಿ ಕಲಾಬಿರುಚಿಯಿಲ್ಲೆ. ಹಣ ಮಾತ್ರ ಸರ್ವಸ್ವಂತ ತಿಳ್ಕಂಡ ಹೃದಯಹೀನರು ನೀವ್. ನಿಮ್ಮ ಅಪ್ಪ ಒಪ್ಪಿರೂ ನೀವ್ಗೆ ನನ್ನ ತಂಗೇನ ಕೊಡಕ್ಕಾದ ಗತಿಗೇಡ್‌ತನ ನಾವ್ಗೆ ಬಾತ್ಲೆ."

ಎಂಜಿನಿಯರ್ ಪಾಸಾಡಿ ಕಲ್ಲಿನ ಹಾಂಗೆ ನಿಂತದನ್ನ ಜೀಪು ಹತ್ತಿದ ಅಮ್ಮಣ್ಣಿ ಗಮನಿಸಿತ್. ಜೀಪು ಕಜೆಮನೆನ ದಾರಿ ಹಿಡ್ತ್.

——***——

# ೮. ಹೊಸ ದಾರಿಲಿ ಪಯಣ

ಮನೆಗೆ ಬಂದಾಕನ ಬಾಳಕ್ಕ ಹೇಳ್ತ್, “ನಿಂಗೆ ಜೂನಿಯರ್ ಕಾಲೇಜಿಂದ ಪೋನು ಬಂದಿತ್ತ್. ನೀನ್ ಹೋಗಿ ಆಪೀಸ್ ಸುಪರಿಂಟೆಂಡೆಟ್ನ ಕಾಣೋಕಡ.”

“ಯಾಕೆಂತ ಕೇಳ್ದನೋ?”

“ಇಲ್ಲೆ. ಹೇಂಗೂ ನಾನ್ ಕ್ಲಾಸಿಗೆ ಹೋನೆಲ್ಲಾ? ನಾಳೆ ನೀನೂ ಜೊತೆಗೆ ಬಂದ್‌ಬುಡು. ಮನೆನ ವಾತಾವರಣಂದ ನಿಂಗೆ ಒಂದಿಷ್ಟ್ ಮುಕ್ತಿ ಸಿಕ್ಕಲಿ.” ಅಮ್ಮಣ್ಣಿ ನಗಾಡ್ತ್.

“ಅದ್ ಸರಿ. ಏನ್‌ಂತೇಳ್ತ್ ಆ ನಿನ್ನ ಎಂಜಿನೀಯರ್ ಪಾಸಾಡಿ?”

ಅವನ ಮತ್ತು ನನ್ನ ನಡುವೆ ನಡ್ದ ಎಲ್ಲಾ ಮಾತ್‌ಕತೆನ ಇದ್ದಾಂಗೆ ಹೇಳಿಬುಟ್ನೆಂತ ಒಂದ್ ಕ್ಷಣ ಅಮ್ಮಣ್ಣಿ ಯೋಚಿಸಿತ್. ಆದ್ರೆ ಹೇಳಿ ಏನ್ ಪ್ರಯೋಜನ. ಬಾಳಕ್ಕ ಕೆರ್ಳಿಬುಟ್ಟ್ ಅವಂಗೆ ಎರ್ಡ್ ಬಯ್ದ್‌ಬುಡುದಷ್ಟೆ. ಅದಕ್ಕಿಂತ ಹೆಚ್ಚಿಗೇನ್ ಮಾಡಿಕಾದು? ಹಸ್ರ್ ಲುಂಗಿನ ಮಾಣಿನ ಮುತ್ತಿನ ಕತೆನ ನಾನ್ ತಂಗೆಂದ ಮುಚ್ಚಿಟ್ಟತ್ಲೆನೋ? ಅದ್ ಯಾರೊಟ್ಟಿಗೆನೋ ಹಂಚಿಕಾಗದ ಅಪ್ರೂಪದ ಅನುಬವ. ಇದ್ ಹಂಚಿಕಂಡ್ರೂ ಮುಗಿಯದ ವೇದನೆ.

ಆದ್ರೂ ಅವ್ಳಿಗೆ ತಂಗೆನ ಕೆಣ್ಕುವ ಮನ್ಸಾತ್.

“ಆ ಎಂಜಿನೀಯರ್ ಏನ್‌ಂತೇಳ್ತ್ ಗೊತ್ತೋ? ಬಾಳಕ್ಕ ಒಳ್ಳ ರಾಜಕುಮಾರಿ ಹಾಂಗುಟ್ಟು. ಅವ್ಳಿಗೆ ಎಂಜಿನೀಯರ್ ಓದ್ಸಿ. ಆ ಮೇಲೆ ಅವಳ್ನ ಹಾರ್ಸಿಕಂಡ್ ಅಮೆರಿಕಕೆ ಹಾರಿ ಬುಟ್ನೆ ಅಂತೇಳ್ತ್. ನೋಡಿಕೂ ಲಾಯ್ಕುಟ್ಟು. ಮನೆನೂ ಪೊರ್ಲುಟ್ಟು. ಅಲ್ಲಿ ತಪಸ್ವಿನಿ ಇಲ್ಲಿಗಿಂತ್ಲೂ ಅಗಲಾಗಿ ಉಟ್ಟು. ಕಾನದ ಮನೆಂತೇಳ್ದ ಮೇಲೆ ಹಣಕ್ಕೇನೂ ತೊಂದ್ರೆ ಇಲ್ಲೆ. ಕಜೆ ಮನೆ ಗೂಡೆಗೆ ಅಮೆರಿಕಕ್ಕೆ ಹಾರುವ ಯೋಗ.”

“ಸುಳ್ಳು ಹೇಳಿರೆ ಅದ್ ಸತ್ಯದ ತಲೆನ ಮೇಲೆ ಹೊಡ್ದಾಂಗಿರೋಕು. ಅಂವ ಗಂಡಿನ ಪಾಸಾಡಿ. ನೀನ್ ಹೆಣ್ಣ್‌ನ ಕುರುಂಟು. ಪಾಸಾಡಿಗೆ ಯಾರ್ ಜೊತೆ ಹೇಳ್? ಕುರುಂಟು. ನಿನ್ನೆ ಇಲ್ಲಿ ಅಂವ ನಿನ್ನನ್ ನೋಡ್ತಿದ್ದದರ್ನ ಗಮನಿಸಿಯೊಳೆ. ಜೇಪ್ಲಿ ಎದ್‌ರ್ ಬದರ್ ಕುದ್ದ್‌ಕಂಡ್ ಕಾನದ ಮನೆಗೆ ಹೋದೋವು ನೀವು. ಅವ್ನ ಮನೆಲಿ ಒಂದು ರಾತ್ರಿ ಕಳ್ದಳ. ನೀನೀಗ ಹೆಚ್ಚ್‌ಕಡ್ಮೆ ಕಾನದ ಮನೆನ ಸೊಸೆಯಾಗೊಳ. ಕುರೆ ಮೊಸ್ರ್ ತಿಂದ್ ಆಡಿನ ಮೂತಿಗೆ ಒರ್ಸುದು ಬೇಡ.”

"ಸಾಕ್ ಸಾಕ್ ನಿನ್ನ ವರ್ಣನೆ. ನಾನ್ಯಾಕೆ ಸುಳ್ಳು ಹೇಳ್ಲಿ. ಜೀಪ್ಲಿ ಅವನೆದ್‌ರ್ ನಾನ್ ಕುದ್ದದ್ ನಿಜ. ಆದ್ರೆ ನಾವ್ ಮಾತಾಡ್ದ್ ನಿನ್ನ ಬಗ್ಗೆನೇ. ನೀನ್ ಸಯನ್ಸ್ ಓದುತ್ತೋಳಲ್ಲ? ಅದ್ಕೆ ಅಂವ ತುಂಬಾ ಕುಸಿ ಪಟ್ಟತ್. ನಿನ್ನನ್ ಡೀಸೆಂಟ್ ಡಿಗ್ನಿಫೈಡ್ ಬ್ಯೂಟಿಂತ ವರ್ಣಿಸಿತ್. ನಿನ್ನ ಒಂದೆರ್ಡ್ ಯಕ್ಷಗಾನ ವೇಷ ನೋಡಿಟುಗಡ. ಅವಂಗೆ ಒಬ್ಳ್ ಕಲಾವಿದೆನೇ ಬೇಕುಗಡ. ಈಗ ಅಂವ ಫೈನಲ್ ಇಯರ್. ಎಂ.ಟೆಕ್ ಮಾಡಿ ನಿನ್ನನ್ ಮದ್ವೆಯಾಗಿ ಅಮೆರಿಕಕ್ಕೆ ಹಾರ್ದ್‌ದಗಡ. ನಿನ್ನ ಎಂಜಿನಿಯರಿಂಗ್ ಮುಗ್ದಮೇಲೆ ಅಮೇರಿಕಕ್ಕೆ ಕರ್ಸಿಕಂಡದೆ ಗಡ. ಕುಲೆ ಮದ್ವೆ ನಡ್ದ ಗಳ್ಗೆ ಲಾಯ್ಕುಟ್ಟು." ಬಾಳಕ್ಕ ಗಂಬೀರ ದನಿಲಿ ಹೇಳ್ತ್,

"ಕುಲೆ ಮದ್ವೆಗೆ ಆ ಕುಟುಂಬ ನಾವ್ಗೆ ಸರಿ ಹೋತ್. ನಿಜದ ಮೊದ್ವೆಗೆ ಅದ್ ಸರಿ ಆದೆನೋ? ಅವು ಎಲ್ಲಿ ನಾವು ಎಲ್ಲಿ? ಅವ್ರ ಹತ್ರ ಎರ್ಡ್ ಜೀಪು, ಒಂದು ಕಾರ್ ಎಲ್ಲ ಉಟ್ಟು, ನಮ್ಮಲ್ಲಿ ಎಂತದುಟ್ಟು? ನಮ್ಮ ಜನ್ಮಲಿ ನಾವು ಒಂದು ಕಾರೋ, ಜೀಪೊ ತೆಗೆಕುಟ್ಟೊ? ಶ್ರೀಮಂತರ ಮನೆಗೆ ನಮ್ಮಂತವು ಸೊಸೆಯಾಗಿ ಹೋದರೆ ಯಾಗೋಳು ಹಂಗಿಸಿವೆಂತ ನಾನ್ ಓದ್ಯೋಳೆ. ಮತ್ತೆ ಅಂವ ನನ್ನ ಬದಲ್ ಹೆಚ್ಚ್ ನೋಡ್ತಿದ್ದದ್ ನಿನ್ನ. ಅಂತವನೊಟ್ಟಿಗೆ ಮೊದ್ವೆ ಆದರೆ ನಾನ್ ಸುಖವಾಗಿರುವೆನೋ?"

"ನೋಡ್ದ ಮಾತ್ರಕ್ಕೆ ನಾನೇನ್ ಬಸ್ರ್ ಆಗಿಬುಟ್ವೆನೋ? ಕಣ್ಣ್ ಇರ್ದು ಯಾಕೆ? ನೋಡಿಕೆ ಅಲ್ಲಾ? ಅದೆಲ್ಲಾ ತಪ್ಪೂಂತ ಹೇಳಿಕಾದೆನೋ? ಒಟ್ಟಾರೆ ನನ್ನ ವಿಶ್ವಾಸಕ್ಕೆ ತಕಂಡ್ ನಿನ್ನ ಪಡೆವ ಪ್ರಯತ್ನ ಅವಂದ್."

ಬಾಳಕ್ಕ ಮತ್ತೆ ಮಾತಾಡ್‌ತ್ಲೆ. ಕತ್ತಲೆಗೆ ಉಂಡಾದ ಮೇಲೆ ಚಾವಡಿಲಿ ಇಬ್ಬರೇ ಮಲ್ಗಿರಿಕಾಕನ ಕೇಳ್ತ್,

"ಅಂವ ಹಾಂಗೆ ಹೇಳ್ದ್ ನಿಜನಾ ಅಕ್ಕಾ?"

ಅವಂತೇಳಿರೆ ಯಾರ್‌ಂತ ಪಕ್ಕನೆ ಅಮ್ಮಣ್ಣಿಗೆ ಗೊತ್ತಾತ್ಲೆ. ಬೊಳ್ಳಿಗೆನ ಮಾತ್‌ಕತೆ ನೆನ್ಪಾಗಿ ಅವ್ಳಿಗೆ ನಗೆ ಬಾತ್. ಈಗ ಹಾಂಗೆ ಕೇಳೋಕ್ಕುಂತಾದರೆ ಬಾಳಕ್ಕ ನಾನ್ ಹೇಳ್ದದ್ರ್ನ ಪೂರ್ತಿ ನಂಬಿ ಬುಟ್ಟುಟು. ಅಮ್ಮಣ್ಣಿ ಈಗ ಬೊಳ್ಳಿಗೆ ಜೀಪೇರ್ವವರೇಗಿನ ಎಲ್ಲಾ ಮಾತ್‌ಕತೆಗಳ್ನ ಬಾಳಕ್ಕಂಗೆ ಹೇಳ್ತ್. ಎಲ್ಲ ಕೇಳಿಕಂಡ ಮೇಲೆ ಬಾಳಕ್ಕ ಹೇಳ್ತ್,

"ನೀನ್ ಸರಿಯಾದ್ದನ್ನೇ ಮಾಡ್ದೆ. ನಾನ್ ಅವನ ದುಡ್ಡಿಗೆ, ಡಿಗ್ರಿಗೆ ಹುಚ್ಚು ಕಟ್ಟುವವಳ್‌ಂತ ಅಂವ ಗ್ಯಾನ ಮಾಡಿರೋಕು. ಅವಂಗಿಂತ ಅಷ್ಟಮಂಗಲದ ಮಾಣಿಗಳೇ ವಾಸಿ"

ಒಂದು ಕ್ಷಣ ಅಮ್ಮಣ್ಣಿನ ಎದೆ ಬಡಿತ ನಿಂತಂಗಾತ್.

"ಹಾಂಗೆ ನೀನ್ಯಾಕೆ ಹೇಳ್ತಿರ್ದು? ಅವು ನಮ್ಮನ್ನ್ ನೋಡ್ತಿದ್ದ್‌ದರ್ಲಿ ವಿಶೇಷ ಏನುಟ್ಟು? ಅದಕ್ಕೆಲ್ಲಾ ಪ್ರಾಯ ಕಾರಣ. ಅವು ಬೇರೇನೂ ಮಾಡ್ತಿಲ್ಲೆಲ್ಲ? ಇಂವ ಜಾತಿ ಹೆಸ್ರ್‌ಲ್ಲಿ ಗೂಡೆಗಳ ಮೇಲೆ ಹಕ್ಕ್ ಚಲಾಯ್ಸಕ್‌ಂತ ತಿಳ್ಕಂಡುಟ್ಟು. ಎಷ್ಟ್ ಸೊಕ್ಕು ಅವಂಗೆ?"

ಅಮ್ಮಣ್ಣಿ ಹಾಯಾಗಿ ಉಸಿರಾಡ್ತ್. ಹಂಞ ಹೊತ್ತಿ ಗಾಡ ನಿದ್ದೆ ಬಾತ್.

ಮಾರ್ನೆ ದಿನ ಅಮ್ಮಣ್ಣಿ ಬಾಳಕ್ಕನೊಟ್ಟಿಗೆ ಜೂನಿಯರ್ ಕಾಲೇಜಿಗೆ ಹೋತ್. ಅಲ್ಲಿ ಆಪೀಸ್ ಸುಪರಿಂಟೆಂಡೆಂಟ್ ಹೇಳ್ತ್.

"ನಿನ್ನ ರಿಸಲ್ಟ್ ಬಂದುಟು. ನೀನ್ ಸಯನ್ಸಿಂದ ಆರ್ಟ್ಸ್‌ಗೆ ಬದಲಾಯ್ಸಿಕಂಡದೆ ಒಳ್ಳೆದಾತ್. ಸರಾಸರಿ ಮಾರ್ಕ್ ಸುಮಾರ್ ಎಪ್ಪತ್ತರಷ್ಟ್ ಉಟ್ಟು. ನೀನ್ ದೊಡ್ಡ ಕಾಲೇಜಿಗೆ ಸೇರಿ ಬಿ.ಎ ಮಾಡ್. ಈ ಅರ್ಜಿ ಪಾರ್ಮ್‌ನ ಬರ್ತಿ ಮಾಡಿ ಪ್ರಿನ್ಸಿಪಾಲರ್‌ಂದ ಸಹಿ ಹಾಕ್ಸಿಕಂಡ್ ಬಂದರೆ ಮಾರ್ಕ್ಸ್‌ಕಾರ್ಡ್, ಕಾಂಡಕ್ಟ್ ಮತ್ತು ಟ್ರಾನ್ಸ್‌ಪರ್ ಸರ್ಟಿಪಿಕೇಟ್ ಕೊಟ್ಟನೆ." ಪ್ರಿನ್ಸಿಪಾಲ್ರಿಗೆ ಅವಳ ಮೋರೆ ಕಂಡ ನೆನ್ಪಿತ್ತೆ. ಹೆಸ್ರ್ ಹೇಳಿಕಾಕನ ಗೊತ್ತಾಗಿ ತಲೆ ಆಡ್ಸಿದೊ.

ನೀನ್ ಬಾಗವತಿಕೆ ಮಾಡಿಯಾಂತ ಮೊನ್ನೆ ಗೊತ್ತಾತ್. ನಾವ್ ರಾಜ್ಯೋತ್ಸವನ ನವಂಬರ ಅಕೇರಿಗೆ ಆಚರಿಸಿವೆ. ಒಬ್ಬ ಮಾಸ್ಟ್ರಿಗೆ ಮತ್ತು ಸಾಹಿತಿಗಳಿಗೆ ಸನ್ಮಾನ ಇಸಿಕಂಡೊಳೊ. ಮಾಸ್ಟ್ರ ನಮ್ಮ ಕಾಲೇಜಿನ ರಾಜ್ಯಶಾಸ್ತ್ರದ ಮಾಸ್ಟ್ರ. ಸಾಹಿತಿಗ ದೊಡ್ಡ ಕಾಲೇಜಿನ ಇತಿಹಾಸದ ಮಾಸ್ಟ್ರ. ರಾಜ್ಯಶಾಸ್ತ್ರದ ಮಾಸ್ಟ್ರಿಗೆ ಸನ್ಮಾನ ಮಾಡಿಯೇ ಮಾಡಕೂಂತ ಶಾಸಕರ್ ಮತ್ತು ಸಂಸದರ್ ಹೇಳಿಯೊಳೊ. ಅವು ಹೇಳ್ದಮೇಲೆ ನಾವು ನಿರಾಕರಿಸುವ ಹಾಂಗಿಲ್ಲೆ. ಇತಿಹಾಸದ ಮಾಸ್ಟ್ರ ನೂರರಷ್ಟ್ ಪುಸ್ತಕ ಬರ್ದೊಳೊಗಡ. ನಂಗೆ ಒಂದು ಪುಸ್ತಕನೂ ಓದಿಕೆ ಪುರ್ಸೊತ್ತ್ ಆತ್ಲೆ. ಅವು ಅಷ್ಟೊಂದು ಪುಸ್ತಕ ಹೇಂಗೆ ಬರ್ದನೋ? ಇರ್ಲಿ. ಇತಿಹಾಸದ ಮಾಸ್ಟ್ರ್‌ಗೆ ಸನ್ಮಾನ ಆಕೂಂತ ನಮ್ಮ ಮಕ್ಕಳ್ದ್ ಹಟ. ಇನ್ನ್ ಬೇಡಂತೇಳಿರೆ ಮುಷ್ಕರ ಮಾಡಿವೆ."

"ಸರಿ ಸರ್. ಇದಕ್ಕೊಂದು ಸಹಿ ಹಾಕಿಬುಡಿ. ನಂಗೆ ಮನೆಗೆ ಬೇಗ ಹೋಕು."

"ನಿಲ್ಲಮ್ಮಾ, ಈಗ ಮುಖ್ಯ ವಿಷಯಕ್ಕೆ ಬನ್ನೆ. ಅದ್ಯಾರೋ ಕೇರಳ ಗಡಿ

ಪಕ್ಕಲಿ ಮಾಲಿಂಗ ಮದ್ಲೆಗಾರ್ಂತ ಒಬ್ಬ ಒಳೋಗಡ. ಅವು ಯಕ್ಷಗಾನ ಹೇಳಿಕೊಟ್ಟವೆಂತ ಯಾರೋ ಹೇಳ್ದೊ. ಸ್ಟಾಪಿನವು ಹಿಂಬೊತ್ತು ಆರ್ ಗಂಟೆಂದ ಏಳರವರೇಗೆ ಯಕ್ಷಗಾನ ಇಸಿಕೊಂಬುದೂಂತ ತೀರ್ಮಾನಿಸಿಯೊಳೊ. ಮತ್ತೆ ರಾಜ್ಯೋತ್ಸವ ಪ್ರಶಸ್ತಿ ಕಾರ್ಯಕ್ರಮ ಮಾಡೊಮೊಂತ ಅಬಿಪ್ರಾಯ. ಶಾಸಕರಿಗೆ ಮತ್ತು ಸಂಸದರಿಗೆ ಬಿಡುವು ಸಿಕ್ಕುದು ಹಿಂಬೊತ್ತು ಏಳಕ್ಕೆ ಗಡ. ಮತ್ತೇನ್ ಮಾಡ್ದು? ಸನ್ಮಾನ ಆಗಿ ಊಟ ಉಟ್ಟು. ಯಕ್ಷಗಾನಕ್ಕೆ ಬಾಗವತಳಾಗಿ ನಿನ್ನನ್ನೇ ಕರೆಕುಂತ ಮಾಲಿಂಗನವು ಹೇಳಿಯೊಳೊ. ತಾರೀಕ್ ನೆನ್ಪುಟ್ಟಲ್ಲಾ? ನಾವ್ಗೆ ಕಾಲೇಜ್ ಡೇಗೆ ಯಕ್ಷಗಾನ ಮಾಡಿಕಾದುಲೆ. ಈಗ ನಿಂಗೊಂದು ಅವಕಾಶ. ತಪ್ಪ್‌ಸ್‌ಬಡ ಬಲಾ?"

"ಆತ್ ಸರ್ ಬನ್ನೆ. ನಾನ್ ಓದಿದ ಕಾಲೇಜ್ಂತ ಆದಮೇಲೆ ಬಾರದಿದ್ದರಾದೆನೋ? ಆದರೆ ಸರ್, ಸನ್ಮಾನ ಕಾರ್ಯಕ್ರಮ ಸುರೂಗೆ ಆಗಲಿ. ಅದಾಗಿ ಯಕ್ಷಗಾನ ಮಾಡಿಕೆ ಲಾಯ್ಕ."

"ಅದ್ ನಂಗೆ ಗೊತ್ತಮ್ಮಾ. ಆದ್ರೆ ಶಾಸಕರ್ ಮತ್ತು ಸಂಸದರ್ ಬಾದೇ ರಾತ್ರಿ ಏಳಕ್ಕೆ. ಸನ್ಮಾನ ಮುಗ್ದ ಕೂಡ್ಲೆ ಊಟಾಕು. ಇಬ್ಬರಿಗೂ ಬೇರೆಲ್ಲಿಗೋ ಹೋಕೆ ಉಟ್ಟುಗಡ. ಊಟ ಮಾಡಿಕಾಕನ ಯಕ್ಷಗಾನ ಯಾರ್ ನೋಡ್ವೆ? ರಾಜ್ಯೋತ್ಸವಂತೇಳ್ದ ಮೇಲೆ ಸಿನೇಮಾ ಕ್ಯಾಸೆಟ್ಟ್ ಹಾಕಿ ಕೊಳಕು ಕುಂಡೆಗಳ್ನ ಅಲ್ಲಾಡ್ಸಿರೆ ಲಾಯ್ಕುಟ್ಟೋ? ಕನ್ನಡ ಬಾಸೆನ ಉಳ್ಸುವ ಶಕ್ತಿ ಇರುವ ಕಲೆಂತೇಳಿರೆ ಯಕ್ಷಗಾನ ಮಾತ್ರಂತ ಕಂಬಾರ ಎಂಬ ಕವಿಗ ಎಲ್ಲೋ ಹೇಳ್ದರ್ನ ಪೇಪರ್ಲಿ ಓದ್ಯೊಳೆ. ಬರೀ ಒಂದು ಗಂಟೆ. ಇನ್ನ್ ಮಾತ್‌ಬೇಡ. ನಾಡ್ದ್ ಸಮಯಕ್ಕೆ ಸರಿಯಾಗಿ ಬಂದ್‌ಬುಡ್.

ಅವ್ಳ ಮನೆಗೆ ವಾಪಾಸಾಕನ ಅಪ್ಪ ಮನೆಲಿತ್ತ್. ಅವ್ಳ ಮಾರ್ಕ್ಸ್ ಕಾರ್ಡ್‌ನ ಅಪ್ಪಂಗೆ ತೋರಿಸ್ತ್.

"ನಾನ್ ಸಯನ್ಸ್ ತಕಂಡ್ ಸೋತಿದ್ದೆ. ಈಗ ಆರ್ಟ್ಸ್ ತಕಂಡ್ ಪ್ರೈವೇಟಾಗಿ ಕಟ್ಟಿ ಎಪ್ಪತರಷ್ಟ್ ಮಾರ್ಕ್ ತಕಂಡ್ ಪಾಸಾಗಳೆ. ನಾನಿನ್ನ್ ಬಿ.ಎ. ಮಾಡಕೊ ಅಪ್ಪ?"

ಅಪ್ಪನ ಹಣೆಲಿ ನೆರಿಗೆ ಮೂಡ್ತ್.

"ತುಂಬಾ ಸೋತು ಹೋಗಳೆ ಅಮ್ಮಣ್ಣಿ. ಬ್ರಹ್ಮಕಲಶಕ್ಕೆ ಮೂರು ಲಕ್ಷ, ಕುಲೆ ಮೊದುವೆಗೆ ಒಂದು ಲಕ್ಷ ಕೈ ಬುಟ್ಟತ್. ಒಂದು ಲಕ್ಷ ನಮ್ಮದೇ ಇತ್ತ್. ನಿನ್ನ ಚಿಕ್ಕಪ್ಪ ಒಂದು ಲಕ್ಷ ಕೊಟ್ಟತ್. ಇನ್ನೆರಡ್ ಲಕ್ಷ ಅವಳ್ಂದ ಕೇಳಿ ತಂದದ್. ಅವಳ

ಅಣ್ಣಂದಿರ್ ಕೊಟ್ಟ ಹಣ ಅದ್. ಬಡ್ಡಿ ಸೇರ್ಸಿ ಅದರ ಕೊಡೊಕು. ನಿಜ ಹೇಳ್ವುದ್ರಾದರೆ ನಿಂಗೊಂದು ಒಳ್ಳ ಡ್ರೆಸ್ ಹೊಲ್ಸಿಕೂ ಕೈಲಿ ಕಾಸ್ ಇಲ್ಲೆಂತಾಗುಟು. ಡೊನೇಶನ್, ಪಾಸ್, ಶಾಲೆ ಪೀಸ್, ಡ್ರೆಸ್, ಪುಸ್ತಕ ಟೂರ್‌ಂತ ವರ್ಷಕ್ಕೆ ಏನಿಲ್ಲೆಂತೇಳಿರೂ ಇಪ್ಪತ್ತೈದ್ ಸಾವಿರಾದ್ರೂ ಬೇಕು. ಎಲ್ಲಿಂದ ತರ್ಲಿ ಹೇಳ್? ಈ ವರ್ಷ ನಿನ್ನ ಕಾಲೇಜಿಗೆ ಕಳ್ಸಿಕೆ ಸಾದ್ಯನೇ ಇಲ್ಲೆ ಅವ್ವ"

ಹಿಂದೊಮ್ಮೆ ಅಪ್ಪ ಹೆಣ್ಮಕ್ಕ ಓದಿ ಏನಾಕುಂತ ಕೇಳಿತ್ತ್. ಈಗ ಈ ವರ್ಷದ ಮಟ್ಟಿಗೆ ಆದುಲೆಂತ ಹೇಳ್ತುಟ್ಟು. ಅಷ್ಟರ ಮಟ್ಟಿಗಾದ್ರೂ ಬದಲಾಗುಟ್ಟು. ಇನ್ನೂ ಆರೇಳ್ ತಿಂಗ ಉಟ್ಟು. ಅಷ್ರಲ್ಲಿ ಏನೇನ್ ಆದೆನೋ? ತಿಂಗಳಿಗೆ ನಾಲ್ಕೈದ್ ಯಕ್ಷಗಾನ ಕಾರ್ಯಕ್ರಮ ಸಿಕ್ಕರೆ ಒಂದಷ್ಟ್ ನಾನೇ ದುಡ್ಡು ಸಂಗ್ರಹಿಸಕ್. ಹಂಜ ಚಿಕ್ಕಪ್ಪನೊಟ್ಟಿಗೆ ಕೇಳಕ್. ಮತ್ತೆ ಅದೃಷ್ಟ ಹೇಂಗುಟ್ಟೋ ಹಾಂಗೆ ಆದೆಂತ ಹೇಳಿಕಣ್ತ್.

ಮಾಲಿಂಗ ಮಾವನ ನಿರ್ದೇಶನದ ಒಂದು ಗಂಟೆ ಯಕ್ಷಗಾನ ಲಾಯ್ಕಾತ್ಲೆ. ಇಬ್ಬರ್ ಮಾಸ್ಟ್ರಗಳ್ನ ಬುಟ್ಟರೆ ಉಳ್ದವುಕೆ ಸರಿಯಾಗಿ ಕುಣಿಯಕೆ ಬರ್ತ್ಲೆ. ಅವು ಮಾಲಿಂಗ ಮಾವ ಬರ್ದ್‌ಕೊಟ್ಟ ಸಂಬಾಷಣೆನ ಬಾಯಿಪಾಟ ಮಾಡಿ ಒಪ್ಪಿಸಿದ್ದೊ. ಅದರ್ಲಿ ಸಹಜತೆ ಇತ್ಲೆ. ವಾದ ಪ್ರತಿವಾದಂತೂ ಇತ್ತೇಲೆ. ಯಕ್ಷಗಾನದುದ್ದಕ್ಕೂ ಮಕ್ಕ ಸಿಳ್ಳೆ, ಕೈ ಚಪ್ಪಾಳೆ, ಕೇಕೆ ಹಾಕ್ತಲೇ ಇದ್ದೊ. ಅದ್ ತಮ್ಮ ಮಾಸ್ಟ್ರಗ ವೇದಿಕೆ ಏರಿ ಅರ್ತ ಹೇಳ್ದಕ್ಕಿರುದುಂತ ಅವಳ್ ಗ್ರಹಿಸಿತ್.

ಸರಿಯಾಗಿ ಏಳ್ ಗಂಟೆಗೆ ಯಕ್ಷಗಾನ ಮುಕ್ತ್. ಹಂಞ ಹೊತ್ತಿಗೆ ಶಾಸಕರ್, ಸಂಸದರ್ ಬಂದೊ. ರಾಜ್ಯಶಾಸ್ತ್ರದ ಮಾಸ್ಟ್ರಗ ಅವ್ಕಿಬ್ಬರಿಗೆ ಚುನಾವಣೆಲಿ ಸಹಾಯ ಮಾಡಿದ್ದೊ ಗಡ. ಅವರ ಪಕ್ಷದ ವಿದ್ಯಾರ್ಥಿ ಪರಿಷತ್ತ್‌ನ ಕಾಲೇಜಿಲಿ ಬೆಳಿಸಿದ್ದೊ ಗಡ. ಅದಕ್ಕಾಗಿ ಅವ್ಕೆ ಸನ್ಮಾನ. ಮಾಸ್ಟ್ರಗ ರಾಜಕೀಯ ಪಕ್ಷಲಿ ಇರಿಕಾಗದ್‌ಂತ ತಿಳ್ಕಂಡ ವಿದ್ಯಾರ್ತಿಗಳ್ದ್ ಈ ಸನ್ಮಾನಕ್ಕೆ ವಿರೋದ ಗಡ. ಹೀಂಗೆ ಮಕ್ಕಲ್ಲಿ ಎರ್ಡ್ ಗುಂಪಾಗಿ ಗಲಾಟೆ ಆವ ಚಾನ್ಸ್ ಉಟ್ಟುತ ಮಾಲಿಂಗ ಮಾವ ಅಮ್ಮಣ್ಣಿಗೆ ಹೇಳ್ದೊ.

ಸುರೂಗೆ ರಾಜ್ಯಶಾಸ್ತ್ರದ ಮಾಸ್ಟ್ರಿಗೆ ಸನ್ಮಾನ ಆತ್. ಆಗ ಸಭೆ ಕಡೆಂದ ಪ್ರಾಣಿಗಳ ಹಕ್ಕಿಗಳ ದನಿ ಹೊರ್ಟತ್. "ರಾಜ್ಯಶಾಸ್ತ್ರದ ಮಾಸ್ಟ್ರ ಯೋಗ್ಯತೆನ ನಮ್ಮ ಜನ ತುಂಬಾ ತಡಾಗಿ ಗುರ್ತಿಸಿವೆ. ನಾನ್ ರಾಜಕೀಯ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆಗೆ ನಂಗೆ ಎಂದೋ ಸನ್ಮಾನ ಆಕಾಗಿತ್ತ್. ತುಂಬಾ ತಡಾದ್ರೂ ಸನ್ಮಾನ ಮಾಡಿಕೆ ನೀವ್ಗೆ ಬುದ್ದಿ ಬಂದದಕ್ಕೆ ನಾನ್ ಕುಸಿಪಟ್ಟನೆ" ಅಂತ ಹೇಳಿ ಕುದ್ದೊ. ಅವರ ಬಾಷಣ ಮುಗ್ದಂಗೆ ಸಬೆಂದ ದಿಕ್ಕಾರ ಕೇಳಿ ಬಾತ್.

"ಸರಿಯಾಗಿ ತರಗತಿಗಳ್ನ ತಕಣದಿದ್ದ ಮಾಸ್ಟ್ರಿಗೆ ದಿಕ್ಕಾರ. ಗೈಡ್‌ಂದ ನೋಟ್ಸ್ ಕೊಟ್ಟ ಮಾಸ್ಟ್ರಿಗೆ ದಿಕ್ಕಾರ. ರಾಜಕಾರಿಣಿಗಳ ಚೇಲಾ ಮಾಸ್ಟ್ರಿಗೆ ದಿಕ್ಕಾರ" ಇದರ ಕೇಳಿ ಪ್ರಾಂಶುಪಾಲರ್ ಗಾಬ್ರಿಯಾಗಿ ಮೈಕಿನ ಪಕ್ಕಕೆ ಬಂದ್ ಕೈ ಮುಗ್ದೋ.

"ಇಂದ್ ಕನ್ನಡ ರಾಜ್ಯೋತ್ಸವ. ನೀವು ಗಲಾಟೆ ಮಾಡಿಕಾಗದ್" ಅಂತ ಹೇಳ್ದೊ. ಆಗ ಸಬೆಂದ ಪ್ರಶ್ನೆ ಒಂದು ಕೇಳಿ ಬಾತ್.

"ಕನ್ನಡಕ್ಕಾಗಿ ಈ ಮಾಸ್ಟ್ರ ಏನ್ ಮಾಡಿಯೊಳೊ?" ಪ್ರಾಂಶುಪಾಲ್ರಿಗೆ ಏನ್ ಹೇಳುಕುಂತಲೇ ಗೊತ್ತಾತ್ಲೆ. ಅವು ಮತ್ತೊಮ್ಮೆ ಕೈ ಮುಗ್ದ್ ಹೇಳ್ದೊ,

"ನಿಮ್ಮ ಅಸಮಾದಾನ ಏನೇ ಇರ್ಲಿ ಅದರ ಮತ್ತೆ ಸರಿ ಮಾಡನೋ. ಈಗ ಇನ್ನೊಂದು ಸನ್ಮಾನ ಉಟ್ಟು. ಸನ್ಮಾನಿತರ್ ನಮ್ಮ ಕಾಲೇಜಿನವಲ್ಲ. ಅವು ನಮ್ಮ ನೆಂಟ್ರ್, ಅವರೆದ್‌ರ್ ನಮ್ಮ ಕಾಲೇಜಿನ ಮರ್ಯಾದೆ ಹರಾಜ್ ಹಾಕಿಕಾಗದ್"

ಸಬೆ ಶಾಂತ ಆತ್. ಸನ್ಮಾನಕ್ಕೆ ಮುಂದೆ ಇತಿಹಾಸದ ಮಾಸ್ಟ್ರ ಪರಿಚಯ ಮಾಡ್ದೋ. ಅಮ್ಮಣ್ಣಿ ಅವು ಬರ್ದ ಎರಡ್ ಪುಸ್ತಕಗಳ್ನ ಓದಿತ್. ಅವ್ಕೆ ಸನ್ಮಾನ ಮಾಡಿಕಾಕನ ಬಾರೀ ಕೈ ಚಪ್ಪಾಳೆ ತಟ್ಟಿದೊ.

"ಸನ್ಮಾನಗ ನಮ್ಮ ಅಹಂಕಾರನ ಹೆಚ್ಚಿಸಿದೆ. ನೋವು ಮತ್ತು ಅಪಮಾನಗ ನಮ್ಮನ್ ಕ್ರಿಯಾಶೀಲರನ್ನಾಗಿ ಮಾಡ್ದೆ. ಯಾವ ಕ್ಷೇತ್ರ ನಾವ್ಗೆ ಅನ್ನ ಕೊಟ್ಟುಟೋ ಆ ಕ್ಷೇತ್ರಕ್ಕೆ ನಮ್ಮ ಕೊಡುಗೆ ಕೊಡಕಾದ್ದ್ ನಮ್ಮ ದರ್ಮ. ನಾನ್ ಮಾಡ್ದ ಕೆಲಸನ ಸಾದನೆಂತೇಳಿ ಗುರ್ತಿಸಿದ್ ನಿಮ್ಮ ದೊಡ್ಡ ಗುಣ. ನೀವು ಅನುಮತಿ ಕೊಟ್ರೆ ಈ ಸನ್ಮಾನನ ಒಂದು ಅರ್ಳುವ ಪ್ರತಿಬೆಗೆ ನಾನ್ ಕೊಟ್ಟ್ ಪ್ರೋತ್ಸಾಹಿಸೊಕುಂತೊಳೆ. ಎಲ್ಲಿ ಆ ಬಾಗವತಿಕೆ ಮಾಡ್ದ ಗೂಡೆ? ಅವ್ಳ ವೇದಿಕೆಗೆ ಬರಕೂಂತ ಕೇಳಿಕಣೆ."

ಇತಿಹಾಸದ ಮಾಸ್ಟ್ರ ಮಾತಿಗೆ ಸಬೆ ಕೈ ಚಪ್ಪಾಳೆ ತಟ್ಟಿ ಒಪ್ಪಿಗೆ ನೀಡ್ತ್. ಅಮ್ಮಣ್ಣಿಗೆ ತುಂಬಾ ಸಂಕೋಚ ಆತ್. ಮಾಲಿಂಗ ಮಾವ ಮತ್ತು ಸತ್ಯಣ್ಣ ಅವಳ್ನ ವೇದಿಕೆ ಕಡೆಗೆ ದೂಡ್ದೋ. ಅವ್ಳಿಗೆ ನಡ್ಗ್‌ಕೆ ಬಾತ್. "ಈ ಹೆಣ್ಣ್ ಕೂಸಿಗೆ ಯಕ್ಷಗಾನಲಿ ಒಳ್ಳೆ ಬವಿಷ್ಯ ಉಟ್ಟು. ಬಾಗವತಿಕೆಗೆ ಬೇಕಾದ ಕಂಟ ಉಟ್ಟು. ನಿಂಗೆ ಒಳ್ಳೆದಾಗಲಿ ಮಗೂ." ಮಾಸ್ಟ್ರ ಶಾಲ್ನ ಅವ್ಳಿಗೆ ಹೊದ್ಸಿ ಸ್ಮರಣಿಕೆನ ಕೈಯಿಲಿಸಿದೊ.

ಅವ್ಳಿಗೆ ಅದ್ ಜೀವನಲಿ ಸುರೂನ ಸನ್ಮಾನ. ಅಂತ ಗಟನೆ ಅಂದ್ ನಡ್‌ದ್ಬುಡುದೂಂತ ಅವ್ಳ ಕನ್ಸಿಲಿ ಕೂಡ ಊಹಿಸಿತ್ಲೆ. ಅವ್ಳ ಆ ಮಾಸ್ಟ್ರಿಗೆ ಸಾಷ್ಟಾಂಗ ಬಿದ್ದ್ ಕಾಲ್ ಹಿಡ್ದ್ ಆಶೀರ್ವಾದ ಬೇಡಿಕಣ್ತ್. ಶಾಲ್‌ಂದ ಕಣ್ಣೀರ್ ಉಜ್ಜಿಕಂಡ್ ವೇದಿಕೆಂದ ಕೆಳಗಿಳ್ತ್.

ಊಟ ಮುಗ್ಸಿ ಕೈ ತೊಳೆಕನ ಅದೇ ಮಾಸ್ಟ್ರ ಎದ್‌ರಿಗೆ ಸಿಕ್ಕಿದೊ.

"ಈ ವರ್ಷ ನಮ್ಮ ಕಾಲೇಜಿಗೆ ಸೇರಿಬುಡು ಮಗೂ. ಅಲ್ಲೊಂದು ಯಕ್ಷಗಾನ ಕೂಟ ಉಟ್ಟು. ನಿನ್ನ ವಿದ್ಯೆ ಅಲ್ಲಿ ಬೆಳ್ಗಿದೆ." ಅವ್ಳ ಮಾತಾಡ್ತ್‌ಲೆ. ಅದರ ನೋಡಿ ಅವು ಕೇಳ್ಬೊ,

"ಏನ್ ಕಾಲೇಜಿಗೆ ಬಾಕೆ ಇಷ್ಟ ಇಲ್ಲೆನೋ?"

"ಹಾಂಗಲ್ಲ ಸರ್, ಮನೆಲಿ ತೀರಾ ಇಕ್ಕಟ್ಟಿನ ಪರಿಸ್ಥಿತಿ ಉಟ್ಟು. ಈ ವರ್ಷ ಕಾಲೇಜಿಗೆ ಕಳ್ಸಿಕೆ ಆಕೇಲೆ ಅಂತ ಅಪ್ಪ ಹೇಳ್ಯೊಳೊ."

ಮಾಸ್ಟ್ರ ಒಂದು ಗಳಿಗೆ ಚಿಂತೆಗೆ ಒಳಗಾದ ಹಾಂಗೆ ಕಂಡತ್.

"ಹೆದ್ರ್‌ಬೇಡ. ನಮ್ಮದೊಂದು ಸಂಗಟನೆ ಉಟ್ಟು. ಅದರ್‌ಂದ ಹಂಞ ಹಣ ಕೊಡ್ಸಕ್. ಮತ್ತೆ ಒಂದಿಬ್ಬರ್ ದಾನಿಗಳೊ. ನಿಂಗೆ ಹಣಕ್ಕೆ ತೊಂದರೆ ಆಕಿಲ್ಲೆ. ಪ್ರತಿಬಾವಂತರ್ ಮೂಲೆ ಪಾಲಾಕೆ ಆಗದ್"

ಅಮ್ಮಣ್ಣಿ ಅದೇ ವರ್ಷ ಕಾಲೇಜಿಗೆ ಸೇರ್ತ್. ಬಾಳಕ್ಕ ಸಯನ್ಸ್ ತಕಂಡಿತ್ತ್. ಚಿಕ್ಕಪ್ಪ ಮತ್ತು ಪೋಲೀಸ್ ಮಾವ ಸಹಾಯ ಮಾಡ್ದೊ. ಕಡ್ಮೆ ಆದ ಹಣನ ಇತಿಹಾಸದ ಮಾಸ್ಟ್ರ ಬರ್ತಿ ಮಾಡ್ದೊ.

"ನಾನ್ ತುಂಬಾ ಕಷ್ಟಪಟ್ಟ್ ಓದಿದಂವ. ಯಾರ್‍ಯಾರ್‌ಂದ್ಲೋ ಸಹಾಯ ಪಡ್ದೊಳೆ. ಈಗ ನನ್ನಿಂದ ಆಗುವ ಸಹಾಯ ಕೊಡುತ್ತೊಳೆ. ಕಷ್ಟಲಿರುವವ್ಕೆ ಸಿಕ್ಕುವ ಒಂದು ಸಣ್ಣ ಸಹಾಯ ಅವರ ಮನೋಬಲನ ಹೆಚ್ಚಿಸಿದೆ. ನೊಂದವರ ಮೋರೆಲಿ ಒಂದು ನಗೆನ ಬರ್ಸುದು ನಮ್ಮ ಜೀವನದ ಗುರಿಯಾಗಿರೋಕು."

ಅವ್ಳ ಕಾಲೇಜ್ ಜೀವನದ ಆರಂಬ ಲಾಯ್ಕಾಗಿತ್ತ್. ಇತಿಹಾಸದ ಮಾಸ್ಟ್ರ ನ್ಯೂಸ್, ಜೋಕ್ಸ್ ಮತ್ತು ಚಿಂತನೆಗಳ್ನ ತರಗತಿಲಿ ಓದಿಸ್‌ತಿದ್ದೊ. ಅದ್ ಏಕತಾನತೆ ಬರದ ಹಾಂಗೆ ಮಾಡ್ತಿತ್ತ್.

ಮಕ್ಕ ಜಗ್‌ಲ್‌ಲಿ ಸುಮ್ಮನೆ ಸುತ್ತುತಿದ್ದರೆ ಇತಿಹಾಸದ ಮಾಸ್ಟ್ರ ಅವರ್ನ ಕೈಸನ್ನೆಂದ ಕರ್ದ್ ಬುದ್ದಿ ಹೇಳ್‌ತಿದ್ದೋ.

"ಅಲ್ಲಿ ಮೇಲೆ ಲೈಬ್ರರಿ ಉಟ್ಟು. ಅಲ್ಲಿ ಪುಸ್ತಕಗ ಒಳಲ್ಲ ಅವು ನಿಮ್ಮನೇ ಕಾಯುತ್ತೊಳೊ. ನ್ಯೂಸ್ ಪೇಪರ್ಸ್ ಎಷ್ಟ್ ಬಂದವೆಂಥ ನೋಡಿ. ಹಳ್ಳಿ ಮಕ್ಕ ಜ್ಞಾನ ಸಂಪಾದನೆಲಿ ಹಿಂದೆ ಬೀಳಿಕಾಗದ್. ನೀವು ನಿಮ್ಮ ಮನೆಗೂ ಪತ್ರಿಕೆ ತರ್ಸೊಕು. ತಿಂಗಳಿಗೆ ಎರಡಾದ್ರ್ ಹೊಸ ಪುಸ್ತಕ ತಕಂಡ್ ಓದೊಕು. ಒಳ್ಳ ಅಬ್ಯಾಸ ಇಲ್ಲದೆ ಹೋದರೆ ರಾಜಕೀಯದವು ಅವ್ಕೆ ಬೇಕಾದ ಹಾಂಗೆ ಅದಿಕಾರ ಬಳ್ಸಿಕಂಡವೆ. ವಿದ್ಯಾರ್ತಿಗ ರಾಜಕೀಯ ಸಂಗಟನೆಗಳಲ್ಲಿರ್ದು ತಪ್ಪು."

ಒಂದಿನ ಒಬ್ಬ ಮಾಸ್ಟ್ರ ತರಗತಿಗೆ ಬಾಕಾಕನ ಬಿಗುಸ್ತಿತಿ ಇತ್ತ್. ಒಬ್ಬ ಹೈದ ಜಾತಿ ಸಂಗಟನೆನ ಸದಸ್ಯರಾಗುವ ಹಾಂಗೆ ಕೇಳಿಕಂಬ ಕೈಕಾಗದ ಹಂಚ್‌ತಿತ್ತ್. ಮಾಸ್ಟ್ರ ಕಂಡವನೆ ಸುಬಗನ ಹಾಂಗೆ ಸುಮ್ಮನೆ ಕುದ್ದ್‌ಕಣ್ತ್. ಒಂದು ಕೈಕಾಗದ ಮೇಜಿನ ಮೇಲಿತ್ತ್. ಮಾಸ್ಟ್ರ ಅದನ್ನ ನೋಡ್ದೋ.

"ನಾವ್ ಚರಿತ್ರೆ ಓದುವೆ. ಆದ್ರೆ ಅದರ್‌ಂದ ಪಾಟ ಕಲ್ತವೆನೋ? ನಮ್ಮ ಜಾತಿ ಪದ್ದತಿಂದಾಗಿ ಈ ದೇಶನ ಯಾರ್‍ಯಾರೋ ಆಕ್ರಮಿಸಿಕೆ ಸಾದ್ಯ ಆತ್. ಗಜನಿ ಮಹಮ್ಮದಂತೇಳುವವ ಹದಿನೇಳ್ ಸರ್ತಿ ದಂಡ್ ತಕಂಡ್ ಬಾಕಾಕನ ನಾವೇನ್ ಮಾಡ್ತಿದ್ದೊ. ಬಜನೆ ಮಾಡ್ತಾ ಕುದ್ದಿದ್ದನೋ? ಎಲ್ಲವು ಆಗ ಒಟ್ಟಾಗಿ ಜಾಗಟೆ ತಕಂಡ್ ತಿರ್‍ಗಿ ಬಿದ್ದಿದ್ದರೆ ಅಂವ ಎರಡ್ನೆ ಸರ್ತಿ ದಂಡೆತ್ತಿ ಬಾಕೆ ಬದ್ಕಿರಿತಿತ್ಲೆ. ಬಾಬರನ ದಂಡ್ ಬಂದ್ ಎತ್ತರದ ಜಾಗೆಲಿ ಉಳ್ಕಂಡಿತ್ತ್. ಕೆಳಗೆ ಬಯ್ಲಿಲಿ ಬಾರತದ ದಂಡಿತ್ತ್. ರಾತ್ರಿ ಸಾವಿರಾರ್ ಒಲೆಗ ಹೊತ್ತ್‌ತಿದ್ದ್‌ದರ್‍ನ ಕಂಡ್ ಕಾರಣ ಕೇಳ್ತ್ ಗಡ. ಬಾರತಲಿ ಸಾವಿರಕ್ಕೂ ಹೆಚ್ಚ್ ಜಾತಿಗೊಳೊ. ಒಂದು ಜಾತಿಯವು ಬೇಯ್ಸಿದ ಅನ್ನನ ಇನ್ನೊಂದು ಜಾತಿಯವು ಉಂಬೋದುಲೆ. ಉಂಬೋದರ್‍ಲ್ಲೊ ಒಗ್ಗಟ್ಟಿಲ್ಲದೊವು ಸ್ವಾತಂತ್ರ್ಯ ಹೇಂಗೆ ರಕ್ಷಿಸಕಂಬಕೆ ಆದು? ಜಾತಿ ಮತದ ಬಲೆಲಿ ಬಿದ್ದೊವುಕೆ ಸ್ವಂತ ಯೋಜಿಸಿಕೂ ಆದುಲೆ. ದುಡ್ಡಿದ್ದವು ತಮ್ಮ ರಾಜಕೀಯ ಆಸೆನ ಪಡೆಕೆ ಜಾತಿಮತಗಳ ಸಂಗಟನೆ ಮಾಡಿಕಂಡವೆ. ಅದ್ಕೆ ಬಲಿಯಾದು? ನಮ್ಮಂತವು. ಆಚೆಂದ ಪಾಕಿಸ್ತಾನ, ಈಚೆಂದ ಚೀನಾ ಎಲ್ಲಾ ಕಡೆಗಳಲ್ಲಿ ಈ ದೇಶ ಆಕ್ರಮಣ ಬೀತಿನ ಎದ್‌ರ್‌ಸ್ತುಟ್ಟು, ನಾವೆಲ್ಲಾ ಒಗ್ಗಟ್ಟಾಗಿ ಎದ್‌ರ್‌ಸೋನೊಂತೇಳಿರೆ ಈ ಜಾತಿ ಮತಗಳ ಸಂಗಟನೆಗ ದೇಶನ ಒಳಂಗಿದೊಳಗೆ ಒಡ್ದ್ ಹಾಕುತುಟ್ಟು, ನಮ್ಮಲ್ಲಿ ಒಂದುತನ ಎಲ್ಲುಟ್ಟು? ಯಾಗ ಇತ್ತ್!? ಇತಿಹಾಸಂದ ಇನ್ನಾದ್ರ ಪಾಟ ಕಲಿನಿ."

ತರ್ಕಶಾಸ್ತ್ರದ ಮಾಸ್ಟ್ರಿಗೆ ಪಾಟಕ್ಕಿಂತ ಸಂಶೋಧನೆಗಳ ಬಗ್ಗೆ ಕಲಿಯುದುಂತೇಳಿರೆ ತುಂಬಾ ಕುಸಿಂತ ಅವಳ ಸೀನಿಯರ್ ಗೂಡೆಗ ಹೇಳ್ತಿದ್ದೊ. ಅವು ಕಪಿಲಳ್ಳಿಯ ಜನಜೀವನದ ಬಗ್ಗೆ ಸಂಶೋದನೆ ನಡ್ಸಿ ಡಾಕ್ಟರೇಟ್ ಪಡ್ದಿದ್ದೊ. ಸಂಶೋದನೆ ಮಾಡುವ ಕ್ರಮಗಳ ಬಗ್ಗೆ ಅವು ಕ್ಲಾಸ್‌ಲಿ ಹೇಳ್ತಿದ್ದೊ.

"ಜನಸಾಮಾನ್ಯರ ಸಹಜ ಬದ್ಕ್‌ನ ಜಾನಪದ ಜೀವನಂತೇಳುವೆ. ನಮ್ಮ ದೇಶದ ಜನ್ರಿಗೆ ದಾಖಲೆಗಳ್ನ ಉಳ್ಸಿಕಂಬ ಗುಣ ಸುರುಂದಲೇ ಇತ್ಲೆ. ನೀವು ಸಂಶೋದನೆಗೆ ಹೊರ್‍ಟರೆ ಬರಹದ ಆದಾರಗಳೇ ಸಿಕ್ಕುದ್ಲೆ. ನಾವು ಜಾನಪದ ಕತೆ, ನಂಬಿಕೆ, ಹಾಡ್ ಇತ್ಯಾದಿಗಳ್‌ಂದ ಚರಿತ್ರೆ ಕಟ್ಟೋಕಾದೆ. ನಿಮ್ಮ ಊರಿಗೊಂದು

ಹೆಸ್ರ್ ಉಟ್ಟಲ್ಲಾ? ಆ ಹೆಸ್ರಿಗೆ ಒಂದು ಅರ್ತ ಉಟ್ಟು, ಹಾಂಗೆ ಹೆಸ್ರ್ ಬಾಕೆ ಕಾರಣನೂ ಇದ್ದದೆ. ಊರುಗಳ ಇತಿಹಾಸಲಿ ಅಲ್ಲಿನ ದೇವಸ್ತಾನಗಳಿಗೆ ಮುಖ್ಯ ಪಾತ್ರ ಇದ್ದದೆ. ದೇವಸ್ತಾನಗಳ ಇತಿಹಾಸನ ವೈದಿಕರ್ ಒಂದು ರೀತಿಲಿ ಹೇಳಿರೆ ಜಾನಪದರ್ ಬೇರೆನೋ ಕತೆ ಹೇಳುವೆ. ಎರಡರ್ನೂ ಸೇರಿಸಿ ನೀವು ಸತ್ಯನ ಹುಡ್ಕುವ ಕೆಲಸ ಮಾಡಕಾದೆ."

ತರ್ಕಶಾಸ್ತ್ರದ ಮಾಸ್ಟ್ರ ಕಾಲೇಜಿನ ಗೂಡೆಗಳ್ದೇ ಒಂದು ಯಕ್ಷತಂಡ ಕಟ್ಟಿದ್ದೊ. ಮುಸ್ಲಿಮ್ ಮತ್ತು ಕ್ರಿಶ್ಚಿಯನ್ ಗೂಡೆಗಳಿಗೂ ಯಕ್ಷಗಾನ ಕಲ್ಸಿ ರಂಗಕ್ಕೇರಿಸಿ ಸಂಪ್ರದಾಯವಾದಿಗಳ ಟೀಕೆಗೆ ಈಡಾಗಿದ್ದೊ. ಅದನ್ನೇ ಅವು ತರಗತಿಲಿ ಹೇಳ್ತಿದ್ದೊ.

"ಸಾಹಿತ್ಯ ಮತ್ತು ಕಲೆ ದೇಶನ ಒಟ್ಟುಗೂಡ್ಸುವ ಶಕ್ತಿಗ. ಅವುಗಳ್ನ ಜಾತಿ ಮತ್ತು ಲಿಂಗ ಬೇದಗಂಳ್ದ. ಅಪವಿತ್ರಗೊಳಿಸಿಕಾಗದ್. ಬಾರತಲಿರೊವು ಯಕ್ಷಗಾನ, ಬರತನಾಟ್ಯ ಇತ್ಯಾದಿ ಕಲೆಗಳ್ನ ಕಲಿಯೋಕು. ದೇಶದ ಸಂಸ್ಕೃತಿಗೆ ನಮ್ಮ ಕೊಡುಗೆ ನೀಡದೆ ಜೀವನ ಸುಮ್ಮನೆ ಕಳ್ದ್ ಹೋಕಾಗದ್. ಜಾತಿ ಸಂಗಟೆನಗಳೆಲ್ಲಾ ಸಾಂಸ್ಕೃತಿಕ ಒಕ್ಕೂಟ ಆಕು. ಅವು ಎಲ್ಲಾ ಜಾತಿಗಳ ಪ್ರತಿಬೆನ ಗುರ್ತಿಸಿ ಗೌರವಿಸುವ ದೊಡ್ಡಮನ್ಸ್ ಬೆಳ್ಸಿಕಣಕು. ಇಲ್ಲದಿದ್ರೆ ಅವ್ಗಳ ಉಪಯೋಗ ಏನ್?"

ತರಗತಿಲಿ ದೊಡ್ಡ ಮಕ್ಕಳಿಗೆ ಕೊರತೆ ಇತ್ಲೆ. ಅಂತವರ್ನ ಇತಿಹಾಸದ ಮಾಸ್ಟ್ರ ಬಾರೀ ಮರ್ಯಾದೆಂದ "ಏನ್ ಬ್ರಹಸ್ಪತಿಗಳೇ?" ಅಂತ ಕರೆತಿದ್ದೊ. ಒಮ್ಮೆ ತುಂಬಾ ಸುಲಬದ ಪ್ರಶ್ನೆಗೆ ವಿದ್ಯಾರ್ತಿಯೊಬ್ಬಂಗೆ ಉತ್ತರ ಹೇಳಿಕೆ ಆತ್ಲೆ.

"ಏನಯ್ಯಾ? ನೀನ್ ದೊಡ್ಡ ಜಾನಪದ ವಿಜ್ಞಾನಿಂತ ಊರ್ಲಿ ಹೆಸ್ರ್ ಗಳ್ಸಿಯೊಳ. ಇಸ್ಟ್ ಸಣ್ಣ ಪ್ರಶ್ನೆಗೆ ಉತ್ತರ್ಸಿಕೆ ಆದುಲೆನೋ?" ಮಕ್ಕ ಜೋಕುನ ಅರ್ತ ಆಗದೆ ಮೋರೆ ಮೋರೆ ನೋಡಿಕೊಂಡೊ.

"ಪೆಬ್ರವರಿಂದ ಮೇ ತಿಂಗಳವರೇಗೆ ಬೀಜದ ಹಣ್ಣ್‌ನ ಕಾಲಲಿ ಇಂವ ಎಷ್ಟ್ ಲಾಯಕ್ಕಾಗಿ ಕಸಾಯ ತಯಾರಿಸಿದೆ ಗೊತ್ತುಟ್ಟೋ?"

ಮಕ್ಕ ಎಲ್ಲಾ ಬಿದ್ದ್‌ಬಿದ್ದ್ ನಗಾಡ್ದೋ.

ಅಂದ್ ಅಮ್ಮಣ್ಣಿ ಮನೆಗೆ ಬಾಕನ ತೀರ್ತದ ತ್ಯಾಂಪಣ್ಣ ಅಪ್ಪನೊಟ್ಟಿಗೆ ಹರ್ಪೆ ಹೊಡಿತಿತ್ತ್. ಇನ್ನ್ ನಿಮ್ಮ ಹೆಸ್ರ್ ಬದಲ್ ಮಾಡೋಕಾದೆ. ಇನ್ನ್ ಮುಂದೆ ನೀವು ತೀರ್ತದ ತ್ಯಾಂಪಣ್ಣ ಅಲ್ಲ. ವಿಜ್ಞಾನಿ ತ್ಯಾಂಪಣ್ಣ."

ಅಂದ್ ಕ್ಲಾಸಿಲಿ ನಡ್ದ ವಿಸಯನ ಹಂಞ ರಸಸೇರ್ಸಿ ಅಮ್ಮಣ್ಣಿ ವಿವರಿಸಿತ್. ಅಪ್ಪನೊಟ್ಟಿಗೆ ತ್ಯಾಂಪಣ್ಣನೂ ನಗಾಡ್ತ್. ಅಂದ್‌ಂದ ಅವನ ವಿಜ್ಞಾನಿ ತ್ಯಾಂಪಣ್ಣಂತ್ಲೇ ಕರೆಕೆ ಸುರು ಮಾಡ್ತ್.

ಅಮ್ಮಣ್ಣಿಗೆ ಕನ್ನಡ ಮೇಡಮ್‌ನ ಪಾಟ ತುಂಬಾ ಇಷ್ಟ ಆಗ್‌ತಿತ್. ಅವರ ದೃಷ್ಟಿಕೋನನ ಅವ್ಳ ಮೆಚ್ಚಿಕಂಡಿತ್. ಅವು ಹೇಳ್ತಿದ್ದ ಕೆಲವು ಮಾತ್‌ಗ ಶಿಲಾಶಾಸನದ ಹಾಂಗೆ ಅವ್ಳ ತಲೆಲಿ ಉಳ್ಕಂಡಿತ್.

"ನಾವ್ ಬಾಕನ ಏನೂ ತಂದಿರುದಿಲ್ಲೆ. ಹೋಕಾಕನ ಏನೂ ತಕಂಡೂ ಹೋದ್ಲೆ. ನಾವ್ ಏನ್ ಗಳ್ಸಿಯೊಳೊನೋ ಅದೆಲ್ಲಾ ಇಲ್ಲಿಗೇ ಸೇರಕಾದ್ ನ್ಯಾಯ. ನಮ್ಮ ಗೂಡೆಗ ತುಂಬಾ ಓದಿ ಜ್ಞಾನವಂತರಾಕು. ನಿಮ್ಮಲ್ಲಿ ಯಾರಿಗಾದ್ರ್ ಓದಿಕೆ ಹಣದ ತೊಂದರೆ ಇದ್ರೆ ಹೇಳಿ. ನಾನ್ ಕೊಟ್ಟನೆ. ಗೂಡೆಗ ಜ್ಞಾನಿಗಾದ್ರೆ ಮಾತ್ರ ಮುಂದೆನ ಸಂತಾನದ ಗುಣಮಟ್ಟ ಹೆಚ್ಚಿಸಿಕೆ ಸಾದ್ಯ ಆದೆ. ಹುಟ್ಟು ಸಾವು ನಮ್ಮ ಕೈಲಿಟ್ಟೋ? ಇಲ್ಲೆ. ಆದ್ರೆ ಅವೆರಡರ ನಡುವಿನ ಬದ್ಕ್ ಅರ್ತಪೂರ್ಣ ಆಗಿರೋಕು. ನಮ್ಮಂದ ಕೆಲವ್ಕೆ ಆದರೂ ಉಪಾಕಾರ ಆಕು. ಗುರಿ ಇಲ್ಲದ ಬದ್ಕ್ ಚುಕ್ಕಾಣಿ ಇಲ್ಲದ ದೋಣಿ ಹಾಂಗೆ."

ಕನ್ನಡ ಮೇಡಮ್ ಕಾಲೇಜಿಲಿ ಸಾಹಿತ್ಯದ ವಾತಾವರಣ ಮಾಡ್ಸಿಕೆ ಯತ್ನಿಸ್‌ತಿದ್ದೊ. ಅವರ ಊರ್‍ನ ಜಾನಪದ ಕಲಾವಿದರ್‍ನ ಕರ್‍ದ್‌ತಂದ್ ಕಾಲೇಜಿಲಿ ಪ್ರದರ್ಶನ ಏರ್ಪಡಿಸ್ ತಿದ್ದೊ. ಅವು ಮೈಸೂರ್‌ಂದ ಬಾಕೆ ಮಾಡ್ದ ಬೀಸುಕಂಸಾಳೆ ತಂಡದ ಪ್ರದರ್ಶನ ಹೇಂಗಿತ್ ಗೊತ್ತೋ? ನೋಡುವವ ಮೈ ರೋಮ ಎಲ್ಲಾ ನೆಟ್ಟಂಗೆ ಆಗುವ ಹಾಂಗಿತ್. ಕಾಲೇಜಿಲಿ ಹೆಸ್ರಾಂತ ಸಾಹಿತಿಗಳ ಜಯಂತಿನ ಮತ್ತು ಪುಣ್ಯತಿತಿಗಳ್ನ ಆಚರಿಸಿ ಸಾಹಿತ್ಯದ ಉಪನ್ಯಾಸ ಏರ್ಪಡಿಸ್‌ತಿದ್ದೊ. ಸ್ಪರ್ದೆಗಳ್ನ ನಡ್ಸಿ ಪುಸ್ತಕ ಬಹುಮಾನ ಕೊಡುತಿದ್ದೊ. ಸ್ತಳೀಯ ಸಾಹಿತಿಗಳ ಮನೆಗೆ ಮಕ್ಕಳ್ನ ಕರ್‍ಕಂಡ್ ಹೋಗಿ ಅವರ್‍ನ ಸಂಮಾನಿಸಿ ಮಾತ್‌ಕತೆ ನಡ್ಸ್‌ತಿದ್ದೊ. ಕನ್ನಡಲಿ ಯಾವುದಾದರ್ ಹೊಸ ಪುಸ್ತಕ ಬಂದ ಕೂಡ್ಲೆ ತಕಂಡ್ ಓದಿ ತರಗತಿಗೆ ತಂದ್ ತೋರ್‍ಸಿ ಅದರ ಬಗ್ಗೆ ವಿಮರ್ಶೆ ನಡ್ಸಿ ಕೃತಿ ಬಗ್ಗೆ ಮಾತಾಡ್‌ತಿದ್ದೊ. ಒಂದು ಸರ್ತಿ ಕ್ಲಾಸಿಲಿ ಕನ್ನಡದ ಮಾಸ್ಟ್ರ ಹೇಳ್ದೋ,

"ಪುಸ್ತಕ ಕೊಂಡು ಓದದ ಮಾನವ
ಮನುಷ್ಯನಲ್ಲವು ಹೆಣ
ಪುಸ್ತಕ ಸಂಗ್ರಹ ಇಲ್ಲದ ಮನೆಯದು
ಮನೆಯಲ್ಲವು ಮಸಣ"

ಈಗ ಐಟಿ, ಬಿಟಿ ಅಂತ ಕನ್ನಡ ಸತ್ ಹೋಗ್ತುಟ್ಟು. ಕನ್ನಡ ಕೃತಿಗಳ್ನ ತಕಂಡ್ ಓದಿ ಕನ್ನಡನ ಬದ್ಕಿಸಿ. ಈಗ ನೀವು ಮಾಡಕಾದ್ ಕನ್ನಡ ಸಾಹಿತ್ಯ

ಮಾಲಾ ಪ್ರವಾಸ ಮತ್ತು ಕನ್ನಡ ಸಾಹಿತ್ಯ ಶೋಬಾಯಾತ್ರೆ.

ಈಗ ನೀವು ಮಾಡಕಾದ್ದ್ ಕನ್ನಡ ಸಾಹಿತ್ಯ ಮಾತೆನ ರಕ್ಷಿಸುವ ಮತ್ತು ಕನ್ನಡ ಉಳ್ಸುವ ಕಾರ್ಯಕ್ರಮ. ಈ ಕೆಲ್ಸಮಾಡುವ ರಾಜಕಾರಿಣಿಗಳಿಲ್ಲೆ, ದರ್ಮ ದುರೀಣರಿಲ್ಲೆ, ಜಾತಿ ಸಂಗಟನೆಗಳಿಲ್ಲೆ. ಬಾಸೆನೇ ಉಳ್ದಿಲ್ಲೆಂತಾದರೆ ಕನ್ನಡಿಗರಿಗೆ ಅಸ್ತಿತ್ವವೇ ಇರ್ದುಲ್ಲೆಂತ ಇವ್ಕೆ ಅರ್ತ ಆದು ಯಾಗ?"

ಎರ್ಡ್ ದಿನಗಳ್‌ಂದ ವಿಪರೀತ ಮಳೆ ಸುರಿತಿತ್ತ್. ತಪಸ್ವಿನಿ ತೂಕ ತಪ್ಪಿ ಕುಣಿತಿತ್ತ್. ಅವ್ಳ ಉಗ್ರರೂಪ ನೋಡಿ ಅವ್ವಂಗೆ ಹೆದ್ರಿಕಾತ್.

"ಪಾಲ ದಾಟಿಕಾಕನ ಎಲ್ಲಾದ್ರ್ ಕಾಲ್‌ಜಾರಿರೆ ನಿಮ್ಮ ಗತಿಯೇನ್ ಮಕ್ಕಳೆ? ತಪಸ್ವಿನಿ ಗರ್ಜನೆ ಕೇಳಿರೆ ಅವ್ಳಿಗೆ ಸಿಟ್ಟ್ ಬಂದಾಂಗುಟ್ಟು. ಇಂತಾ ಮಳೆಗೆ ದೂರದ ಮಕ್ಕ ಕಾಲೇಜಿಗೆ ಬಂದವೆನೋ? ಮಳೆನ ಹೊಡ್ತದ ಅಬ್ಬರಕೆ ಮಾಸ್ಟ್ರಗಳ ಪಾಟ ಕೇಳ್ಸಿದೆನೋ? ಸುಮ್ಮನೆ ಹಪ್ಪಳನೋ, ಸಾಂತಾಣಿನೋ, ಮಾಂಬಳನೋ ತಿಂದ್‌ಕಂಡ್ ಮನೇಲಿರಿಕಾದುಲೆನೋ ಮಕ್ಕಳೇ?"

ಅಮ್ಮಣ್ಣಿ ಮತ್ತು ಬಾಳಕ್ಕ ಮೋರೆ ಮೋರೆ ನೋಡಿಕೊಂಡೋ. ಇಬ್ಬರಿಗೂ ಕ್ಲಾಸ್ ತಪ್ಪಿಸಿಕೆ ಇಷ್ಟ ಇತ್ಲೆ.

"ಇಲ್ಲೆ ಅವ್ವ, ಒಂದು ದಿನ ಪಾಟ ತಪ್ಪಿ ಹೋದ್ರೆ ಮತ್ತೆ ಅದರ ಕೊಂಡಿ ಸಿಕ್ಕುದ್ಲೆ. ಮಾರ್ನೆ ದಿನದ ಪಾಟ ಹಳಿತಪ್ಪಿದ ಬಂಡಿನ ಹಾಂಗೆ ಆದೆ. ಅದ್ ಮಾತ್ರಲ್ಲ ನಾವು ಕಾಲೇಜಿಗೆ ಹೋಗದಕ್ಕೆ ನೆವನ ಕೊಡಕಾದೆ. ಅದೆಲ್ಲಾ ಯಾಕೆ ಬೇಕು. ಪಾಲ ದಾಟಿಕಾಕನ ಕಾಲ್‌ಜಾರಿಕೆ ನಾವೇನ್ ಸಣ್ಣ ಮಕ್ಕಳೋ?"

ಅಂದ್ ಬಸ್ಸ್ ಬಾಕೆ ಅರ್ದಗಂಟೆ ತಡಾತ್. ಗಾಳಿ ಮಳೆಗೆ ಚಂಡಿ ಆದ ಅಮ್ಮಣ್ಣಿ ಮತ್ತು ಬಾಳಕ್ಕ ನಡ್ಗಿಕಂಡೇ ಬಸ್ಸ್ ಹತ್ತಿದೊ. ಕಾಲೇಜಿಗೆ ಮುಟ್ಟಿಕಾಕನ ಅರ್ದಗಂಟೆ ತಡಾಗಿತ್ತ್. ಒಂದು ಪಿರಿಯೆಡ್ ಹೋದ ಹಾಂಗೇಂತ ಹೇಳಿಕಂಡ್ ಕಾಲೇಜ್ ಪ್ರವೇಶಿಸಿದೊ. ಮಕ್ಕ ಎಲ್ಲಾ ಗುಂಪು ಸೇರಿಕಂಡ್ ಏನೋ ಮಾತಾಡ್ತಿದ್ದೊ. ಗೂಡೆಗಳ ಕಣ್ಣ್‌ಲಿ ನೀರಿತ್ತ್. ಕೆಲವು ಬಾಯಿಗೆ ಅಡ್ಡಾಗಿ ಕೈ ಹಿಡ್ಕಂಡ್ ಬಿಕ್ಕಳ್ಸ್‌ತಿದ್ದೊ. ಅಮ್ಮಣ್ಣಿ ಕೇಳ್ದಕ್ಕೆ ಅವರ್‌ಲಿ ಒಬ್ಬಳ್ ಹೇಳ್ತ್,

"ಕೆಳಗೆ ದೊಡ್ಡೇರಿಂತೇಳುವಲ್ಲಿ ದೋಣೆ ಕಡವು ಉಟ್ಟು, ಅಲ್ಲಿ ಹಳ್ಳ ದಾಟಿಕಾಕನ ಪಿಂಡಿ ಮಾರಿ ಬೊಳ್ಳಕ್ಕೆ ಮಗ್ಗಿ ಹೋಗಿ ಅನಾಹುತ ಆಗ್ಟು. ನಲ್ವತ್ತಕ್ಕಿಂತ ಹೆಚ್ಚಿಗೆ ಜನ ಇದ್ದೊ ಗಡ. ನಮ್ಮ ಕಾಲೇಜಿನವೇ ಎಂಟ್ ಜನ. ಮಿೂಸಿಕೆ ಗೊತ್ತಿರುವ ಹೈದಂಗ ಹೇಂಗೋ ದಡ ಸೇರಿಯೊಳೊ. ಮೂರು ಗೂಡೆಗಳ ಗತಿ ಏನಾತ್‌ಂತ

ಗೊತ್ತೆ. ಅವರ ಬಾಡಿ ಕೂಡ ಸಿಕ್ಕಿತ್ತೆ ಗಡ. ಇಬ್ಬರ್ ಕಡೇ ವರ್ಸದವು. ಇನ್ನೊಬ್ಬಳ್ ಎರಡ್ನೆ ವರ್ಸದವ್ಳ್."

ಅಮ್ಮಣ್ಣಿ ಪೆಚ್ಚಾಗಿ ನಿಂತತ್. ಮನೆ ಹತ್ರದ ಪಾಲ ದಾಟಿಕಾಕನ ಒಂದಿಸ್ಟ್ ಎಚ್ಚರ ತಪ್ಪಿರೆ ನನ್ನ ಶರ್ರನೂ ಸಿಕ್ಕಿಕಿಲೆ. ಆ ಗೂಡೆಗ ಪಾಪ ಏನೇನ್ ಕನ್ಸ್ ಕಂಡಿದ್ದನೋ. ಅಪ್ಪ, ಅವ್ವ ಅವರ ಮೇಲೆ ಏನೇನ್ ಆಸೆ ಇಸಿಕಂಡಿದ್ದನೋ? ಇಳಿಪ್ರಾಯದ ಅಜ್ಜ ಸತ್ತ್ ಹೋದ ಬೇಜಾರ್ ಈಗ ಕೂಡ ನನ್ನ ಕೊರೆತುಟ್ಟು. ಇನ್ನ್ ಎಳೆಪ್ರಾಯದ ಮಕ್ಕಳ್ನ ಕಳಕೊಂಡವು ಜೀವನ ಪೂರ್ತಿ ಕಣ್ಣೀರ್ ಹಾಕೋಕಲ್ಲಾ."

ಕಾಲೇಜಿನ ಸ್ತಾಪಕ ಕಪಿಲಳ್ಳಿ ವೆಂಕಟಪ್ಪ ಗೌಡ್ರ್ ಮತ್ತು ಶಾಸಕರ್ ಕಾಲೇಜಿಗೆ ಬಂದೊ. ಅವರ ಹಿಂದೆಂದ ಪೋಲೀಸ್‌ನವು ಎರ್ಡ್ ವ್ಯಾನ್‌ಗಳ್ಲಿ ಬಂದಿಳ್ದೊ. ಸ್ತಾಪಕರ್ "ಇದೊಂದು ಕೆಟ್ಟ ದಿನ. ಎಳೆ ಜೀವಗಳ್ನ ದೇವ್ರ್ ಕರ್ಸಿಕೊಂಡುಟು. ತೀರಿ ಹೋದವರ ಆತ್ಮಕ್ಕೆ ದೇವ್ರ್ ಸದ್ಗತಿ ಕೊಡ್ಲಿ. ಈ ಬೇಜಾರ್ನ ಸಹಿಸುವ ಶಕ್ತಿ ಅವ್ರ ಮನೆವುಕೆ ಬರ್ಲಿ" ಅಂತೇಳಿ ಕೈ ಮುಗ್ದೊ. ಒಂದು ನಿಮಿಷದ ಮೌನ ಪ್ರಾರ್ತನೆ ಆತ್. ಸತ್ತವರ ಗೌರವಾರ್ತ ಪ್ರಿನ್ಸಿಪಾಲ್ರ್ ಒಂದು ದಿನದ ರಜೆ ಕೊಟ್ಟೊ.

ಮಾರ್ನೆ ದಿನ ತರಗತಿಲಿ ಎಂದಿನ ನಗೆ ಇತ್ಲೆ. ಇತಿಹಾಸದ ಮಾಸ್ಟ್ರ ಚಿಂತನೆ, ನ್ಯೂಸ್ ಓದಿತ್ಲೆ. ಅವರ ಮೋರೇಲಿ ಗಂಬೀರತೆ ಇತ್ತ್. ಗಂಬೀರ ಸ್ವರಲಿ ಅವು ಹೇಳ್ದೊ,

"ಹತ್ತ್ ವರ್ಸಂದ ದೊಡ್ಡೇರಿಯ ಜನ ಒಂದು ತೂಗುಸೇತುವೆನಾದ್ರ್ ಕಟ್ಟಿಸಿ ಕೊಡೀಂತ ಆಡಳಿತದವರ್ನ ಗೋಗರೆತಿದ್ದೊ. ಪ್ರತಿವರ್ಷ ಅಲ್ಲಿ ಒಂದೆರಡ್ ಜೀವ ಬಲಿಯಾಗುತುಟ್ಟು. ಬಡವರ ಜೀವಕ್ಕೆ ಯಾರ್ ಬೆಲೆಕೊಟ್ಟವೆ? ಈ ವರ್ಷ ನಮ್ಮ ಕಾಲೇಜಿನ ಮೂರು ಜೀವಗ ಬಲಿಯಾದೊ. ದೊಡ್ಡೇರಿಯ ಜನ್ರಿಗಾಗಿ ಏನನ್ನಾದ್ರ್ ಮಾಡದಿದ್ದರೆ ನಮ್ಮ ಬದ್ಕಿಗೆ ಅರ್ತನೇ ಇಲ್ಲೆ. ನಾನೀಗ ಒಂದು ತೂಗುಸೇತುವೆ ಮಾಡಿಕೆ ಯೋಜನೆ ಮಾಡ್ತ್ಯೊಳೆ. ನೂರ ಅರುವತ್ತು ಮೀಟರ್ ಉದ್ದ ಆದೆ. ಸುಮಾರ್ ಇಪ್ಪತ್ತರ್‌ಂದ ಇಪ್ಪತ್ತೈದ್ ಲಕ್ಷ ಕರ್ಚಾದು. ನನ್ನ ಉಳಿತಾಯ ಎಲ್ಲ ಇದ್ಕೆ ಹಾಕುತ್ತೊಳೆ. ನೀವೆಲ್ಲ ನಿಮ್ಮಂದ ಎಷ್ಟ್ ಕೊಡಿಕೆ ಆದನೊ ಅಷ್ಟ್ ಕೊಡೊಕು. ಮಾಸ್ಟ್ರ ಅವ್ರ ಬೇಜಾರ್ನ ಜೊತೆಗೆ ಆಸೆನ ಹೇಳಿಕೊಂಡೊ.

ಮಾಸ್ತ್ರ ಯೋಜನೆ ಕಾರ್ಯಗತ ಆತ್. ಐ.ಟಿ. ಕಂಪೆನಿಯೊಂದು ಮಾಸ್ತ್ರ ಮನವಿಗೆ ಸ್ಪಂದಿಸಿ ಹತ್ತ್ ಲಕ್ಷ ಕೊಟ್ಟಿತ್. ಕಪಿಲಳ್ಳಿ ವೆಂಕಟಪ್ಪ ಗೌಡ್ರ್ ಒಂದು ಲಕ್ಷ

ಕೊಟ್ರೊ. ಮಾಸ್ತ್ರ ಸೇವಾ ಸಂಸ್ಥೆ ದೊಡ್ಡ ಮೊತ್ತದ ದೇಣಿಗೆ ನೀಡ್ತ್. ಮಾಸ್ತ್ರ ಎಷ್ಟ್ ಹಾಕಿದನೊ? ತೂಗುಸೇತುವೆ ಕಟ್ಟುವ ಅವಶ್ಯಕತೆನ ತಿಳ್ಕಂಡ ಒಳ್ಳ ಹೃದಯಗಳ್‌ಂದ ಹಣಕಾಸಿನ ಸಹಾಯ ಹರ್ದ್ ಬಾತ್. ನಾಲ್ಕೆ ತಿಂಗಳ್ಲಿ ದೊಡ್ಡ ತೂಗುಸೇತುವೆ ತಯಾರಾತ್. ಮಾಸ್ತ್ರ ಕಾರ್ಯ ಸಾದನೆನ ಎಲ್ಲವೂ ಹೊಗೊಳ್ದೊ."

ಕಾಲೇಜ್ ಉತ್ಸವದಂದ್ ವೆಂಕಟಪ್ಪ ಗೌಡ್ರ್ ಇತಿಹಾಸದ ಮಾಸ್ತ್ರನ ಶಾಲ್ ಹೊದ್ಸಿ ಸನ್ಮಾನಿಸಿದೊ.

"ಹಿಂದೆ ಶ್ರೀರಾಮ ಕಪಿಗಳ ಸಹಾಯಂದ ಲಂಕೆಗೆ ಸೇತುವೆ ನಿರ್ಮಿಸಿತ್. ಈಗ ನಮ್ಮ ಇತಿಹಾಸದ ಮಾಸ್ತ್ರ ದೊಡ್ಡೇರಿಗೆ ತೂಗುಸೇತುವೆ ನಿರ್ಮಿಸಿದೊ. ಇತಿಹಾಸ ಕಟ್ಟುದುಂತೇಳಿರೆ ಇದ್. ಇವು ನಿಜವಾದ ಗಂಡ್ ಮಂಜ."

ಮನ್ಸಿಗೆ ಬೇಜಾರಾಕನೆಲ್ಲಾ ಗೆಳತಿಯರೊಟ್ಟಿಗೆ ದೊಡ್ಡೇರಿ ತೂಗುಸೇತುವೆ ನೋಡಿಕೆ ಹೋದು ಅಮ್ಮಣ್ಣಿಗೆ ಅಬ್ಯಾಸ ಆತ್. ನಲ್ವತ್ತಡಿ ಎತ್ತರಂದ ತಪಸ್ವಿನಿನ ಮಳೆಗಾಲಲಿ ನೋಡಿಕಾಕನ ಮೈ ಜುಮ್ಮಂತೇಳ್ತಿತ್ತ್. ಕೆಳಗಿನ ಕಪಿಲಳ್ಳಿಗೆ ಪ್ರವೇಶಾಕನ ಸಿಕ್ಕುವ ದೊಡ್ಡೇರಿ ಈ ಹಿಂದೆ ಯಾರ ಗಮನನೂ ಸೆಳೆದಿತ್ಲೆ. ಈಗ ಅದೊಂದು ಯಾತ್ರಾಸ್ಥಳ ಆತ್. ದಿನ ಇದೇ ದುಡ್ಡ ಜನ ಹಿಂಬೊತ್ತು ಅಲ್ಲಿಗೆ ಬಂದ್ ತೂಗುಸೇತುವೆ ಹತ್ತಿ ತಪಸ್ವಿನಿನ ನೋಡಿ ಕುಸಿಪಟ್ಟ್‌ಕಣ್ತಿದ್ದೊ. ಸ್ವಂತ ವಾಹನಲಿ ಬರೊವು ಒಂದು ಕ್ಷಣ ವಾಹನ ನಿಲ್ಲಿಸಿ ತೂಗುಸೇತುವೆನ ಒಂದು ಕೊಡಿಂದ ಮತ್ತೊಂದು ಕೊಡಿಗೆ ಹೋಗಿ ಸೇತುವೆ ಕಟ್ಟಿದ ರೀತಿಗೆ ಬೆರ್ಗಾಗ್‌ತಿದ್ದೊ.

ಆ ತೂಗುಸೇತುವೆನ ನಡುಬಾಗಲಿ ನಿಂತ್ ಮೇಲ್ಬಾಗದ ಕಡೆ ನೋಡಿರೆ ಹರ್ದ್ ಬರುವ ತಪಸ್ವಿನಿನ ದಶಾವತಾರ, ದೂರಲಿ ಕಾಣುವ ಹಸ್ರ್ ಬೆಟ್ಟಗಳ ಸಾಲ್, ಎರ್ಡೂ ದಡಗಳ್ಲಿ ಹಳ್ಳದ ಕಡೆಗೆ ಬೊಗ್ಗಿದ ಮರಗ, ಅವ್ಗಳ ಮೇಲೆ ಬಿಳಿ ಹಕ್ಕಿಗಳ ಸಾಲ್ ನಮ್ಮನ್ನ್ ನಾವೇ ಮರೆವ ಹಾಂಗೆ ಮಾಡ್ವೆ, ಅಲ್ಲಿರುವ ನೀರ್ನ ಸುಳಿಗೇನೇ ಅವ್ವ ಕಾಲೇಜಿನ ಮೂರು ಗೂಡೆಗ ತಮ್ಮ ಕನಸ್ಸ್‌ಗಳೊಟ್ಟಿಗೆ ಸಿಕ್ಕಿ ಪಾಂಬಿ ಹೋದದ್ದ್.

ತೂಗುಸೇತುವೆನ ನಡುಲಿ ನಿಂತ್ ಹಳ್ಳ ಹರ್ದ್ ಬರುವ ಕಡೆ ನೋಡ್‌ಕನ್ನೆಲ್ಲಾ ಇತಿಹಾಸದ ಮಾಸ್ತ್ರ ಮೋರೆ ಕಣ್ಣ್‌ಮುಂದೆ ಬಂದ್ ನಿಲ್ಲ್‌ತಿತ್ತ್. ಒಂದು ದಿನ ತಾನೂ ಏನಾದ್ರೂ ಮಹತ್ತಾದನ್ನ ಸಾದಿಸೊಕುಂತೇಳ್ವ ಯೋಚನೆ ಗಟ್ಟಿಯಾಗ್‌ತಿತ್ತ್.

——***——

# ೬. ಈ ಶಿಕ್ಷೆ ನಿತ್ಯ ಅಲ್ಲ

ಶಾಲಾ ಹಬ್ಬದಂದ್ ಕಾಲೇಜಿಲಿ ಲಂಕಾದಹನ ಯಕ್ಷಗಾನ. ತರ್ಕಶಾಸ್ತ್ರದ ಮೇಸ್ಟ್ರು ರಾವಣ. ಇತಿಹಾಸದ ಮೇಸ್ಟ್ರು ಹನ್ಮಂತ. ಅವಿಬ್ಬರೂ ಅಷ್ಟೇ ಲಾಯಿಕ್ಕಾಗಿ ಪಾತ್ರ ಮಾಡ್ವೇಂತ ಅವ್ಳ್ ಗ್ರೇಸಿತ್ಲೆ. ಬಾಗವತಳಾಗಿದ್ದ ಅಮ್ಮಣ್ಣಿ ಮಾಸ್ಟ್ರಗಳ ನಿರ್ವಹಣೆಗೆ ಬೆರ್ಗಾಗಿ ಒಂದೆರಡ್ ಸರ್ತಿ ಪದ ಎತ್ತಿಗಡೆಗೆ ತಡಮಾಡಿ ಬುಡ್ತು.

ಮದ್ದಲೆ ಸತ್ಯಣ್ಣ ಅವಳ್ನ ಕೀಟಲೆ ಮಾಡ್ತ್.

"ಇಲ್ಲಿವರೇಗೆ ಯಾರ್ಯಾರನ್ನೋ ಕುಣ್ಸಿದ. ಈಗ ಮಾಸ್ಟ್ರಗಳ್ನೇ ಕುಣ್ಸಿಕೆ ಸುರು ಮಾಡ್ತ್ಯೊಳ. ಇನ್ನ್ ನಿನ್ನ ಕಟ್ಟಿ ಹಾಕೊವು ಯಾರು?" ಯಕ್ಷಗಾನ ಮುಗ್ದ ಮೇಲೆ ವೇದಿಕೆಗೆ ಕಾಲೇಜ್ ಸಂಸ್ಥಾಪಕ ಕಪಿಲಳ್ಳಿ ವೆಂಕಟಪ್ಪ ಗೌಡ್ರ್ ಬಂದೊ.

"ನನ್ನ ಅಪ್ಪ ಬಾಗವತಿಕೆ ಮಾಡ್ತಿದ್ದೊ. ಸಣ್ಣಂವ ಆಗಿರಿಕಾಕನ ನಾನೂ ಕಾಡ್ ಸೊಪ್ಪು ಅಡಿಕೆ ಹಾಳೆ ಕಟ್ಟಿಕಂಡ್ ಕೋಣಿತಿದ್ದೆ. ಇಂದ್‌ನ ಪ್ರದರ್ಶನ ನೋಡಿ ತುಂಬಾ ಕುಸಿಯಾತ್. ನಮ್ಮ ಪ್ರೊಪೆಸರ್‌ಗ ಬಾರಿ ಲಾಯಿಕ್ಕಾಗಿ ಅಬಿನಯ್ಸಿವೆ. ಇಂದ್ ಒಬ್ಳ್ ಹೆಣ್ಣ್ ಮಗಳು ಬಾಗವತಳಾಗಿ ಪ್ರಸಂಗನ ತಕಂಡ್ ಹೋದ ರೀತಿ ಕಂಡ್ ನಂಗೆ ಆಶ್ಚರ್ಯ ಆತ್. ಅವ್ಳಿಗೆ ಇನ್ನ್ ಮುಂದೆನ ಕಾಲೇಜ್ ಪೀಸ್ ಮಾಪಿ ಮಾಡ್ಯಳೆ. ಈಗ ನಿಮ್ಮ ಮುಂದೆ ಈ ಹೆಣ್ಮಗಳಿಗೆ ಒಂದು ಸಾವಿರ ರೂಪಾಯಿನ ಆಶೀರ್ವಾದ ರೂಪಲಿ ಕೊಡ್ತೊಳೆ."

ಹಣ ತಕಂಡ್ ಅಮ್ಮಣ್ಣಿ ವೆಂಕಟಪ್ಪ ಗೌಡ್ರ ಕಾಲ್ ಮುಟ್ಟಿ ನಮಸ್ಕರಿಸಿತ್. ಅವು ಮನಸಾರೆ ಹರ್ಸಿದೋ.

"ನಿನ್ನಂತವು ನಮ್ಮ ಕಾಲೇಜಿನ ಹೆಮ್ಮೆ ಕಣಮ್ಮಾ. ಲಾಯ್ಕಾಗಿ ಓದಿ ಮುಂದಕ್ಕೆ ಬಾ ಹೆಣ್ಮಕ್ಕ ಯಾಗೋಳು ಜಾಣೆಯರಾಕು."

ಅವ್ಳ್ ಚೌಕಿಗೆ ಬಾತ್. ಇತಿಹಾಸದ ಮಾಸ್ಟ್ರ ಕಾಯೆಣ್ಣೆನ ಮೋರೆಗೆ ಹಾಕಿ ಹಳೆ ಬಟ್ಟೆಂದ ಉಜ್ಜಿ ಬಣ್ಣ ತೆಗಿತಿದ್ದೊ. ಅವು ಬನಿಯನ್ ಮತ್ತು ಇಜಾರಿಲಿ ಮಾತ್ರ ಇದ್ದೊ. ಅಮ್ಮಣ್ಣಿ ಹೋಗಿ ಹತ್ರ ಕುದ್ದತ್.

"ಬಾಗವತರೇನ್ ಇಲ್ಲಿವರೇಗೆ ದಯಮಾಡ್ಸಿದ್? ತುಂಬಾ ಬೆವರಿಯೊಳೆ. ಹಂಞಾ ದೂರ ಕುದ್ದರೆ ನಿಂಗೇನೇ ಒಳ್ಳೆದ್."

ಅವು ಅವಳ್ನ ಕರಿತಿದ್ದ್‌ದೇ ಹಾಂಗೆ.

"ನಾನೆಲ್ಲಿನ ಬಾಗವತ ಸಾರ್? ಯಕ್ಷಗಾನ ಕ್ಷೇತ್ರಲಿ ನಾನಿನ್ನೂ ಅಂಬೆಗಾಲ್ ಇಡ್‌ತೊಳೆ ಅಷ್ಟೆ. ನನ್ನನ ಹೆಸ್ರ್ ಹಿಡ್ದೇ ಕರೇನಿ."

ಹಾಂಗೆ ಅವ್ಳ್ ಹೇಳ್ದ ಮೇಲೆ ಒಮ್ಮೆ ಕ್ಲಾಸಿಲಿ ಅವು ಪ್ರಶ್ನೆ ಕೇಳಿ "ಉತ್ತರ ಹೇಳಿ ಬಾಗವತರೇ" ಅಂತ ಅವಳತ್ತ ಕೈ ತೋರ್ಸಿದ್ರೊ. ಅಂದ್‌ಂದ ಅವ್ಳಿಗೆ ಬಾಗವತರೆಂಬ ಹೆಸ್ರ್ ಕಾಯಂ ಆತ್. ಇಡೀ ಕಾಲೇಜ್‌ಲಿ ಆ ಹೆಸ್ರ್ ಜನಪ್ರಿಯ ಆತ್.

ಈಗ ಚೌಕಿಲಿ ಮಾಸ್ಟ್ರ ಬಾಗವತ್ರೆಂತ ಕರೆಕಾಕನ ಅವ್ಳಿಗೆ ತರಗತಿಲಿ ಅವು ಮಕ್ಕಳ್ನ ಬೇರೆ ಬೇರೆ ಹೆಸ್ರ್‌ಗಳಂದ ಕರೆತಿದ್ದದ್ ನೆನಪಾತ್. ಗೂಡೆಗ ರಂಬೆ, ಊರ್ವಶಿ, ಮೇನಕೆ, ತಿಲೋತ್ತಮೆ, ಶಚಿ, ಕೋಮಲಾಂಗಿ, ಶಶಿಕಲಾ, ಶಕುಂತಲಾ, ಮದನಾಕ್ಷಿ, ತಾರಾವಳಿಯರಾದರೆ ಹೈದಂಗ ಕುಂಬಕರ್ಣ, ನರಕಾಸುರ, ಕೀಚಕ, ಬಕಾಸುರ, ದುಸ್ಯಾಸನ, ದುಸ್ಟಬುದ್ದಿ, ಸಕುನಿ, ಬಕಾಸುರ, ಹಿಡಿಂಬರಾಗ್‌ತಿದ್ರೊ. ಕ್ಲಾಸಿಗೆ ಆಗಾಗ ತಪ್ಪಿಸುವ ಇಬ್ಬರ್ ಹೈದಂಗಳಿಗೆ ಅವು ತರಗತಿಲಿ ಕುಕ್ಕಟಶ್ರೀ ಮತ್ತು ವರಹಶ್ರೀ ಪ್ರಶಸ್ತಿ ಪ್ರದಾನ ಮಾಡಿದ್ರೊ. ಕುಕ್ಕುಟ ಶ್ರೀ ಬಿರುದಿನವ ಕ್ಲಾಸ್ ತಪ್ಸಿ ಕೋಳಿ ಕಟ್ಟಗಳಿಗೆ ಹೋಗುವ ಸದ್ಗುಣ ಸಂಪನ್ನನಾಗಿತ್ತ್. ಇನ್ನೊಬಂಗೆ ಹಂದಿ ಮಾಂಸತೇಳಿರೆ ಪ್ರಾಣ. ಊರ್ಲಿ ಎಲ್ಲೇ ಬೊಜ್ಜಾದರೂ ಸರಿ ಹೇಳಿಕೆ ಇರ್ಲಿ ಯಾ ಇಲ್ಲದಿರ್ಲಿ ಅಂವ ತಪ್ಪದೆ ಹಾಜರ್. ಹಂದಿಗೈಪು ಸಾರ್ ಅಪ್ಪದಿಟ್ಟ್ ಜಮಾಯ್ಸತಿತ್ತ್! ಯಾಗಳೋ ಒಂದು ಸರ್ತಿ ಮಾಸ್ಟ್ರ ತರಗತಿಲಿ ಪಾಟಮಾಡಿಕಾಕನ ಇದ್ದಕ್ಕಿದ್ದಾಂಗೆ ಕೇಳ್ರೋ.

"ನೀವ್ಗೆ ಶೂರ್ಪನಕಿ ಗೊತ್ತಾ?"

ಮಕ್ಕ ಗ್ಯಾನ ಮಾಡ್ರೊ. ಯಾಕೆ ಕೇಳ್‌ತೊಳ ಮಾಸ್ಟ್ರ? ಅಮ್ಮಣ್ಣಿ ದೈರ್ಯಮಾಡಿ ಎದ್ದ್ ನಿಂತ್ ಹೇಳ್ತ್ "ರಾವಣನ ತಂಗೆ"

"ಅದ್ ರಾಮಾಯಣದ ಶೂರ್ಪನಕಿ ನಮ್ಮ ಕಾಲೇಜಿಲಿರುವ ಶೂರ್ಪನಕಿಯರಬಗ್ಗೆ ನಾ ಕೇಳ್ದ್. ಶೂರ್ಪನಕೀಂತಾ ಹೇಳಿರೆ ಚೂಪಾದ ಉಗುರಿನವಳು. ಎಡಕೈ ಉಗುರ್ನ ಉದ್ದಕ್ಕೆ ಬೆಳ್ಸಿ ಬಣ್ಣ ಹಚ್ಚಿಕಂಡ್ ಬಂದವೆಲ್ಲಾ, ಅವು ಶೂರ್ಪನಕಿಗ." ಅಮ್ಮಣ್ಣಿ ಕೂಡ್ಲೆ ತನ್ನ ಎಡಗೈನ ಬಲಗೈಯಿಂದ ಮುಚ್ಚಿಕಣ್ತ್.

"ಉಗುರು ಬೆಳ್ಸುದು ನಿಮ್ಮ ಜನ್ಮಸಿದ್ದ ಹಕ್ಕ್. ಅದಕ್ಕೆ ನನ್ನ ತಕರಾರ್ ಏನೂ ಇಲ್ಲೆ. ಆದರೆ ನೀವು ಎಡಕೈನ ಯಾವ್ದಕ್ಕೆ ಬಳ್ಸಿರೆ? ನಿಮ್ಮ ಆ ಉದ್ದ ಉಗುರಿನ ಎಡೆಲಿ ಏನೇನ್ ಸೇರ್ದುಂತ ನೀವೇ ಹೇಳಿ ನೋಡನಾ..."

ಗೂಡೆಗಳ ಬಾಯಿಂದ ಒಟ್ಟಿಗೆ ಉದ್ಗಾರ ಬಾತ್ "ಇಸ್ಸೀ". ಈಗ ಮಾಸ್ಟ್ರ ಬೆವ್ರ ವಾಸನೆಂತೇಳಿರೂ ಅವಳ ಹತ್ರನೇ ಕುದ್ದತ್.

"ಪರವಾಗಿಲ್ಲೆ ಸರ್. ಇಂದ್ ಸಂಸ್ಥಾಪಕರ್ ಒಂದು ಸಾವಿರ ಕೊಟ್ಟು ಆಶೀರ್ವದಿಸಿದೊ. ನಂಗೆ ಇಷ್ಟವರೆಗೆ ಇನ್ನೂರಕ್ಕಿಂತ ಹೆಚ್ಚಿಗೆ ಸಿಕ್ಕಿತೇ ಇಲ್ಲೆ. ಎಲ್ಲಾ ನಿಮ್ಮ ಆಶೀರ್ವಾದ ಸರ್".

"ಹಂಗಾದರೆ ಅದರ್ಲಿ ಸಮಪಾಲ್ ನಂಗೆ ಕೊಟ್ಟುಬುಡು. ಹುಚ್ಚು ಗೂಡೆ.

ಆಶೀರ್ವಾದಂದ ಏನೂ ಆದುಲೆ. ಅದ್ ನಿನ್ನ ಪ್ರಯತ್ನ ಮತ್ತೆ ಸಾದನೆಗೆ ಸಿಕ್ಕಿದ ಪ್ರತಿಪಲ. ಅದ್ಕೆ ನನ್ನನ್ನ ಯಾಕೆ ಪಾಲ್‌ಗಾರನನ್ನಾಗಿ ಮಾಡ್ತು."

ಕಾಲೇಜಿನ ರಾಷ್ಟ್ರೀಯ ಸೇವಾ ಸಂಗಟನೆಯ ಮುಖ್ಯಸ್ತರಾದ ಸಂಕಪ್ಪ ಗೌಡ್ರ ಒತ್ತಾಯಕ್ಕೆ ಅವ್ವು ಅದರ ಸದಸ್ಯೆಯಾತ್. ಸಂಕಪ್ಪ ಗೌಡ್ರು ಪರಿಸರ ಪ್ರಿಯರು. ಅವು ಆಗಾಗ ಮಕ್ಕಳ್ನ ಕರ್‌ಕಂಡ್ ಕಪಿಲಳ್ಳಿಯ ಬೆಟ್ಟಗುಡ್ಡಗಳಿಗೆ, ಜರಿತೊರೆಗಳಿಗೆ ಚಾರಣ ಹೋಗಿ ಬರ್ತಿದ್ದೋ. "ನಾವು ಮುಂದೆ ನಮ್ಮ ಊರ್‍ನ ತಿಳ್ಕಣಕು. ಆಮೇಲೆ ಹೊರಗೆ ಪ್ರವಾಸ ಹೋಕು"ಂತ ಸಂಕಪ್ಪ ಗೌಡ್ರು ಪ್ರತಿಯೊಂದು ಚಾರಣದ ಸಮಯಲಿ ಹೇಳ್ತಿದ್ದೊ.

ತಪಸ್ವಿನಿಯ ನೀರ್ ಮಲಮಿಶ್ರಿತಾಗುಟ್ಟುಂತ ಪತ್ರಿಕೆಲಿ ವರದಿ ಬಾತ್. ಸಂಕಪ್ಪ ಗೌಡ್ರು ರಾಷ್ಟ್ರೀಯ ಸೇವಾ ಗಟಕದ ಮೂಲಕ ತಪಸ್ವಿನಿನ ಪರಿಶುದ್ಧ ಮಾಡುವ ಜಾಗೃತಿ ಜಾತಾನ ವ್ಯವಸ್ತೆ ಮಾಡ್ದೋ. ಕಪಿಲೇಶ್ವರ ದೇವಸ್ತಾನಂದ ಸುರುಮಾಡಿ ತಪಸ್ವಿನಿಲಿ ಸಮುದ್ರ ಸೇರುವಲ್ಲಿವರೇಗಿನ ಬೈಸಿಕಲ್ಲ್ ಜಾತಲಿ ಅಮ್ಮಣ್ಣಿ ಕೂಡ ಸೇರಿಕಂಡತ್. ಇತಿಹಾಸದ ಮಾಸ್ಟ್ರ ಜಾತದ ಮುಂದುಗಡೆ ಇದ್ದ್ ಜನ್ರನ್ನು ಕಂಡಲ್ಲಿ ನಿತ್ತ್ ಪರಿಸರ ಸಂರಕ್ಷಣೆಯ ಅಗತ್ಯದ ಬಗ್ಗೆ ಗಟ್ಟಿ ಸೊರಲಿ ವಿವರಿಸ್‌ತಿದ್ದೊ. ನಾಲ್ಕ್ ಬಾಸೆಗಳಲ್ಲಿ ಅವು ಮಾತಾಡಿ ವಿಸ್ಮಯ ಮೂಡಿಸ್‌ತಿದ್ದೊ.

ಜಾತಾ ವಾಪಾಸಾಕನ ಬಸ್‌ಸ್ಟ್ಯಾಂಡ್ ಹತ್ರ ದೊಡ್ಡ ಸಬೆ ನಡ್ತ್. ಸಂಕಪ್ಪಗೌಡ್ರು ಲಾಯ್ಕಾಗಿ ಭಾಷಣ ಮಾಡ್ದೊ. ಕಪಿಲಳ್ಳಿಯ ಉದ್ದಕ್ಕೂ ತಿಳುವಳಿಕೆ ಇಲ್ಲದ ಜನಗ ಪ್ಲಾಸ್ಟಿಕ್‌ನ ಹಳ್ಳಕ್ಕೆ ಬಿಸಾಕುವೆ. ಕೋಳಿ ಮತ್ತು ಹಂದಿ ಮಾಸದ ಅಂಗಡಿಯವು ಅವ್ಗ್ಳ ಕೆಲವು ಬಾಗಗಳ್ನ ತಪಸ್ವಿನಿಗೆ ಸುರ್ದವೆ. ಕುಡಿವ ನೀರ್ ವಿಸ ಆದ್ರೆ ಜನರ, ದನಕರ್‌ಗಳ, ಬೆಳೆಗಳ ಗತಿಯೇನ್? ಗೋರಕ್ಷಣೆಗಾಗಿ ದೇಶಲಿ ದೊಡ್ಡ ಆಂದೋಲನ ರೂಪುಗೊಳ್ಳುತ್ತಾ ಉಟ್ಟು, ಅದಕ್ಕಿಂತ ಮುಖ್ಯವಾದದ್ದ್ ಹಳ್ಳಗಳ ರಕ್ಷಣೆ. ಹಳ್ಳ ರಕ್ಷಣಾ ಚಳುವಳಿನ ದೇಶದ ಮುಂದಾಳ್‌ಗ, ದಾರ್ಮಿಕ ಮುಂದಾಳ್‌ಗ, ಮತ್ತು ಜಾತಿ ಸಂಗಟನೆಗ ಸುರು ಮಾಡೋಕು. ಕೊಳ್ಳ ನೀರ್ ಕುಡ್ದು ನಾವು ಕಾಯಿಲೆ ಬೀಳ್‌ತಾಒಳೊ. ಹಳ್ಳದ ನೀರ್‍ನ ಹಾಳ್ ಮಾಡ್ದು ಕೊಲೆಗೆ ಸಮನಾದ ಅಪರಾದಂತ ಪರಿಗಣಿಸಿ ದಂಡಿಸೋಕುಂತ ನಾವ್ ಸರಕಾರಕ್ಕೆ ಮನವಿ ಮಾಡಿಕಂಡವೆ."

ಈ ಒಂದು ಕಾರ್ಯಕ್ರಮಂದ ಕಾಲೇಜಿಗೆ ತುಂಬಾ ಹೆಸ್ರ್ ಬಾತ್. ಊರ್‍ಲಿ ತಪಸ್ವಿನಿ ರಕ್ಷಣಾ ಸಮಿತಿಯೊಂದು ರೂಪುಗೊಂಡತ್. ಪ್ಲಾಸ್ಟಿಕ್ ಬಳಕೆನ ನಿಷೇದಿಸುವ ಚಳುವಳಿ ನಡ್ತ್. ಮಾಸದ ಅಂಗಡಿಗಳ ತ್ಯಾಜ್ಯಕ್ಕೆ ಕಾಂಪೋಸ್ಟ್ ಗುಂಡಿಗಳ್ನ ಸ್ತಳೀಯ ಆಡಳಿತ ನಿರ್ಮಿಸಿಕೊಟ್ಟತ್. ತ್ಯಾಜ್ಯ ಸಂಸ್ಕರಣಾ ವ್ಯವಸ್ತೆ ಒಂದು ತಲೆ ಎತ್ತಿತ್. ಹಳ್ಳನ ಮಲೀನಗೊಳ್ಸುವವರ್‍ನ ತಪಸ್ವಿನಿ ರಕ್ಷಣಾ ಸಮಿತಿ ವಿಚಾರ್‍ಸಿಕಣಿಕೆ ಸುರಾತ್. ತಪಸ್ವಿನಿ ಸಮುದ್ರಕ್ಕೆ ಸೇರುದನ್ನ ನೋಡಿಕೆ ಆದದ್ದ್ ಅಮ್ಮಣ್ಣಿಗೆ ಕುಸಿತಂದತ್. ಆಗ ಅಜ್ಜನ ನೆಂಪಾತ್. ಒಂದು ದಿನ ಅಜ್ಜನ ಹಾಂಗೆ ತಪಸ್ವಿನಿ ಮೂಲನ

ನೋಡೋಕುಂತೇಳ್ವ ಆಸೆ ಇನ್ನೂ ಹೆಚ್ಚಾತ್.

ಮತ್ತೆ ಮಳೆಗಾಲ ಸುರಾಗಿ ತಪಸ್ವಿನಿ ಸೊಕ್ಕುತ್ತಾ ಬಾತ್. ಒಂದು ದಿನ ಹಿಂಬೊತ್ತು ಕ್ಲಾಸ್ ಮುಗ್ಸಿ ಬಾಳಕ್ಕನೊಟ್ಟಿಗೆ ಮನೆಗೆ ಬಾಕಾಕನ ತಪಸ್ವಿನಿನ ಎರ್ಡೂ ದಂಡೆಗಳ್ಲಿ ತುಂಬಾ ಜನ ಸೇರಿದ್ದೊ. ಅವರ ನಡೂಲಿ ಪೋಲಿಸ್‌ನವೂ ಇದ್ದೊ. ಅಮ್ಮಣ್ಣಿನ ಕೈ ಕಾಲ್‌ಗಳ್ಲಿ ನಡುಕ ಸುರಾತ್. ಬಾಳಕ್ಕನ ಕಣ್ಣ್‌ಲಿ ನೀರ್ ತುಂಬಿತ್. ಅಷ್ಟ್ರಲ್ಲಿ ತಂಗೆ ಶಾರದೆ ಹೈಸ್ಕೂಲ್‌ಂದ ಬಂದ್ ಅವರೊಟ್ಟಿಗೆ ಸೇರ್‌ಕಂತ್.

ಅಳು ಮೋರೆ ಮಾಡಿಕಂಡ್ ಬರುವ ಇವರ್ನ ತೀರ್ಥದ ತ್ಯಾಂಪಣ್ಣ ಗಮನ್‌ಸಿ ಹತ್ರ ಬಾತ್.

"ಮಕ್ಕಳೇ ನೀವೀಗ ಗಟ್ಟಿ ಮನ್ಸ್ ಮಾಡಿಕಣಕು. ನೀವ್ ಶಾಲೆಗೆ ಹೋದ ಮೇಲೆ ನಿಮ್ಮ ಅವ್ವ ತಮ್ಮನೊಟ್ಟಿಗೆ ತಪಸ್ವಿನಿಗೆ ಹಾರ್‌ತ್ತಗಡ. ತೋಟದ ಕೆಲ್ಸದವರ್‌ಂದ ಗೊತ್ತಾತ್. ಹಳ್ಳದುದ್ದಕ್ಕೂ ಹುಡ್ಕುತಾ ಒಳೊ.

ಅವು ತ್ಯಾಂಪಣ್ಣನ ತಬ್ಬಿಕಂಡ್ ಮರ್ಡಿಕೆ ಸುರು ಮಾಡ್ದೊ. ಏನ್ ಮಾಡಿರೂ ಮರ್ಡುದರ್ನ ತಡಿಯಕೆ ಆಗ್ತಿಲ್ಲೆ. ಅವರ್ನ ನೋಡಿ ಚಿಕ್ಕಪ್ಪ ಮತ್ತೆ ಪೋಲೀಸ್ ಮಾವ ಓಡಿಕಂಡ್ ಬಂದೊ.

"ಆದದ್ದ್ ಏನ್‌ಂತ ನಾವ್ಗೆ ಯಾರಿಗೂ ಸರಿಯಾಗಿ ಗೊತ್ತೆ. ಅತ್ತಿಗೆ ಹಳ್ಳಕ್ಕೆ ಹಾರ್ದರ ಕೆಲ್ಸದ ಗುರುವಪ್ಪ ದೂರಂದ ನೋಡಿಟು. ಅವನೇ ಪೋಲೀಸ್‌ನವುಕೆ ಪೋನ್ ಮಾಡ್ದ್. ಅಣ್ಣ ಎಲ್ಲೂ ಕಾಂಬೋದ್ಲೆ. ಅಮ್ಮ ಮತ್ತು ಮಂಜನ ಅಣ್ಣನೇ ಹಳ್ಳಕ್ಕೆ ದೂಡಿರೊಕೂಂತ ಪೋಲೀಸ್‌ನವು ಹೇಳ್‌ತೊಳೊ. ಹಳ್ಳಲಿ ಬಾರಿ ನೀರಿಟ್ಟು, ಎಲ್ಲಿಂತ ಹುಡ್ಕುದು?"

ಮೂರು ಮಕ್ಕ ರಾತ್ರೆನ ಮರ್ಗ್ಟಕಂಡ್ ಕಳ್ದೊ. ಚಿಕ್ಕಪ್ಪ, ಪೋಲೀಸ್ ಮಾವ, ತ್ಯಾಂಪಣ್ಣ ನಿದ್ದೆನೇ ಮಾಡ್ತ್‌ಲೆ. ಅಪ್ಪನ ಹುಚ್ಚಾಟಗಳನ್ನೆಲ್ಲಾ ತಾಳಿಕಂಡ್ ಅವ್ವ ಮಕ್ಕಳ್ನ ಬೆಳ್ಸಿತ್. ತೊದಲು ಮಾತ್‌ಂದ ಸುರು ಮಾಡ್ದ ತಮ್ಮ ಈಗ ಸಣ್ಣ ಸಣ್ಣ ಕತೆಗಳ್ನ ಹೇಳಿಕೆ ಕಲ್ತಿತ್ತ್. ಒಮ್ಮೊಮ್ಮೆ ಅಮ್ಮಣಿಂದ ಯಕ್ಷಗಾನ ಹಾಡ್‌ಗಳ್ನ ಹೇಳ್ಸಿಕಣ್‌ತಿತ್ತ್. ಬಾಳಕ್ಕನೊಟ್ಟಿಗೆ ಕುಣೀತಿತ್ತ್. ನಮ್ಮಿಂದಾಗದ ಎಂಜಿನಿಯರಿಂಗ್ ತಮ್ಮ ಮಾಡ್ಲೂಂತ ಅಕ್ಕಂದರ್ ಬೆಟ್ಟದಷ್ಟ್ ಆಸೆ ಹೊತ್ತಿದ್ದೊ. ಈಗ ತಪಸ್ವಿನಿಲಿ ಮೊಸಿಕೆ ಗೊತ್ತಿರೊವುಕೇ ಮೊಸಿಕೆ ಆಗದಷ್ಟ್ ನೀರುಟ್ಟು. ಅಮ್ಮನ ಮತ್ತೆ ತಮ್ಮನ ಹೆಣನಾದರೂ ಸಿಕ್ಕಿದೆನೋ ಇಲ್ಲೆನೋ? ನೆಂಪು ಮಾಡಿಕಂಡ್ ತಬ್ಬಿಕಂಡ್ ಮೂರ್ ಜನ ಮರ್ಗ್ಲೋ.

ಬೊಳ್ಪಿಗೆ ರಾದ ಚಿಕ್ಕಮ್ಮ ಬಾತ್. ಮನೆನ ಗುಡ್ಸಿ ಒಲೆ ಹೊತ್ತಿಸಿ ಗಂಜಿ ಮಾಡ್ತ್. ಕಾಯಿ ಹೆರ್ದ್ ಕುಡು ಚಟ್ನಿ ಮಾಡಿ ಎಲ್ಲವ್‌ಕೂ ಊಟ ಕೊಟ್ಟತ್.

ಮಕ್ಕಳೇ ಆಗಬಾರ್ದ್ ಆಗಿ ಹೋಗುಟು. ಅಕ್ಕ ಮತ್ತು ಬಾವ ಇಲ್ಲೆಂತೇಳುವ ಸತ್ಯಾನ ನಾವ್ ಒಪ್ಪಿಕಣಕಾದೆ. ಅಮ್ಮಣ್ಣಿ ಮತ್ತು ಬಾಳಕ್ಕ ಮನೆ ನೋಡಿಕಂಬರಿ.

ನಿಮ್ಮ ಓದು ನಿಲ್ಲಿಕಾಗದ್. ತೋಟದ ವ್ಯವಸ್ಥೆ ನೋಡಿಕಂಬಕೆ ಎರ್ಡ್ ದಿನಗಳಿಗೊಮ್ಮೆ ನಿಮ್ಮ ಚಿಕ್ಕಪ್ಪ ಬಂದದೆ. ತ್ಯಾಂಪಣ್ಣ ಇನ್ನ್ ಮುಂದೆ ಮೂರು ಹೊತ್ತು ಇಲ್ಲೇ ಇದ್ದವೆ. ಮೂರು ಹೆಣ್ಮಕ್ಕಳಿರುವಲ್ಲಿ ಒಂದು ಗಂಡಾದ್ರೂ ದಿಕ್ಕ್ ಬೇಕಲ್ಲಾ?"

ಅಂದ್ ಮದ್ಯಾಹ್ನದ ಮೇಲೆ ಕಾಲೇಜಿಂದ ಮಾಸ್ಟ್ರಗ, ಮೇಡಮ್ಮುಗ, ಕ್ಲಾಸ್‌ನ ಮಕ್ಕ ಎಲ್ಲಾ ಬಂದೊ. ಅವರೆಲ್ಲರನ್ನ ನೋಡ್ದ ಮೇಲೆ ಅಮ್ಮಣ್ಣಿಗೆ ಹಂಞ ನೆಮ್ಮದಿ ಆತ್. ಕಷ್ಟಕಾಲಕೆ ಯಾರೂ ಇಲ್ಲೆಂತಾತ್‌ಲೆ ಅಲ್ಲಾ? ಮೇಡಮ್ಮುಗ ಅಮ್ಮಣ್ಣಿನ, ಬಾಳಕ್ಕನ, ಶಾರದೆನ ತಬ್ಬಿಕಂಡ್ ಸಮಾದಾನ ಮಾಡ್ದೊ.ಇತಿಹಾಸದ ಮಾಸ್ಟ್ರ ಒಂದು ಚೀಟಿ ಕೊಟ್ಟು ಹೇಳ್ದೊ.

"ಬಾಗವತರೇ ಇದರ್ಲಿ ಎರಡ್ ನಂಬ್ರ ಉಟ್ಟು. ಒಂದು ಲ್ಯಾಂಡ್‌ಲೈನ್, ಇನ್ನೊಂದು ಮೊಬೈಲ್. ಏನೇ ತೊಂದರೆಯಿದ್ದರೂ ತಿಳ್ಸೋಕು. ಇಡೀ ಕಾಲೇಜ್ ನಿಮ್ಮ ಜತೆಗುಟ್ಟು. ಆಗಾಗ ಇಲ್ಲಿಗೆ ಬಂದು ಹೋಕೆ ನಾವ್ಗೆ ಕಷ್ಟ ಆದು. ಅಗತ್ಯ ಬಾಕನ ಬಂದೇ ಬಂದವೆ. ಪೋಲಿಸರ್ಗೆ ದೂರು ಕೊಟ್ಬಾಗುಟೋ?"

"ನಿನ್ನೆ ನಾವ್ ಬಾಕನ ಪೋಲಿಸರ್ ಇಲ್ಲೆ ಇದ್ದೊ ಸರ್. ಅವ್ವನ ತಮ್ಮನೂ ಪೋಲೀಸ್. ದೂರು ಕೊಟ್ಟಳನೋ ಇಲ್ಲೆನೋ ಸರಿಯಾಗಿ ಗೊತ್ಲೆ. ದೂರು ಕೊಟ್ಟು ಇನ್ನೇನ್ ಆಕುಟ್ಟು ಸರ್. ಅಮ್ಮ ಮತ್ತು ತಮ್ಮ ಮತ್ತೆ ಬಂದೆವೆನಾ? ಅಪ್ಪನೂ ಹೋಗಿ ಬುಟ್ಟೊಳೊ."

ಅಮ್ಮಣ್ಣಿ ದುಕ್ಕಳ್ಸಿತ್. ಮಾಸ್ಟ್ರ ಕರುಣೆಂದ ಅವಳ್ನ ನೋಡ್ದೊ.

"ನಾನೀಗ ಏನ್ ಹೇಳಿರೂ ನಿಂಗಾದ ಬೇನೆ, ಬೇಜಾರ ಕಡಿಮೆ ಆಕಿಲೆ. ನಮ್ಮ ಕೈ ಮೀರಿದ ಗಟನೆಗಳ್‌ಂದ ಮನಸ್ಸ್‌ನ ದೈರ್ಯ ಕಳ್ಕಣ್ಕೆ ಆಗದ್. ಮನೆಲಿ ಕುದ್ದರೂ ಬೇಜಾರ ಕಾಡಿದೆ. ನಾಳೆ ಕ್ಲಾಸಿಗೆ ಬಾ. ತಂಗಿಯಂದಿರ್ ಕೂಡ ಹೋಗಲಿ."

ಅಷ್ಟ್ ಹೊತ್ತಿಗೆ ತ್ಯಾಂಪಣ್ಣ ಅಲ್ಲಿಗೆ ಬಾತ್.

"ಇವು ನಮ್ಮ ಅಜ್ಜನ ದೋಸ್ತಿಗ. ಈಗ ನಾವ್ಗೆ ಅಜ್ಜ, ಅಪ್ಪ ಎಲ್ಲಾ ಇವೇ. ಅವ್ವನೂ ಇಲ್ಲದ ಈ ಹೊತ್ತು ಇವು ಇಲ್ಲದೇ ಇರ್‌ತ್ತಿದ್ದರೆ ನಾವು ಮೂರು ಜನ ತಪಸ್ವಿನಿಗೆ ಹಾರಕ್ಕಾಗಿತ್ತ್."

ಅವ್ಳಿಗೆ ಮತ್ತೊಮ್ಮೆ ಮರ್ಡಿಕೆ ಬಾತ್. ತ್ಯಾಂಪಣ್ಣ ಮಾಸ್ಟ್ರಿಗೆ ಕೈ ಮುಗ್ತ್.

"ನೀವು ಇತಿಹಾಸದ ಮಾಸ್ಟ್ರ ಅಲ್ಲಾ? ಇವ್ಳ್ ಯಾಗೋಳು ನಿಮ್ಮ ಬಗ್ಗೆ ಹೇಳ್ತಲೇ ಇದ್ದದೆ. ನಿಮ್ಮಿಂದಾಗಿ ನಮ್ಮ ಗೂಡೆ ಕಾಲೇಜ್ ಮೆಟ್ಲ್ ಹತ್ತಿದಹಂಗೆ ಆತ್. ನಂಗೂ ನಿಮ್ಮಿಂದ ಉಪಕಾರ ಆಗುಟು. ಮೊದ್ಲ್ ಇವೆಲ್ಲಾ ತೀರ್ತದ ತ್ಯಾಂಪಣ್ಣ ಅಂತೇಳಿ ಕರೀತಿದ್ದೊ. ಈಗ ವಿಜ್ಞಾನಿ ತ್ಯಾಂಪಣ್ಣಂತ ಕರ್ದವೆ."

ನೆಗೆ ಬಾರದ ಆ ಸಮಯಲೂ ನೆಗೆ ಬಾತ್. ಮಾಸ್ಟ್ರ ತ್ಯಾಂಪಣ್ಣನ ಕೈ ಹಿಡ್ಕೊಂಡೊ.

"ತಪ್ಪು ತಿಳೀಬೇಡಿ ತ್ಯಾಂಪಣ್ಣ. ಕಾಲೇಜಿಗೆ ಬರುವ ಮಕ್ಕಳ್ದ್ ಮದುವೆ ಪ್ರಾಯ. ಅವರ್ನ ಪಾಟದ ಕಡೆಗೆ ಗಮನ ಕೊಡುವಂಗೆ ಮಾಡ್ದು ಸುಲಬದ ಮಾತಲ್ಲ. ಇಂತದೆಲ್ಲಾ ಹೇಳಿ ನೆಗಾಡ್ಸಿ ಮತ್ತೆ ಪಾಟ ಮಾಡಿರೆ ಒಂದಿಷ್ಟಾದ್ರ್ ಅವರ ತಲೆಯೊಳಗೆ ಹೊಗುದು. ಅದನ್ನ ಇವ್ಳ್ ನಿಮ್ಮ ಮೇಲೆ ಪ್ರಯೋಗ ಮಾಡಿಟೂಂತ ನಂಗೇನ್ ಗೊತ್ತು? ನೀವ್ಗೆ ಬೇಜಾರ ಇಲ್ಲೆ ತಾನೇ?"

"ಚೆ, ಚೆ, ನಾನ್ ಕುಸಾಲಿಗೆ ಹೇಳ್ದ್. ಇವ್ಳ ಮರ್ಣನೆ ಕೇಳಿಕಾಕನ ಕಾಲೇಜ್ ಜೀವನ ಎಷ್ಟ್ ಲಾಯ್ಕಂತನ್ನಿಸಿದೆ. ನಾವ್ಗಿಲ್ಲದ ಬಾಗ್ಯ ಈಗಿನವ್ಕಾದರೂ ಸಿಕ್ಕುತ್ತುಟ್ಟಲ್ಲಾ?"

ವಾತಾವರಣ ತಿಳಿಯಾಗ್‌ತಿತ್ತ್. ಅವರ ಮಾತ್ ಮುಗಿತ್ತಿದ್ದಾಂಗೆ ಮಂಜುನಾಥ ಬಾಗವತರ್, ಮಾಲಿಂಗ ಮಾವ ಮತ್ತೆ ಸತ್ಯಣ್ಣ ಬಂದೊ. ಅವರ್ನ ನೋಡ್ಕನ ಅಮ್ಮಣ್ಣಿ ಮತ್ತು ಬಾಳಕ್ಕನ ಕಣ್ಣ್‌ಲಿ ನೀರ್ ತುಂಬಿತ್.ಗುರುಗ ಅವರ ತಲೆ ನೇವರಿಸಿದೊ.

"ಮರ್‍ಡ್‌ಬೇಡಿ ಮಕ್ಕಳೇ, ಹುಟ್ಟಿದವೆಲ್ಲಾ ಸಾಯಲೇ ಬೇಕಲ್ಲ. ಕೆಲವು ಬೇಗ ಸಾಯುವಂತದ್ ಬೇಸರ. ಬಗವದ್ಗೀತೆಲಿ ಜಾತಸ್ಯ ಹಿ ಧ್ರುವೋಮೃತ್ಯುರ್ ಧ್ರುವೋಜನ್ಮ ಮೃತಸ್ಯಚ ಅಂತ ಹೇಳಿಟು ನಮ್ಮ ಮುರಳೀ ಕೃಷ್ಣ. ಸತ್ತವು ಮತ್ತೆ ಹುಟ್ಟುವೆನೋ ನಂಗೆ ಗೊತ್ತು ಸಾಲ್ದ್. ಕೆಲವು ಸಂಗತಿಗ ನಮ್ಮ ನಿಯಂತ್ರಣ ಮೀರಿ ನಡ್ದದೆ. ಅದನ್ನೇ ನಾವು ವಿದಿ ಅಂತ ಹೇಳ್ದು. ಉಪದೇಶ ಮಾಡ್‌ತ್ತೊಳಂತಾ ತಿಳ್ಕಂಬಡಿ. ವಾಸ್ತವ ವಿಚಾರನೇ ಹೇಳುತ್ತೊಳೆ. ಜೀವನನ ಬಂದಂಗೆ ಅನುಬವಿಸಕಾದೆ. ಕೆಲವೊಮ್ಮೆ ಬೇರೇನೂ ಮಾಡಿಕೆ ನಮ್ಮಿಂದ ಆದುಲೆ."

ಗುರುಗ ಇತಿಹಾಸದ ಮಾಸ್ಟ್ರನ ಗುರ್ತಿಸಿದೊ.

"ತುಂಬಾ ದಿನಾತ್ ನಿಮ್ಮ ಕಂಡ್. ಇಲ್ಲಿ ಹೇಳುತ್ತೊಳೆಂತ ತಪ್ಪು ತಿಳ್ಕಂಬಡಿ. ಈ ಸರ್ತಿ ನಮ್ಮ ಕಲಾಶಾಲೇನ ವಾರ್ಷಿಕ ಹಬ್ಬಕ್ಕೆ ನಿಮ್ಮನ್ನೇ ಮುಖ್ಯ ಅತಿಥಿಯಾಗಿ ಕರೆಕೊಂತೊಳೊ. ನಿಮ್ಮ ಹೆಣ್ಣ್ ವೇಷಕ್ಕೆ ಒಳ್ಳ ಹೆಸರುಟ್ಟು. ಪಂಚವಟಿ ಪ್ರಸಂಗ ಇಸಿ ನಿಮ್ಮಿಂದ ಶೂರ್ಪನಖಿ ಮಾಡ್ಸೊಕುಂತೊಳೆ."

ಮಾಸ್ಟ್ರ ಅಮ್ಮಣ್ಣಿಯ ಮೋರೆ ನೋಡ್ದೊ. ತರಗತಿನ ಶೂರ್ಪನಖಿ ಪ್ರಕರಣ ನೆನಪಾಗಿ ಅವ್ಳ ಮೋರೆಲಿ ನಗೆ ಮೂಡ್ತ್. ಅವ್ಳ್ ತಂಗಿಯರ ಮೋರೆ ನೋಡ್ತ್. ಬೊಳ್ಪಿಗೆ ಇದ್ದ ನೋವು ಈಗ ಮೋರೆಗಳ್ಲಿ ಇತ್ಲೆ.

ಮಾರ್ನೆ ದಿನ ಅವ್ವನ ಶರ್‍ರ ದೇವಸ್ತಾನಂದ ಕೆಳಗೆ ಕುದ್ರೆಕಯದ ಹತ್ರ ಸಿಕ್ಕಿತ್. ಶರ್‍ರನ ಗುರ್ತಿಸಿಕೆ ಪೋಲೀಸ್‌ನವು ಅಮ್ಮಣ್ಣಿ ಬಾಳಕ್ಕನ ಕಾಲೇಜಿಂದ ಕರ್ಕಂಡ್ ಹೋದ್ದೋ. ಅವ್ವನ ಮೋರೆನ ಮೀನ್‌ಗ ತಿಂದ್ ಹಾಕಿದ್ದೊ. ಉಟ್ಟ್‌ಕಂಡಿದ್ದ ಸೀರೆಂದ ಅದ್ ಅವ್ವನ ಶರ್‍ರಂತ ಗೊತ್ತಾದದ್ದ್. ಆ ಅವಸ್ಥೆಲಿ ಅವ್ವನ ನೋಡಿ ಎಷ್ಟ್ ತಡ್‌ಕಂಡ್ರನೂ ಮರ್‍ಡಿಕೆ ಬಂದೇಬುಟ್ಟತ್.

ಬಾಳಕ್ಕ ದೊಡ್ಡ ಸ್ವರ ತೆಗ್ದ್ ಮರ್ವತ್. ಕನ್ನಡ ಮತ್ತೆ ಇಂಗ್ಲೀಷ್ ಮೇಡಮ್‌ಗ ಅವರ್ನ ತಬ್ಬಿಕಂಡ್ ಸಮದಾನಿಸಿದೊ.

ಪೋಸ್ಟ್ ಮಾರ್ಟಂ ಮಾಡ್ದ ಡಾಕ್ಟ್ರ ನೀರಿಗೆ ಬೀಳುವ ಮುಂದೇನೇ ಸಾವು ಸಂಬವಿಸಿಟ್ಟೂಂತ ಹೇಳಿಕೆ ಕೊಟ್ಟೊ, ಶ್ವಾಸಕೋಶಗಳ್ಲಿ ನೀರಿತ್ಲೆ. ರಿಪೋರ್ಟ್ ನೋಡಿ ಇನ್ಸ್‌ಪೆಕ್ಟರ್ ಏರ್ ಸ್ವರಲಿ ಹೇಳ್ದೊ.

"ಕೊಂದೇ ಹಾಕಿಟು ಸೂಳೇ ಮಂಜ. ಅದ್‌ಕ್ಕೆ ತಲೆ ಮರ್ಸಿಕಂಡದ್. ಎಷ್ಟ್ ದಿನಾಂತ ನಾವು ನೋಡ್ವೆ."

ಅಮ್ಮಣ್ಣಿಗೆ ಈ ಮಾತ್ ಕೇಳಿ ಮತ್ತೆ ಅಳ್ಗೆಲ್ ಬಾತ್. ಅವ್ವನ ಶರ್ತ್ರ ಸಿಕ್ಕಿತ್. ತಮ್ಮಂದ್? ಅಪ್ಪ ತಪಸ್ವಿನಿಗೆ ಹಾರಿರ್‍ದೋ?

ಸರ್‌ಕಾರಿ ಆಸ್ಪತ್ರೆನ ಹತ್ರದ ರುದ್ರಬೂಮಿಲಿ ಅವ್ವನ ಕಾಟಕ್ಕೆ ಇಸಿ ಸುಟ್ಟೊ. ಇಡೀ ಕಾಲೇಜೇ ಅಲ್ಲಿ ನೆರ್ದಿತ್ತ್. ಎಲ್ಲಾ ಮುಗ್ದ ಮೇಲೆ ಸೋತ ಹೆಜ್ಜೆಲಿ ಅವ್‌ಳು ತಂಗೆನೊಟ್ಟಿಗೆ ಮನೆಗೆ ಹೊರ್‌ಟತ್. ಪೋಲೀಸ್ ಮಾವ ಅವರ್ನ ಜೀಪ್‌ಲಿ ಪಾಲದವರೇಗೆ ಕರ್ಕಂಡ್ ಬಂದ್ ಬುಟ್ಟುಹೋತು. ಮನೆಗೆ ಹೋದವು ಮೊದ್ ಚಾವಡಿಲಿ ಬಿದ್ದ್‌ಕಂಡೊ.

ನಾಯಿ ಬೊಗಳಿಕಾಕನ ಅವ್ಳ ಮಂಪರ್ ಹರ್ತ್. ಕಣ್ಣುಜ್ಜಿಕಂಡ್ ಅವ್ಳ್ ಹೊರಗೆ ಬಾತ್. ಮದ್ಯ ಪ್ರಾಯದ ಹೆಂಗ್ಸ್ ಒಬ್ಳು ಒಂದು ಕೂಸುನ ನಡ್ಸಿಕಂಡ್ ಬರ್‍ತಾ ಇತ್ತ್.

"ಪ್ರಸಾದಾ!"

ಅವ್ಳ್ ಆಶ್ಚರ್ಯದ ಉದ್ಗಾರ ತೆಗ್ದ್ ಆಶ್ಚರ್ಯಂದ ಅಲ್ಲೇ ನಿತ್ತ್ ಬುಟ್ಟತ್. ಅವಳ ಸೊರಕ್ಕೆ ತ್ಯಾಂಪಣ್ಣ ಮತ್ತು ತಂಗೇಗ ಗಡಿಬಿಡಿಂದ ಬಂದ್ ನೋಡ್ದೋ.

ಅಮ್ಮಣ್ಣಿ ತಮ್ಮನ ಗಟ್ಟಿಯಾಗಿ ತಬ್ಬಿಕಂಡತ್.

"ನೀನಾದರೂ ನಮ್ಮ ಪಾಲಿಗೆ ಉಳ್ಕಂಡೊಳಲ್ಲ ಚಿನ್ನ! ಇದ್ ಏನ್ ಕತೆ? ನೀವ್ ಯಾರ್?"

"ತ್ಯಾಂಪಣ್ಣಂಗೆ ನನ್ನ ಗೊತ್ತುಟು. ನಿಮ್ಮ ಅಪ್ಪ ಮದುವೆಯಾದದ್ದ್ ನನ್ನನ್ನೇ. ಕೂಸು ಸತ್ತುಹೋಗುಟುಂತ ಪೇಪರ್ಲಿ ಬಂದದ್ ನೋಡ್ದೆ. ಮನ್‌ಸ್ ತಡ್ತ್‌ಲೆ. ಕೂಸುನ ಕರ್ಕಂಡ್ ಬಂದ್‌ಬುಟ್ಟೆ."

ಅಮ್ಮಣ್ಣಿ ವಾಸ್ತವಕೆ ಬಾತ್.

"ನಿಜವಾಗಿ ನಡ್‌ದದ್ದ್ ಎಂತ?"

"ಹೇಳ್ನೆ ಕೇಳಿ. ನಿಮ್ಮ ಅಪ್ಪ ಬ್ರಹ್ಮಕಲಶಕ್ಕೆಂತೇಳಿ ನನ್ನ ಕೈಯಿಂದ ಎರಡ್ ಲಕ್ಷ ತಕಂಡಿತ್. ನನ್ನಲ್ಲಿ ದುಡ್ಡು ಎಲ್ಲಿದ್ದದೆ. ನಾನ್ ಅಣ್ಣಂದಿರೊಟ್ಟಿಗೆ ಕೇಳಿ ತೆಗ್ದ್

ಕೊಟ್ಟೆ. ಈಗ ಅಡ್ಕೆಗೆ ಹಳದಿ ರೋಗ ಬಂದ್ ಅಡ್ಕೆ ಬೆಳೆ ಎಲ್ಲಾ ಹಾಳಾಗುಟು. ಕೊಳೆರೋಗನೂ ಬೇರೆ. ಬದ್ಕಿಕೆ ಹಣ ಬೇಕಲ್ಲಾ? ಅವು ನಿನ್ನ ಅಪ್ಪನೊಟ್ಟಿಗೆ ಸಾಲ ವಾಪಾಸ್ ಕೊಡುವಂಗೆ ಕೇಳ್ದೊ. ಅವು ಕೂಡ ಅಷ್ಟಮಂಗಲ, ಬೂತಸ್ಥಾನದ ಬ್ರಹ್ಮಕಲಶ, ಪ್ರೇತಶಾಂತಿ, ಕುಲೆ ಮದುವೆಂತ ಇದ್ದದ್ದೆಲ್ಲಾ ಖರ್ಚ್‌ಮಾಡಿ ಕುದ್ದಿದ್ದೊ. ಎಲ್ಲಿಂದ ಕೊಡಿಕಾದೆ? ಅವು ನಿನ್ನ ಅವ್ವನ ಚಿನ್ನನ ಅಡವು ಇಸಿ ಸಾಲ ತೆಗೆಕೂಂತ ಇದ್ದೊ. ನಿನ್ನ ಅವ್ವ ಚಿನ್ನ ಕೊಡಿಕೆ ಒಪ್ಪಿತ್ಲೆ. ದೊಡ್ಡ ಜಗಳನೇ ನಡ್ದ್ ಹೋತ್‌ಗಡ. ನೀನ್ ಚಿನ್ನ ಕೊಡದಿದ್ದರೆ ಮಂಜನ ನಾನ್ ತಕಂಡ್ ಹೋನೆಂತೇಳಿ ಪ್ರಸಾದನ ಎತ್ತಿಕಂಡ್ ಓಡಿಕೆ ಸುರು ಮಾಡ್ದೊಗಡ. ಹೆದ್ರಿ ನಿಮ್ಮ ಅವ್ವ ಹಿಂದೆಂದ ಓಡಿಕಂಡ್ ಬಂದೊಳ. ಗಡಿಬಿಡಿಲಿ ಪಾಲಲಿ ಕಾಲ್ ಜಾರಿಟು. ಅವ್ವ ಕಿರ್ಚಿದರ ಕೇಳಿ ಪಾಲ ದಾಟಿದ್ದ ಅಪ್ಪ ತಿರ್ಗಿ ನೋಡ್ಯೊಳೊ. ಅವ್ವ ನೀರಿಗೆ ಬಿದ್ದದ್ ಗೊತ್ತಾಗಿ ಹಂಞ ಹೊತ್ತ್ ಏನ್ ಮಾಡಕೂಂತ ಗೊತ್ತಾಗದೆ ಹಾಂಗೆ ನಿಂತೊಳೊ. ಆ ಮಾರಿ ಬೊಳ್ಳಲಿ ನಿಮ್ಮ ಅವ್ವನ ಕಾಪಾಡ್ದು ಕಷ್ಟಾಂತ ಗೊತ್ತಾಗಿ ಎಲ್ಲರ ಕಣ್‌ತಪ್ಪಿ ಹೇಂಗೋ ನಮ್ಮಲ್ಲಿಗೆ ಬಂದೊಳೊ. ಇವನ ನನ್ನ ಹತ್ರ ಬುಟ್ಟು ಎಲ್ಲಾ ವಿಷಯನ ಹೇಳ್ದೊ. ಈಗ ನಾನ್ ಸತ್ಯ ಹೇಳಿರೆ ಯಾರೂ ನಂಬಿಕಿಲ್ಲೆ. ನಾನ್ ಶಾಶ್ವತವಾಗಿ ಜೈಲಿಲಿ ಕೊಳಕಾದೆ. ನಿನ್ನಲ್ಲಿ ಇರುವಷ್ಟು ದುಡ್ಡು ಕೊಡೂಂತೇಳ್ದೊ. ಐದ್ ಸಾವಿರ ಇತ್ತ್. ಅದೆಲ್ಲಾ ಕೊಟ್ಟೆ. ಕುತ್ತಿಗೆಲಿದ್ದ ಚೈನ್ ಸಹ ಬಿಚ್ಚಿಕೊಟ್ಟೆ. ಯೋಗ ಇದ್ದರೆ ನಿಮ್ಮ ಮತ್ತೆ ನೋಡುವೆಂತೇಳಿ ಇವನ ತಬ್ಬಿ ಹಿಡ್ದ್ ಮುತ್ತು ಕೊಟ್ಟು ಕಣ್ಣೀರ್ ಹಾಕಿ ಹೋಗಿ ಬುಟ್ರೊ. ಎಲ್ಲಿಗೇಂತ ನಾ ಕೇಳ್ತ್‌ಲೆ. ಎಲ್ಲಿಗೇಂತ ಅವ್‌ಕೂ ಗೊತ್ತಿತ್ಲೆ".

ಹಂಞ ಹೊತ್ತು ಸುಮ್ಮನಿದ್ದ್ ಮತ್ತೆ ಅಮ್ಮಣ್ಣಿ ಕೇಳ್ತ್,

"ನೀರಿಗೆ ಬೀಳಿಕೆ ಮುಂದೆನೇ ಅವ್ವನ ಜೀವ ಹೋಗುಟುಂತ ಪೋಸ್ಟ್‌ಮಾರ್ಟಂ ರಿಪೋರ್ಟ್ ಹೇಳ್ದೆಲ್ಲಾ? ಹಾಂಗಾದರೆ ಅದ್ ಸುಳ್ಳೋ?"

"ಡಾಕ್ಟ್ರ ಯಾಕೆ ಸುಳ್ಳು ಹೇಳೋಕು ಅಮ್ಮಣ್ಣಿ? ಕಾಲ್‌ಜಾರಿ ಕೆಳಗೆ ನೀರಿಗೆ ಬೀಳಿಕಾಕನ ಆ ಮಾರಿ ಪ್ರವಾಹನ ನೋಡಿ ಅವ್ವನ ಉಸ್ರಾಟ ನಿತ್ತಿರೊಕು. ಹಾವುನ ವಿಷಯಲೂ ಹಂಗಾದೆ ಗಡ. ಹಾವ್‌ನ ನೋಡ್ದವು ಅದ್ ಕಚ್ಚುದುದೂಂತೇಳ್ವ ಹೆದ್ರಿಕೆಂದ ಜೀವ ಬುಟ್ಟ ಸಂಗತೀನ ನಾ ಕೇಳಿಯೊಳೆ. ಪುಣ್ಯಕ್ಕೆ ಇಂವಾದ್ರೂ ಉಳ್ದುಟ್ಟಲ್ಲಾ? ಬೇಗ ಶಿವಪ್ಪಂಗೆ ಮತ್ತೆ ಪೋಲೀಸ್ ಮಾವಂಗೆ ಪೋನ್ ಮಾಡ್. ಸ್ಟೇಶನಿಗೂ ತಿಳ್ಸಿ ಬುಡು."

ರಾತ್ರಿ ಪೋಲಿಸ್ ಜೀಪ್ ಬಾತ್. ಪೋಲೀಸ್ ಮಾವ ಚಿಕ್ಕಪ್ಪನೊಟ್ಟಿಗೆ ಜೀಪುಂದ ಇಳ್ದೊ. ಚಿಕ್ಕಮ್ಮನ ಹೇಳಿಕೆ ಪಡ್ದ್ ಎಸ್ಸೈ ಹೇಳ್ದೊ,

"ಏನೆ ಆದ್ರೂ ಚಿನ್ನಪ್ಪ ತಪ್ಪುಗಾರನಾದೆ. ಈ ಅಮ್ಮ ಹೇಳುವ ಹಾಂಗೆ ನಿಮ್ಮ ಅವ್ವ ನೀರಿಗೆ ಬೀಳಿಕೆ ಮುಂದೆನೆ ಹೃದಯಕ್ರಿಯೆ ನಿತ್ತ್ ಸತ್ತಿರ್ದು ನಿಜ. ಆದರೂ ಚಿನ್ನಪ್ಪ ಆಪಾದನೆಂದ ತಪ್ಪಿಸಿಕಂಬ ಹಾಂಗಿಲ್ಲೆ. ಅಂವ ಕೂಸುನ ಎತ್ತಿಕಂಡ್ ಹೋಗದಿರ್ತಿದ್ದರೆ ಅಮ್ಮ ಪಾಲದ ಕಡೆಗೆ ಹೋಗುವ ಸಂಗತಿನೇ ಬಾತಿತ್ಲೆ. ಅಂವ ಎಲ್ಲೇ ಇರ್ಲಿ ನಾವು ಬಂದಿಸೊಕಾದೆ. ಮುಂದಿನದ್ ನ್ಯಾಯಾಲಯಕ್ಕೆ ಬುಟ್ಟ ವಿಷಯ. ನೀನೇನ್ ಮಾಡಿಯಾ ಕೃಷ್ಣಪ್ಪಾ? ಇಲ್ಲಿ ಉಳ್ದಿಯನಾ ಅಲ್ಲ ನಮ್ಮೊಟ್ಟಿಗೆ ಬಂದಿಯನಾ?"

"ಅಕ್ಕ ಇಲ್ಲದ ಮನೇಲಿ ಉಳಿಯಕ್ಕೆ ಮನ್ಸ್ ಬರ್ತಿಲ್ಲೆ ಸರ್. ನಿಮ್ಮೊಟ್ಟಿಗೆ ಬಂದ್‌ಬುಟ್ಟನೆ."

ಚಿಕ್ಕಪ್ಪನೂ ಹೊರ್‌ಟತ್. ಎಲ್ಲವೂ ಹೋದ ಮೇಲೆ ಹೊಸ ಚಿಕ್ಕವ ಹೇಳ್ತ್,

"ಅವ್ವ ಇಲ್ಲೆಂತೇಳಿ ಚಿಂತಿಸುದು ಬೇಡ ಮಕ್ಕಳೆ. ನಾನೊಳೆ. ನಿಮ್ಮ ಅಪ್ಪ ಬದ್ಕಿದ್ದರೆ ಇನ್ನೆಂದೂ ಈ ಊರಿಗೆ ಕಾಲ್ ಇಸಿಕಿಲ್ಲೆ. ಬಂದರೆ ಪೋಲೀಸ್‌ನವು ಬುಟ್ಟವೆನಾ? ನನ್ನ ಹೊಟ್ಟೆಲಿ ಒಂದು ಹುಳಾನೂ ಹುಟ್ಟಿತ್ಲೆ. ಬೇಜಾರಿಲ್ಲೆ. ಅಪ್ಪನ ಸಾಲ ಬಾಕಿ ಉಟ್ಟಲ್ಲಾ? ನನ್ನ ಜಾಗನ ಅಣ್ಣಂದಿರಿಗೆ ಕೊಟ್ಟರೆ ಆ ಸಾಲ ತೀರ್ದೆ. ನಾನ್ ನೀವ್ಗೆ ಅವ್ವನಾಗಿ ಇಲ್ಲೇ ಇದ್ದನೆ. ಆದರೂ ಒಂದು ಮಾತ್. ನೀವ್ಗೆ ಇಷ್ಟ ಇಲ್ಲೆಂತಾದರೆ ನಾನ್ ಹೋನೆ."

ಅಮ್ಮಣ್ಣಿ ಅವಳ ಕೈ ಹಿಡ್ಕಣ್ತ್.

"ಎಂತ ಮಾತಾಡ್ದು ಚಿಕ್ಕವ್ವ ನೀವು? ಅಂದ್‌ಂದ್ಲೆ ಅಷ್ಟೆ. ನಮ್ಮ ಪಾಲಿಗೆ ಅಪ್ಪ ಇದ್ದೂ ಇಲ್ಲದ ಹಾಂಗೆ ಇದ್ದೊ. ಆದರೆ ಅವ್ವ ಇತ್ತ್. ಈಗ ಅವಳ್ನೂ ಕಳಕೊಂಡೊಳೊ. ನೀವು ನಮ್ಮ ಅವ್ವ ಆಕೆ ಬಂದೊಳರಿ. ನಮ್ಮ ಪುಣ್ಯ. ಇನ್ನ್ ಮುಂದೆ ನಾವು ನಿಮ್ಮ ಮಕ್ಕ."

ಚಿಕ್ಕವ್ವ ರುಚಿಯಾದ ಅಡಿಗೆ ಮಾಡ್ತ್. ಮೀದ್ ಬಿಸಿಬಿಸಿ ಊಟಾದ ಮೇಲೆ ಎಲ್ಲವೂ ಚಾವಡಿಲಿ ಮಲ್ಗಿದೊ. ಅಮ್ಮಣ್ಣಿಗೆ ತುಂಬಾ ಹೊತ್ತು ನಿದ್ದೆನೇ ಬಾತ್ಲೆ. ಅಷ್ಟಮಂಗಲ ಪ್ರಶ್ನೆ ಹಾಕಿ, ಬೂತಸ್ತಾನದ ಬ್ರಹ್ಮಕಲಶ ಮಾಡಿ, ಪ್ರೇತಶಾಂತಿ ಕುಲೆ ಮದುವೆಯಾದರೆ ಮನೇಲಿ ಸುಖ, ಶಾಂತಿ ನೆಲ್ಸಿದೇಂತಾ ಬೊಳಂತಾಯ ಬಟ್ರ್ ಹೇಳಿದ್ದೊ. ಮನೆಯ ಶಾಂತಿಗಾಗಿ ಸಾಲ ಮಾಡಿ ಆ ಕಾರ್ಯ ಎಲ್ಲಾ ಮಾಡಿದ್ದೊ.

ಈಗ ಅಮ್ಮನೇ ದುರ್ಮರಣಕ್ಕೆ ಈಡಾಗುಟ್ಟು. ಅಪ್ಪ ಬದುಕಿರ್‌ದ್ದೊ? ಅಲ್ಲಾ ಕೆಳಗೆಲ್ಲೋ ತಪಸ್ವಿನಿಗೆ ಹಾರಿ ಪ್ರಾಣ ಕಳ್ಕಂಡನೋ?

ಅಮ್ಮಣ್ಣಿ ತಿರ್‌ಗಿ ಮಲ್‌ಗಿತ್. ಅಜ್ಜಿ ನೀರಿಗೆ ಹಾರಿ ಸತ್ತದ್ದಕ್ಕೆ ಪ್ರೇತ ಶಾಂತಿ ಆತ್. ಅಪ್ಪನ ಅಕ್ಕಂಗೆ ಕುಲೆ ಮದುವೆ ಆತ್. ಈಗ ಅವ್ವ ಸತ್ತುಟು. ಬೊಳಂತಾಯ ಬಟ್ರ್‌ನ ಕರ್ಸಿ ಅಷ್ಟಮಂಗಲ ಹಾಕಿರೆ ಅವು ಪ್ರೇತ ಆಗುಟೂಂತ ಹೇಳಿವೆ. ಮತ್ತೊಮ್ಮೆ ಬ್ರಹ್ಮಕಲಶ ಆಕು. ಸಾಲ ಮಾಡೋಕು. ಆ ಸಾಲ ತೀರ್ಸದೆ ಇರಿಕಾಕನ ಇನ್ನೊಂದು ದುರ್ಮರಣ ಆದು. ಮತ್ತೆ ಅಷ್ಟಮಂಗಲ, ಬ್ರಹ್ಮಕಲಶ, ಮತ್ತೊಂದು ದುರ್ಮರಣ ಅವರ ಜೋಳಿಗೆ ತುಂಬಿದೆ. ನಮ್ಮದ್...? ಮೂರರ ಜಾವದ ಕೋಳಿ ಕೂಂಗಿಕಾಕನ ಅಮ್ಮಣ್ಣಿಗೆ ಜೋಂಪು ಹತ್ತಿತ್.

ಮಾರ್ನೆ ದಿನ ಚಿಕ್ಕಪ್ಪ ರಾದ ಚಿಕ್ಕವನೊಟ್ಟಿಗೆ ಬಾತ್. ಎಲ್ಲರ್ನ ಚಾವಡಿಗೆ ಕರ್ದ್ ಒಂದು ಪ್ರಸ್ತಾಪ ಇಸಿತ್.

“ನಾನ್ ಮತ್ತು ನಿಮ್ಮ ರಾದ ಚಿಕ್ಕಮ್ಮ ತುಂಬಾ ಯೋಚನೆ ಮಾಡಿ ಒಂದು ತೀರ್ಮಾನಕೆ ಬಂದೊಳೊ. ಮದ್ವೆಯಾಗಿ ಇಷ್ಟ್ ವರ್ಷ ಆದರೂ ನಾವ್ಗೆ ಮಕ್ಕಳಾತ್ಲೆ. ಆ ಕಪಿಲೇಶ್ವರ ನಮ್ಮ ಹಣೇಲಿ ಮಕ್ಕಳ ಯೋಗ ಬರ್ದಿಲ್ಲೆಂತ ಕಂಡದೆ. ನಾವ್ ಶಾರದೆ ಮತ್ತು ಪ್ರಸಾದನ ದತ್ತು ತೆಕಂಡರೆ ಹೇಂಗೆಂತೇಳ್ವ ಯೋಚನೆ ಉಟ್ಟು. ಅಮ್ಮಣ್ಣಿ ಮತ್ತು ಬಾಳಕ್ಕ ಆರಾಮಲಿ ಓದಕ್. ಕುಸುಮ ಅತ್ತಿಗೆ ದೇವ್ರು ಪಾದ ಸೇರ್ದೊ. ಅವರ ಜಾಗಕೆ ನೀವ್ಗೆ ಹೊಸ ಅವ್ವ ಬಂದುಟು. ಮೊದ್ಲಿಂದಲೂ ನಿಮ್ಮನ್ನ ಮಕ್ಕಳ ಹಾಂಗೆ ಕಂಡವು ತ್ಯಾಂಪಣ್ಣ. ಅವರ್ದ್ ಒಂಟಿ ಜೀವ. ನಿಮ್ಮ ಬುಟ್ಟರೆ ಅವ್ಕೆ ಬೇರೆ ಯಾರೂ ಇಲ್ಲೆ. ಅವುನೂ ಇಲ್ಲೇ ಇದ್ದವೆ. ಈ ಆಸ್ತಿಲಿ ನಂಗೆ ಒಂದಿಷ್ಟೂ ಬೇಡ. ಪೂರ್ತಿಯಾಗಿ ಬಾಳಕ್ಕಂಗೆ ಮತ್ತು ಅಮ್ಮಣ್ಣಿಗೆ ಬರ್ದ್ ಕೊಟ್ಟನೆ. ಸರಿಯಾಗಿ ನೋಡಿಕಂಡರೆ ಇಲ್ಲಿನ ಹುಟ್ಟುವಳಿ ನಿಮ್ಮ ಓದಿಗೂ ಸಾಕ್. ಶಾರದೆ ಮತ್ತು ಪ್ರಸಾದ ನಮ್ಮಲ್ಲಿದ್ದರೆ ನೋಡಿಕಂಬಕೂ ಅನುಕೂಲ. ಶಾಲೆಗೂ ಹತ್ರಾದೆ. ಅವರ್ನ ಎಂಜಿನಿಯರೋ, ಡಾಕ್ಟ್ರೋ ಮಾಡೊಕುಂತೊಳೆ.”

ಚಿಕ್ಕಪ್ಪನ ಪ್ರಸ್ತಾಪಕ್ಕೆ ಎಲ್ಲವೂ ತಲೆದೂಗಿದೊ. ಅಮ್ಮಣ್ಣಿ ಉತ್ತರಿಸಿತ್.

“ಆದು ಚಿಕ್ಕಪ್ಪಾ, ಅಗತ್ಯ ಬಾಕನ ನಮ್ಮನ ನೋಡಿಕಂಬಕೆ ಅಪ್ಪನ ಸ್ಥಾನಲಿ ನೀವೊಳರಿ. ಶಾರದೆ ತುಂಬಾ ಚೂಟಿಯಾಗುಟು. ಡಾಕ್ಟ್ರಾಗುವ ಬುದ್ಧಿವಂತಿಕೆ ಅವಳಿಗುಟ್ಟು. ನನ್ನಿಂದ ಆತ್ಲೆ. ನಮ್ಮ ಪ್ರತಾಪನಾದ್ರೂ ಎಂಜಿನಿಯರಾಗಲಿ. ಅಜ್ಜ ಹೋದ ಮೇಲೆ ಆ ಸ್ತಾನನ ತುಂಬಿದವು ನಮ್ಮ ತ್ಯಾಂಪಣ್ಣ. ಅವು ಎಂದೋ

ನಮ್ಮ ಮನೆಯ ಹಿರಿಯರಾಗೊಳೊ. ಅವು ಇನ್ನ್ ಮುಂದೆ ಅವರ ಮನೆಗೆ ಹೋಗದೆ ಇಲ್ಲೇ ಇರೋಕು. ಅವು ವಿಜ್ಞಾನಿ ವೃತ್ತಿನ ಬುಟ್ಟರೆ ಒಳ್ಳೆದ್. ತೀರ್ಥಕ್ಕಾಗಿ ಯಾರಾದ್ರ್ ಅವರ್ನ ಹುಡ್ಕಿಕಂಡ್ ನಮ್ಮ ಮನೆಗೆ ಬಾದು ಒಳ್ಳೆದಲ್ಲ. ಅಲ್ಲದೇ ಅಪ್ಪನ ಹುಡ್ಕಿಕಂಡ್ ಪೋಲಿಸ್‌ಗ ಆಗಾಗ ಬಂದೇ ಬಂದವೆ. ತೀರ್ಥ ಸಮೇತ ತ್ಯಾಂಪಣ್ಣ ಸಿಕ್ಕಿಬಿದ್ದರೆ ಅದೊಂದು ರಾಮಾಯಣ ಆಗಿಬುಡ್ದು. ನಾವ್ಗೆಲ್ಲಾ ಕೆಟ್ಟ ಹೆಸ್ರ್ ಬಂದದೆ. ನಿಮ್ಮ ಯೋಚನೆ ನಿಜಕ್ಕೂ ಲಾಯಿಕುಟ್ಟು".

"ಏನ್ ಹೇಳ್ತೊಳ ಕೂಸೇ ಈ ತ್ಯಾಂಪಣ್ಣಂಗೆ ಎಪ್ಪತ್ತಾತ್. ಇಷ್ಟ್ ವರ್ಷದ ಸರ್ವಿಸಿಲಿ ಒಂದೇ ಒಂದು ಕೇಸಾತ್ಲೆ. ನನ್ನ ಕಲೆಕ್ಷನ್ ಎಲ್ಲೆಲ್ಲಾ ಉಟ್ಟುತಾ ನಿಂಗೆ ಹೇಂಗೆ ಗೊತ್ತಾದು ಹೇಳ್? ಅಂದ್ ನಿನ್ನ ಅಪ್ಪನ ಮೇಲೆ ಕೇಸ್ ಕೊಡಿಕೆ ಸ್ಟೇಷನ್‌ಗೆ ಹೋಗಿರ್‌ಕಾಕನ ನಂಗೆ ಸಿಕ್ಕಿದ ಮರ್ಯಾದೆನ ನೀನೇ ನೋಡಿಯೊಳಲ್ಲ? ಇನ್ನ್ ನಾನ್ ತೀರ್ಥ ಮಾರಾಟ ಮಾಡ್ದುಲೆ. ನಂಗೆ ತೊಟ್ಟೆ ಸರಾಯಿಲಿ ವಿಶ್ವಾಸ ಇಲ್ಲೆ. ನನ್ನ ಗಾಡಿ ಓಡೋಕಲ್ಲ ಕೂಸು? ಅದಕ್ಕೆ ನಾನೇ ಶುದ್ದ ಆದ ಡೀಸಿಲ್ಲ್ ತಯಾರಿಸೋಕಾದೆ. ನನ್ನ ಮಾಮೂಲು ಜಾಗಲಿ ಮಾಡಿ ಅಲ್ಲಿನೇ ಸೇವನೆ ಮುಗ್ಸಿನೆ. ನಿಂಗೆ ಇಷ್ಟ ಇಲ್ಲದಿದ್ದರೆ ಇಲ್ಲಗೆ ತಾದೇಲೆ."

ತ್ಯಾಂಪಣ್ಣನ ಮಾತಿಗೆ ಎಲ್ಲವುಕೂ ನಗೆ ಬಾತ್. ಶಾರದೆ ಮತ್ತು ಪ್ರಸಾದ ಚಿಕ್ಕಪ್ಪನೊಟ್ಟಿಗೆ ಹೊರ್ಟು ನಿಂತೊ. ಅಮ್ಮಣ್ಣಿ ಮತ್ತೆ ಬಾಳಕ್ಕರ ಕಣ್ಣುಗಲ್ಲಿ ನೀರ್‌ಬಾತ್.

"ಇದ್ ಇವರದೇ ಮನೆ. ಆಗಾಗ ಇಲ್ಲಿಗೆ ಬಂದೇ ಬಂದವೆ. ನೀವ್ಗೆ ಬೇಜಾರಾಕನ ಪೋನ್ ಮಾಡಿ ನಾನ್ ಬಂದ್ ನಿಮ್ಮನ ಕರ್ಕಂಡ್‌ಹೋನೆ. ನಾವೆಲ್ಲಾ ಸಂತೋಷವಾಗಿರ್ದು ಮುಖ್ಯ." ಚಿಕ್ಕಪ್ಪ ಹಾಂಗೆ ಹೇಳ್ದ ಮೇಲೆ ಅಮ್ಮಣ್ಣಿಗೆ ನೆಮ್ಮದಿ ಆತ್.

———***———

# ೧೦. ಹೆಣ್ಣ್ ಹೆಣ್‌ಂತೇಕೆ ಹಂಗ್ಸುದು?

ಅಮ್ಮಣ್ಣಿಗೆ ಅವಳ ಊರಿನ ಪಕ್ಕದ ಜೂನಿಯರ್ ಕಾಲೇಜಿಲಿ ಮಾಸ್ತ್ರ ಕೆಲ್ಸ ಸಿಕ್ಕಿ ಅಲ್ಲಿಗೆ ಹೋಕೆ ಸುರುಮಾಡ್ತ್. ಸುರುನ ದಿನ ಪಾಠ ಮಾಡಿಕೆ ಅಮ್ಮಣ್ಣಿಗೆ ತುಂಬಾ ಕಷ್ಟನೇ ಆತ್. ಇತಿಹಾಸ ಲಾಯ್ಕಾಗಿ ಅವ್ಳು ಕಲ್ತಿತ್ತ್. ವಿಷಯ ಜ್ಞಾನದ ಕೊರತೆ ಇತ್ಲೆ. ಬಾಗವತಳಾಗಿ ಎಷ್ಟೋ ಸಾವಿರ ಜನರ್ನ ಎದುರಿಸಿದವ್‌ಳು ಈವರೇಗೆ ವೇದಿಕೆಲಿ ಬಾಷಣ ಮಾಡ್‌ದವಳಲ್ಲ. ಈಗ ಎಂಬತ್ತ್ ಜೋಡಿ ಹದಿಹರೆಯದ ಕಣ್ಣ್‌ಗಳೆದುರು ಪಾಟ ಮಾಡ್ದುಂತೇಳ್ರೆ ಅದಕ್ಕೆ ಎಷ್ಟು ಮಾನಸಿಕ ತಯಾರಿ ಬೇಕುಂತೇಳ್ದು ಅವ್ಳಿಗೆ ಗೊತ್ತಾತ್. ಎದ್‌ರ್ ಕುದ್ದ ಮಕ್ಕಳ್ಲಿ ಯಾರೇ ಮಿಸ್‌ಕಾಡ್ರೂ ಅವಳಿಗೆ ಕಸಿವಿಸಿಯಾಗ್ತಿತ್ತ್. ಯಾರಾದ್ರ್ ಪಿಸುಗುಟ್ಟಿರೆ ತನ್ನ ಬಗ್ಗೆ ಆಡಿಕಂಡವೇಂತ ಅನ್‌ಸ್‌ತಿತ್ತ್. ನಗಾಡಿರೆ ತಾನ್ ಅಪಹಾಸ್ಯದ ವಸ್ತು ಆಗಿಬುಟ್ಟನೇಂತೇಳವ ಕೀಳರಿಮೆ ಕಾಡ್‌ತಿತ್ತ್. ಬೆಲ್ ಆಕಾಕನೇ ಅವ್ಳಿಗೆ ನೆಮ್ಮದಿಲಿ ಉಸುರು ಬುಡಿಕೆ ಸಾದ್ಯ ಆದದ್ದ್. ಸ್ಟಾಪ್ ರೂಮಿಗೆ ಬಂದವಳಿಗೆ ಸುರೂಗೆ ನೆನಪಾದದ್ದ್ ಪಾಟ ಸರಿಯಾಗಿ ಮಾಡಿಕಾಗದೆ ಸದಾ ಕಿರ್‌ಚಾಡ್‌ತಿದ್ದ ಅವಳ ಬೂಗೋಳದ ಮಾಸ್ತ್ರ. ಅವರ ಹಾಂಗೆ ತಾನ್ ಕಿರ್ಚಾಡ್‌ತ್ಲೆ, ಬೈಯ್‌ತ್ಲೆ. ಆದರೆ ತಯಾರಿ ಲಾಯ್ಕಿಲ್ಲದಿದ್ದರೆ ನಾ ಸೋತು ಬುಟ್ಟನೆ. ಬರೇ ಪಾಟದ ಪರಿಜ್ಞಾನ ಇದ್ದರೆ ಸಾಲ್ದ್. ಸಾಕಷ್ಟ್ ಓದು ಮತ್ತು ಸಾಮಾನ್ಯ ಜ್ಞಾನ ಬೇಕೇಬೇಕು. ಪಾಠದ ಬಗ್ಗೆ ಒಮ್ಮೆ ಕೆಟ್ಟ ಅಬಿಪ್ರಾಯ ಬಂದರೆ ಮತ್ತೆ ಅದರ ಸರಿಪಡ್ಸಿಕೆ ಸಾದ್ಯ ಆಕಿಲ್ಲೆ. ಈ ವಿಚಾರಲಿ ನಾನ್ ದೊಡ್ಡ ಕಾಲೇಜಿನ ಇತಿಹಾಸದ ಮಾಸ್ಟ್ರನ ಅನುಸರ್‍ನೊಕೂಂತ ಅವ್ಳು ಅಂದಾಜ್ ಮಾಡ್ತ್.

ಹಿಂಬೊತ್ತು ಬಿಡು ಆಕನ ಇತಿಹಾಸದ ಮಾಸ್ಟ್ರಗೆ ಪೋನ್ ಮಾಡ್ತ್. ಅವರ್ದ್ ಯಾಗೋಳು ಪ್ರೋತ್ಸಾಹದ ದನಿ.

"ಏನ್ ಬಾಗವತರ್? ಪದ ಹೇಳಿ ಯಕ್ಷಗಾನದ ವೇಷ ಕುಣ್ಸಿದ ಹಾಂಗಲ್ಲ ಪಾಟ ಮಾಡ್ದು. ಈಗಾದರೂ ಗೊತ್ತಾತಾ?"

"ಅದ್ಕೆ ಸರ್ ನೀವ್ಗೆ ಪೋನ್ ಮಾಡ್ದ್. ನಾನ್ ಆಗಾಗ ನಿಮ್ಮ ನೆನ್‌ಪು ಮಾಡಿಕಣ್‌ತ್ತಿದ್ದೆ. ನಿಮ್ಮ ಹಾಂಗೆ ಪಾಟ ಮಾಡಿಕೆ ಯತ್ನಿಸಿದೆ. ಒಂದು ಪಿರೇಡ್ ಮುಗಿಯಕಾಕನ ಒಂದು ಯುಗ ಮುಗ್ದಂಗಾತ್. ನಾಳೆ ಎರ್ಡ್ ಪಿರಿಯಡ್ಡ್‌ಗೊಳೊ."

"ಎರ್ಡ್ ತಪ್ಪಾಗುಟು ಬಾಗವತರೆ. ಸುರೂನ ದಿನಾನೇ ಪಾಟ ಮಾಡ್ದ್ ಒಂದು. ನನ್ನ ಅನುಕರಣೆ ಮಾಡ್ದ್ ಎರಡ್. ಮಕ್ಕಳ ಹೆಸ್ರ್, ಹವ್ಯಾಸ, ಇಷ್ಟ

ಕಷ್ಟಗಳನ್ನ ಕೇಳಿ ವಿಶ್ವಾಸಕ್ಕೆ ತಕಣಕ್ಕಾಗಿತ್ತ್. ನಿನ್ನ ಯಕ್ಷಗಾನದ ಬಗ್ಗೆ ಹೇಳಕಾಗಿತ್ತ್. ನಾಳೆ ಆದರೂ ಅದನ್ನ ಮಾಡ್. ನಿಂಗೆ ಗೊತ್ತಿರುವ ಒಂದೆರಡ್ ಸಾಮಾನ್ಯ ಪ್ರಶ್ನೆ ಕೇಳ್. ನಿನ್ನ ಬಾಗವತಿಕೆನ ಹಾಂಗೆ ಪಾಠ ಮಾಡ್ದೂದ್ ಒಂದು ಕಲೆ. ಸಾವಿರಾರ್ ಜನರೆದ್ರ್ ರಂಗಸ್ತಳಲಿ ಕುದ್ದ್ ಕಣ್ಣ್ ಕುಕ್ಕುವ ಬೊಳ್ಪಿಗೆ ಹಾಡುವವ್ಳ್ ನೀನ್. ಈ ಎಂಬಂತ್ತೋ, ತೊಂಬತ್ತೋ ಮಕ್ಕಳ್ನ ನಿಬಾಯ್ಸಿದು ಏನೇನೂ ಕಷ್ಟ ಅಲ್ಲ. ನಿನ್ನ ಬಗ್ಗೆ ನಿಂಗೇ ವಿಶ್ವಾಸ ಇದ್ದರೆ ಜಗತ್ತ್‌ನೇ ಗೆಲ್ಲಕ್. ಆತ್ಮವಿಶ್ವಾಸಂತೇಳ್ವೆಲ್ಲಾ, ತನ್ನ ಮೇಲೆ ನಂಬಿಕೆಂತೇಳುವಂತದ್ದ್ ಅದ್ ಯಶಸ್ಸಿಗೆ ಮುಖ್ಯ."

ಮಾಸ್ಟ್ರ ಮಾತ್‌ಗ ಅವ್ಳ ದಾರಿನ ಸ್ಪಷ್ಟಗೊಳ್‌ಸಿತ್. ಒಂದೇ ವಾರಲಿ ಅವಳ್ ಮಕ್ಕಳಿಗೆ ತುಂಬಾ ಹತ್ತಿರದವಳಾತ್. ಹೊಸ್ತಾಗಿ ಸುರುವಾದ ಜೂನಿಯರ್ ಕಾಲೇಜದ್. ಮನೆಂದ ಒಂದು ಗಂಟೆ ದಾರಿ. ರಾಜ್ಯ ಹೆದ್ದಾರಿ ಆದರ್‌ಂದ ಬಸ್ಸ್‌ಗಳಿಗೆ ಏನೂ ಕೊರತೆ ಇತ್ಲೆ. ಬಸ್ಸ್ ತಪ್ಪಿರೆ ಮಟಡಾರ್‌ಗಳಿತ್ತ್. ಜೊತೆ ಮಾಸ್ಟ್ರ್‌ಗಳೂ ಹೊಂದಿಕಣವಾಗಿದ್ದೊ. ಪ್ರಿನ್ಸಿಪಾಲ್ರ ಬುಟ್ಟರೆ ಬೇರೆ ಅನುಬವಿಗಳಿತ್ಲೆ.

ಕೆಲವು ದಿನ ಕಳ್ದ ಮೇಲೆ ಕಾಲೇಜ್‌ಲೊಂದು ಯಕ್ಷಗಾನ ತಂಡ ಕಟ್ಟಿರೇನ್‌ಂತೇಳುವ ಯೋಚನೆ ಅವ್ಳಿಗೆ ಬಾತ್. ಪ್ರಿನ್ಸಿಪಾಲರೆದ್ರು ತನ್ನ ಯೋಚನೆನ ಹೇಳ್ತ್. ಆದರೆ ಅವರ ಪ್ರತಿಕ್ರಿಯೆ ಅವ್ಳ ಆಸೆಗೆ ತಣ್ಣೀರ್ ಹೊಯ್ದಾಂಗೆ ಆತ್.

"ನೋಡಮ್ಮಾ, ಮಕ್ಕ ಇಲ್ಲಿಗೆ ಬಾದು ಪಾಠ ಕಲೇಕೆ. ನಿಂಗೆ ಸಂಬಳ ಕೊಡ್ದು ಯಾಕೆ? ನೀ ಪಾಠ ಹೇಳ್ದಕ್ಕೆ. ಅದು ಬುಟ್ಟು ನೀನ್ ನಾಟಕ ಯಕ್ಷಗಾನಂತೇಳಿ ಅದಿಕ ಪ್ರಸಂಗಕ್ಕೆ ಹೋದಿಯಾನಾ ಎಲ್ಲಾ ಗ್ರಹಚಾರ ವಕ್ಕರಿಸಿದೆ."

ಅವ್ಳಿಗೆ ಶಾಕ್ ಆದಂಗೆ ಆತ್. ಅವ್ಳ ದೊಡ್ಡ ಕಾಲೇಜಿನ ವಾತಾವರಣ ನೆನ್ಪಿಸಿಕಂಡತ್. ಅಲ್ಲಿನ ಎಲ್ಲಾ ಮಾಸ್ಟ್ರ್‌ಗಳಿಗೆ ಯಕ್ಷಗಾನದ ಮಹತ್ವ ಗೊತ್ತಿತ್ತ್. ಸಂಸ್ತಾಪಕ ಕಪಿಲಳ್ಳಿ ವೆಂಕಟಪ್ಪ ಗೌಡ್ರು ಯಕ್ಷಗಾನನ ಪ್ರೀತಿಸ್‌ತ್ತಿದ್ದೊ. ಅಲ್ಲಿ ಗೂಡೆಗಳ ಯಕ್ಷಗಾನ ತಂಡವೊಂದಿತ್ತ್. ಒಬ್ಳ್ ಮುಸ್ಲಿಂ ಗೂಡೆ ಕೃಷ್ಣನ ವೇಷ ಹಾಕಿರೆ, ಕ್ರಿಶ್ಚಿಯನ್ ಗೂಡೆ ಬಲರಾಮ ಆಗ್ತಿತ್ತ್. ತರ್ಕಶಾಸ್ತ್ರದ ಮಾಸ್ಟ್ರ ಕೌರವನಾಗಿ ಇತಿಹಾಸದ ಮಾಸ್ಟ್ರ ಬೀಮನಾಗಿ ಗದಾಯುದ್ಧ ಮಾಡಿದ್ದೊ. ಆ ಕಾಲೇಜೆಲ್ಲಿ? ಇದೆಲ್ಲಿ? ಅವ್ಳ್ ಸ್ವರ ತಗ್ಗಿಸಿ ಹೇಳ್ತ್,

"ತಪ್ಪು ತಿಳ್ಕಂಬಡಿ ಸಾರ್. ನಾನ್ ಓದಿದ ಕಾಲೇಜಿಲಿ ಯಕ್ಷಗಾನ ಇಲ್ಲದ ಕಾರ್ಯಕ್ರಮಗಳೇ ಇತ್ಲೆ. ಇಲ್ಲೂ ಹಾಂಗೆನೇ ಇರ್ದೂದಂತ ತಿಳ್ಕಂಡಿದ್ದೆ. ಯಕ್ಷಗಾನ, ನಾಟಕ ಬೇಡಂತಾದರೆ ಕಾಲೇಜ್ ಡೇಗೆ ಏನಿದ್ದದೆ?"

"ಅಯ್ಯೊ! ನಿಂಗೆ ಇಲ್ಲಿನ ಕತೆ ಗೊತ್ತಿಲ್ಲೆಂತ ಕಂಡದೆ. ಹೇಳಿಕೇಳಿ ಅದ್ ಕಾಲೇಜ್ ಡೇ. ಅದರ ರಾತ್ರಿ ಮಾಡಿಕುಟ್ಟೋ. ಇಲ್ಲಿ ನಾವ್ ಎಲ್ಲಾ ಮದ್ಯಾಹ್ನದೊಳಗೆ ಮುಗ್ಸಿ ಬುಟ್ಟವೆ. ನಾನ್ ಕಾಲೇಜ್ ವರದಿ ಓದಿನೆ. ಕಾಲೇಜ್ ಚೇರ್‌ಮನ್ ಬಹುಮಾನ ವಿತರಿಸುವೆ. ಚೀಪುಗೆಸ್ಟ್‌ನೂ ಅವೇ ಕರ್ಕಂಡ್ ಬಂದವೆ. ಅಂವ ಏನೋ ಒದರಿದೆ. ಅದಾದ ಮೇಲೆ ಸಿನಿಮಾ ಕ್ಯಾಸೆಟ್ ಹಾಕಿ ಹೈದಂಗಳೂ, ಗೂಡೆಗಳೂ ಹೇಂಗೆ ಹೇಂಗೋ ಕೊಳ್ಕು ಕುಂಡೆಗಳ ಕುಣ್ಸಿವೆ. ಮದ್ಯಾಹ್ನ ಎರ್ಡ್ ಗಂಟೆಗೆ ಲಾಂಗ್ ಬೆಲ್ಲ್ ಕೊಟ್ಟವೆ. ಅಲ್ಲಿಗೆ ಎಲ್ಲಾ ಎಂಡ್ ಆದೆ."

ಅವ್ಳ ಮೋರೆ ಬಾಡ್ತ್. "ನಿಂಗೆ ಬೇಜಾರಾದೆಂತ ನಂಗೆ ಗೊತ್ತಮ್ಮಾ. ನೀನ್ ಇಲ್ಲಿನ ಮಕ್ಕಳ್‌ನ ಹತ್ರಂದ ನೋಡ್ತ್‌ಲೆ ಅಂತ ಕಂಡದೆ. ಇವರ್ಲಿ ಹೆಚ್ಚಿನವು ತ್ರಿ ಪಾಯಿಂಟ್ ಪ್ರೋಗ್ರಾಮ್‌ನವು. ಕುಡಿ, ಕಡಿ, ಹೊಡಿ. ಬೊಳ್ಪಿಗೆನೇ ತೀರ್ಥ ಸೇವಿಸಿಕಂಡ್ ಕ್ಲಾಸಿಗೆ ಬರೊವು ಒಳೊ. ಹೆತ್ತವರ ಕರ್ಸಿರೆ ಅವೇ ತೂರಾಡಿಕಂಡ್ ಬಂದವೆ. ಏನಾರ್ ಆ್ಯಕ್ಷನ್ ತಕಂಡಿಯನೋ ಉಸ್ತುವಾರಿ ಮಂತ್ರಿ, ಲೋಕಲ್ ಎಮ್ಮೆಲ್ಲೆ ಇಂಟರ್‌ಪಿಯರ್ ಆದವೆ. ಏನ್ ಮಾಡ್ದು ಹೇಳ್? ಹಾಳ್ ಹೊಟ್ಟೆಗಾಗಿ ಇದೆಲ್ಲಾ ಸಹಿಸಿಕಣಕ್ಕಾದೆ. ನಿಂಗೆ ರೋಮನ್ ಇತಿಹಾಸ ಗೊತ್ತುಟಲ್ಲಾ? ಬಿ.ಎ. ರೋಮನ್ ಇನ್ ರೋಮ್".

ಅವ್ಳ ಮಾತ್ ಮುಂದುವರಿಸ್‌ತ್ಲೆ. ಪಾಠ ಮಾಡುವ ಬಗ್ಗೆ ಆಸಕ್ತಿ ಬೆಳ್ಸಿಕಣ್ತ್. ಸಂಶಯ ಬಂದರೆ ಇತಿಹಾಸದ ಮಾಸ್ಟ್ರಲ್ಲಿ ಕೇಳಿಕಣ್ ತಿತ್ತ್. ಕಾಲೇಜಿಗೆ ಬಸ್ಸಿಲಿ ಹೋಕಾಕನ ಅಲ್ಲಿನ ಬೆಟ್ಟಗುಡ್ಡಗಳ ನೋಟನ ಆನಂದಿಸ್‌ತಿತ್ತ್. ಆಗ ಅಜ್ಜ ಹೇಳ್ತಿದ್ದ ಕಪಿಲಮುನಿ ತಪಸ್ವಿನಿಯರ ಕತೆ ನೆನಪಾಗ್ತಿತ್ತ್. ಆ ಬೆಟ್ಟಗಳ ನಡುವೆ ಅವು ಎಲ್ಲೋ ಬಾಳಿ ಬದುಕಿದ್ದೊ. ಅಲ್ಲೇ ಎಲ್ಲೋ ಒಂದು ಕಡೆ ತಪಸ್ವಿನಿಯ ಮೂಲ ಉಟ್ಟು. ಅಜ್ಜ ಎಷ್ಟೋ ಸರ್ತಿ ಅದನ್ನ ನೋಡಿ ಬಂದುಟು. ನಂಗೆ ಒಮ್ಮೆಯಾದರೂ ನೋಡಿಕೆ ಸಾದ್ಯ ಆದರೆ?

ಒಂದು ದಿನ ಮದ್ಯಾಹ್ನ ಅವ್ಳ ಸ್ಟಾಪ್ ರೂಮಿಲಿ ಒಬ್ಬಳೇ ಕುದ್ದಿತ್ತ್. ಕಾಲೇಜಿನ ಆಫೀಸು ಸುಪರಿಂಟೆಂಡು ಒಳಗೆ ಬಾತ್. ಅವಳ ಪಕ್ಕದ ಚಯರ್‌ಲಿ ಕುದ್ದತ್.

"ಸೀದಾ ಒಂದು ವಿಷಯ ಪ್ರಸ್ತಾಪಿಸಿರೆ ನೀವ್ ತಪ್ಪು ತಿಳ್ಕಂಬುದುಲೇಂತ ತಿಳ್ಕಣಿ. ನಿಮ್ಮ ಬಗ್ಗೆ ಮನೇಲಿ ಹೇಳಿಯೊಳೆ. ನೀವು ಸಮ್ಮತಿಸುದುಂತಾದರೆ ನಾನ್ ನಿಮ್ಮ ಮದ್ವೆ ಆಕುಂತೊಳೆ. ಇದೆಲ್ಲಾ ಹಿರಿಯರ್ ಮಾತಾಡಕಾದ್ದ್ ಕ್ರಮ. ದಿನಾ

ನೋಡುವವರ್ಲಿ ಅಂತ ಪಾರ್ಮಾಲಿಟೀಸ್ ಬೇಡಾಂತ ನಾನೇ ಕೇಳೊಳೆ. ನೀವು ಈಗಾಗ್ಲೆ ಯಾರ್ನಾದ್ರ್ ಮದ್ವೆ ಆಕೂಂತ ನಿರ್ದಾರ ಮಾಡಿದ್ದರೆ ಹೇಳಿಬುಡಿ. ಇಲ್ಲೆಂತಾದರೆ ಯೋಚನೆ ಮಾಡಿ ಹೇಳಿ. ಒಪ್ಪಿಗೆಂತಾದರೆ ಮತ್ತೆ ಮುಂದಿನ ಮಾತ್."

ಅವ್ಳ್ ದಿನಾ ಅವನ ಒಬ್ಬ ಕಲೀಗ್ ಎಂಬ ದೃಷ್ಟಿಲಿ ನೋಡ್ತಿತ್. ಅದ್ಕಿಂತ ಹೆಚ್ಚಿನ ಆಸಕ್ತಿ ಅವನ ಬಗ್ಗೆ ಅವಳಲ್ಲಿ ಮೂಡ್‌ತಿತ್ತ್‌ಲೆ. ಅಂವ ತಾನಾತ್ ತನ್ನ ಕೆಲ್ಸ ಆತ್ ಎಂಬ ತರ ಇರ್ತಿತ್ತ್. ಅವನ ಮೋರೆಲಿ ನಗೆ ಇರ್ತಿದ್ದದೇ ಅಪ್ರೂಪ. ದಿನಾ ಅವಂಳ್ದ ನಮಸ್ಕಾರ ನಿರೀಕ್ಷಿಸ್‌ತಿತ್ತ್. ಇದ್ದಕ್ಕಿದ್ದಾಂಗೆ ಯಾವ ಸೂಚನೆಯೂ ಇಲ್ಲದೆ ಮದುವೆಯ ಪ್ರಸ್ತಾಪ ಮಾಡಿಕಾಕನ ಏನ್ ಉತ್ತರ ಹೇಳಕೂಂತಲೇ ಗೊತ್ತಾತ್ಲೆ. ಅವ್ಳಿಗೆ ಮದುವೆ ಎಂಬುದು ಅನಿವಾರ್ಯತೆಂತ ಅನ್ನಿಸಿತೇ ಇಲ್ಲೆ. ಮದ್ವೆ ಇಲ್ಲದೆ ಬದ್ಕಿನೆಂತ ತೀರ್ಮಾನನೂ ಮಾಡಿತ್ಲೆ. ಇಂತವನನ್ನೇ ಮದುವೆ ಆಕೂಂತೇಳುವ ಸಂಕಲ್ಪನೂ ಅವಳಲ್ಲಿತ್ಲೆ. ಅವಳ ಮನ್ಸ್ ತೊಯ್ದಾಡ್ತ್. ಏನ್ ಹೇಳ್ದೂಂತ ಮನಸ್ಸಿಗೆ ಹೊಳ್ತ್‌ಲೆ. ಕಡೆಗೆ "ಮನೆಲಿ ಹಿರಿಯರ್ಲಿ ಒಂದ್ ಮಾತ್ ಕೇಳಿನೋಡ್ನೆ"ಂತ ಹೇಳ್ತ್. ಅದ್ ಒಳ್ಳೆದ್‌ಂತ ಹೇಳಿ ಬೇರೇನೂ ಮಾತಾಡದೆ ಹೊರ್ಟು ಹೋತು.

ತಂಗೆ ಬಾಳಕ್ಕ ಎಂ.ಎಸ್ಸಿ. ಮಾಡಿಕಾಕನ ಅವ್ಳ ಪ್ರೊಫೆಸರ್‌ನ ಮೆಚ್ಚಿ ಮದುವೆಯಾಗಿತ್ತ್. ಆ ದಲಿತ ಪ್ರೊಫೆಸರ್ ಪಶ್ಚಿಮಗಟ್ಟದ ಹಾವುಗಳ ಬಗ್ಗೆ ಸಂಶೋದನೆ ನಡ್ಸಿ ದೊಡ್ಡ ಹೆಸ್ರ್ ಗಳ್ಸಿತ್ತ್. ಅಮೇರಿಕಾದ ಯುನಿವರ್ಸಿಟಿ ಅವಂಗೆ ಖಾಯಂ ಕೆಲಸ ಕೊಟ್ಟಿತ್ತ್. ಬಾಳಕ್ಕ ಒಂದು ವರ್ಷ ಅಲ್ಲೇ ಓದಿರೆ ಅವ್ಳಿಗೆ ಅಲ್ಲೇ ಕೆಲ್ಸ ಸಿಕ್ಕಿದೇಂತೇಳಿ ಕಪಿಲೇಶ್ವರನೆದುರು ಸರಳ ರೀತೀಲಿ ಮದ್ವೆಯಾಗಿ ರಿಜಿಸ್ಟ್ರಿ ಮಾಡ್ಸಿ ಪ್ರೊಫೆಸರೊಟ್ಟಿಗೆ ಅಮೇರಿಕಾಕ್ಕೆ ಹಾರಿತ್ತ್. ಅದಕ್ಕೆ ಚಿಕ್ಕಮ್ಮ, ಶಿವಪ್ಪ ಚಿಕ್ಕಪ್ಪ, ರಾದಾ ಚಿಕ್ಕಮ್ಮ ಯಾರೂ ತಕರಾರ್ ಮಾಡಿತ್ತ್‌ಲ್ಲೆ.

ತ್ಯಾಂಪಣ್ಣ ತತ್ವಜ್ಞಾನಿಯ ಹಾಂಗೆ ಮಾತಾಡ್ತಿತ್ತ್.

"ಲೋಕಲಿ ಮನುಷ್ಯರ್ದ್ದೆ ಒಂದು ಜಾತಿ. ಆನೆ, ಸಿಂಹ, ಹುಲಿ ಇರುವ ಹಾಂಗೆ ಮನುಷ್ಯರೊಳಗಿನ ಜಾತಿಗೆ ನಾವು ಬೆಲೆ ಕೊಡಿಕಾಕಿಲ್ಲೆ. ಅದ್ ದೇವ್ರು ಮಾಡ್ದಲ್ಲ. ಅವ್ಳಿಗೆ ಇಷ್ಟ ಆದವರನ್ನ ಮದ್ವೆಯಾಗಲಿ. ಈಗ ಜಾತಿ, ಗೋತ್ರ, ಜಾತಕ ನೋಡಿ ನಿನ್ನ ಅಜ್ಜ ಮದ್ವೆಯಾದದ್ದ್, ಚೆನ್ನಪ್ಪನೂ ಆತ್. ನಿನ್ನ ಅಜ್ಜ ಮದುವೇಂದ ಕುಸಿ ಪಟ್ಟಿತ್ಲೆ. ನಿನ್ನ ಅಪ್ಪ ಅಂವ ಆಗಿಯೇ ಕುಸಿನಾ ಹಾಳ್ ಮಾಡಿಕಣ್ತ್. ಜವಾಬ್ದಾರಿ ಇರುವ ಗಂಡ್ ಹೆಣ್ಣ್ ಮದ್ವೆ ಆಕೆ ನಿರ್ದರಿಸಿರೆ ಅಡ್ಡಿ ಮಾಡುದು ತಪ್ಪಾದೆ. ನಮ್ಮ ಬಾಳಕ್ಕನ ಪುಣ್ಯ ದೊಡ್ಡ ಮಾಸ್ತ್ರ ಮದ್ವೆಯಾಗಿ ಅಮೇರಿಕಾಕ್ಕೆ ಹಾರ್ದ್ದೆ."

ತಂಗೆನ ಎಂಜಿನಿಯರಿಂಗ್ ಮಾಡ್ಸಿಕೆ ದುಡ್ಡಿನ ಅಡಚಣೆ ಬಂದಿತ್ತ್. ಅವ್ಳಿಗೆ ಎಂಜಿನಿಯರ್ ಗಂಡ ಸಿಗುದೂಂತ ಅಮ್ಮಣ್ಣಿ ತಿಳ್ಕಂಡಿತ್ತ್. ಬದಲಾಗಿ ಉರಗ ತಜ್ಞ ಪರಿಸರ ವಿಜ್ಞಾನಿ ಸಿಕ್ಕಿತ್. ಅವ್ಳಿಗೆ ಹೂವಯ್ಯ ಗೌಡ್ರ ತಮ್ಮನ ಮಂಜ ಎಂಜಿನಿಯರ್ ಪಾಸಾಡಿ ನೆನಪಾತ್. ಎಂಜಿನಿಯರ್‌ಗ ಕೈ ತುಂಬಾ ಹಣ ಗಳ್ಸಿವೆ. ಆದರೆ ಅವರ್ಲಿ ಹೆಸ್ರ್ ಮಾಡೋವು ಎಷ್ಟು ಜನ? ಜನಕ್ಕೆ, ಸಮಾಜಕ್ಕೆ ಬೇಕಾದವನಾಗಿ ಬಾಳ್‌ನ ಸಾರ್ತಕ ಮಾಡಿಕೊಳ್ಳುವವರ್ನ ಅವ್ಳ್ ಕೇಳಿತ್ತೆ. ಬಾಳಕ್ಕನ ಗಂಡನ ಅಮೇರಿಕದ ಒಂದು ವಿಶ್ವವಿದ್ಯಾನಿಲಯ ಕೆಲ್ಸ ಕೊಟ್ಟು ಕರ್ಸಿಕೊಳ್ಳುತ್ತುಟ್ಟು, ನಮ್ಮ ಸಾಮಾಜಿಕ ವ್ಯವಸ್ತೆಲಿ ಅಂವ ಒಬ್ಬ ದಲಿತ. ಆದರೆ ಸಾದನೆಲಿ?

ತಂಗೆನ ಮದ್ವೆಗೆ ಅಡ್ಡಿ ಮಾಡದವು ನನ್ನ ಮದುವೆಗೆ ತಕರಾರ್ ಎತ್ತ್‌ವೊನೋ?

ಇದ್ ಹೇಂಗೂ ಜಾತಿ ಮದುವೆ ತಕರಾರ್ ಎತ್ತಿಕೆ ಅವಕಾಸನೂ ಇಲ್ಲೆ.

"ನಿಂಗಿಷ್ಟ ಇದ್ದರೆ ಆಗ್"ಂತೇಳುವೆ. ಒಂದೇ ಕಡೇಲಿ ದುಡಿಯುತ್ತಿರುದು ಕೆಲ್ಸ ಮುಂದುವರ್ಸಿಕೆ ಅನುಕೂಲನೆ. ತಾನೇನೂ ಮದ್ವೆ ಆಗದೇ ಇರಿಕೆ ತೀರ್ಮಾನಿಸಿದವಳಲ್ಲ. ಇವನನ್ನೇ ಆದರೆ ಏನ್?

ಮಾರನೆ ದಿನ ಬಿಡುವಿನ ವೇಳೆಗೆ ಸುಪರಿಂಟೆಂಡೆಂಟ್ ಸ್ಟಾಪ್ ರೂಮಿಗೆ ಬಾತ್. ಅವ್ಳು ಅಜ್ಜಂದ ಸುರುಮಾಡಿ ಅಜ್ಜಿ ಮತ್ತು ಅವ್ವನ ದುರಂತ, ಅಪ್ಪ ಕಾಣೆಯಾದ್ದ್, ತಂಗೆ ದಲಿತ ಪ್ರೊಪೆಸರ್ನ ಮದುವೆಯಾದ್, ತ್ಯಾಂಪಣ್ಣ ಮತ್ತು ಚಿಕ್ಕಮ್ಮ ಮಾತ್ರ ಮನೆಲಿರುದು. ತಂಗಿ ಮತ್ತೆ ತಮ್ಮ ಶಿವಪ್ಪ ಚಿಕ್ಕಪ್ಪನ ದತ್ತು ಮಕ್ಕಳಾಗಿರುದು ಎಲ್ಲ ಹಿನ್ನಲೆನ ಅವಂಗೆ ತಿಳಿಸಿತ್.

"ಮದುವೆ ಆದ ಮೇಲೆ ಈ ಯಾವುದೇ ವಿಸಯಗಳ ಬಗ್ಗೆ ನೀವು ಕಿರಿಕಿರಿ ಮಾಡ್ದುಲ್ಲೆಂತಾದರೆ ನಮ್ಮ ಮನೆಗೆ ಹಿರಿಯರ ಕರ್ಕಂಡ್ ಬನ್ನಿ. ನನ್ನ ಕುಟುಂಬದ ವಿವರ ಹೆಸ್ರ್ ಹೇಳಿ ಮುಂದೆಗೆ ನನ್ನ ನಿಮ್ಮ ಮನೆವು ಹಂಗಿಸಿಕೆಯಾಗದ್. ನಾನ್ ಯಕ್ಷಗಾನ ಬಾಗವತಿಕೆ ಮಾಡ್ನೆ. ನಂಗೆ ಓದುವ ಹುಚ್ಚು ತುಂಬಾ ಉಟ್ಟು. ನಮ್ಮೂರಿನ ಇತಿಹಾಸನ ಸಂಶೋದನೆ ಮಾಡೋಕೂಂತ ಒಳೆ. ನನ್ನ ಇತಿಹಾಸದ ಮಾಸ್ಟ್ರ ಮಾರ್ಗದರ್ಶಕರಾಗಿದ್ದವೆ. ಇದಕ್ಕೆಲ್ಲಾ ನಿಮ್ಮ ಮತ್ತು ಮನೆಯವರ ಪ್ರೋತ್ಸಾಹ ಬೇಕು. ಈ ಎಲ್ಲಾ ವಿಚಾರನ ಮನೆಲಿ ತಿಳ್ಸಿ ತೀರ್ಮಾನ ತಕಣಿ!" ಅಂವ ಮಾತಾಡದೆ ಎದ್ದ್ ಹೋತು. ಮಾರ್ನೆ ದಿನ ಅದೇ ಹೊತ್ತಿಗೆ ಅವಳ್ನ ಬಂದ್ ಕಂಡತ್.

"ನನ್ನ ಅಕ್ಕ ಸಂಸಾರದೊಟ್ಟಿಗೆ ಬೆಂಗಳೂರ್ಲಿ ಉಟ್ಟು, ತಂಗೆಗೆ ಕಳ್ದ ವರ್ಷ

ಮದ್ವೆ ಆತ್. ಸಾಫ್ಟ್‌ವೇರ್ ಇಂಜಿನೀಯರ್. ಇಬ್ಬರೂ ಆಸ್ಟ್ರೇಲಿಯಲೊಳೊ. ಮನೆಲಿರುದು ಅಪ್ಪ ಅಮ್ಮ ಮಾತ್ರ. ಅವು ನೀವ್ಗೆ ಇಷ್ಟ ಆದರೆ ಆತ್. ಇನ್ನ್ ಮನೆಯವರ ವಿಷಯಕ್ಕೆ ಅವಳ್ನ ಆಡಿಕಂಬಕೆ ನಾವೇನ್ ಮನುಷ್ಯರಲ್ಲಾಂತ ತಿಳ್ಕಂಡೊಳೊನೋ ಅಂತ ನನ್ನನ್ನೇ ಕೇಳ್ದೊ. ಬೆಂಗಳೂರಿನ ಅಕ್ಕಂಗೆ, ಆಸ್ಟ್ರೇಲಿಯಾದ ತಂಗೆಗೆ ತಿಳ್ಸಿಯೊಳೆ. ನಮ್ಮ ಕುಟುಂಬದವರ್‌ಂದ ನೀವ್ಗೆ ಕಿರಿಕಿರಿಯಾದೂಂತ ನೀವು ತಿಳ್ಕಂಬುದೇ ಬೇಡ."

ಹೆಣ್ಣ್ ನೋಡುವ ಶಾಸ್ತ್ರ ಸರಳ ರೀತೀಲಿ ನಡ್ತ್. ಹೈದನ ಅಪ್ಪ, ಅಮ್ಮ ಮತ್ತೆ ಬೆಂಗಳೂರಿನ ಅಕ್ಕ ನಾಲ್ಕೇ ಜನ ಬಂದೊವು. ಹೈದನ ಅಮ್ಮನ ಜಬರ್‌ದಸ್ತಿನೆದ್‌ರ್ ಅವನ ಅಪ್ಪ ತೀರಾ ಮಂಕಾಗಿತ್ತ್. ಅಕ್ಕ ಮಣಗಟ್ಟಲೆ ಚಿನ್ನ ಹೇರಿಕಂಡ್ ರಸ್ತೆ ಸಮ ಮಾಡುವ ಗುಂಡುಕಲ್ಲಿನ ಹಾಂಗೆ ಕಾಂಬತಿತ್ತ್.

ತನ್ನ ಕಡೆಯವರೊಟ್ಟಿಗೆ ಹೈದನ ಕಡೆಯವರ್ನ ಅಮ್ಮಣ್ಣಿ ತೂಗಿ ನೋಡ್ತ್. ಹೈದನ ಕಡೇವರ ಮಾತ್, ವ್ಯವಹಾರ ಎಲ್ಲಾ ಗಿಲೀಟ್‌ಂತ ಅವ್ಳಿಗೆ ಕಂಡತ್. ದುಡ್ಡು, ಬಟ್ಟೆ, ಬರೆ, ಹುಟ್ಟಿನ ಕಾರಣ ಆಯೋಚಿತವಾಗಿ ಸಿಕ್ಕಿದ ಸಂಬಂದ ಬುಟ್ಟರೆ ಅವ್ಕೆ ಬೇರೇನೂ ಗೊತ್ತಿತ್ಲೆ. ದೌಲತ್ತ್ ತೋರ್ಸಿಕಂತ್ಲೇ ಹುಟ್ಟಿದವರ್ನ ಯಕ್ಷಗಾನ, ವಿದ್ವತ್ತ್, ಜ್ಞಾನದ ಪ್ರಪಂಚಕ್ಕೆ ತಾಕೆ ಸಾದ್ಯನಾ? ಜಾತಿ, ಮತ, ಕುಲ, ಅಂತಸ್ತುಗಂತೇಳುವ ಮನುಷ್ಯ ಮಾಡಿಕಂಡ ಅಲ್ಪತನಗಳನ್ನ್ ಗಾವುದ ದೂರಲಿಸಿದ ಮಂಜುನಾಥ ಬಾಗವತರ್, ಇತಿಹಾಸ ಮಾಸ್ಟ್ರಂತವರ ಬಗ್ಗೆ ಕೇಳಿಯೂ ಇರಿಕಿಲ್ಲೆ.

ನಿಶ್ಚಿತಾರ್ತದ ಊಟಕ್ಕೆ ಮಾಸದ ಗೈಪು ಇಲ್ಲೆಂತೇಳಿ ಹೈದನ ಕಡೇವು ತಕರಾರ್ ತೆಗ್ದೊ. ಗುರು ಮಂಜುನಾಥ ಬಾಗವತರ್, ಇತಿಹಾಸ ಮಾಸ್ಟ್ರ ಮಾಸ ತಿನ್ನ್‌ತ್ತಿತ್ಲೆ. ಆದರೆ ತಿಂಬವರ ಬಗ್ಗೆ ಹೇಸಿಕೆ ಪಡ್‌ತ್ತಿತ್ಲೆ. ಯಕ್ಷಗಾನ ಗುರುಗ ಶ್ಲೋಕ ಒಂದು ಹೇಳ್ದೋ.

ಪ್ರಾಣಸ್ಯನ್ನಮಿದಂ ಸರ್ವಂ
ಪ್ರಜಾಪತಿರ ಕಲ್ಪಯತ್
ಸ್ಥಾವರಂ ಜಂಗಮಂ ಚೈವ
ಸರ್ವಂ ಪ್ರಾಣಸ್ಯ ಭೋಜನಂ

"ಈ ಜಗತ್ತಿನಲ್ಲಿರುವ ಸಮಸ್ತ ಸ್ತಾವರ, ಜಂಗಮ ಜೀವ ಜಂತುಗಳ್ನ ಚರಾಚರಗಳ್ನ ತಿಂಬಕ್ಕೆಂತಲೇ ಪರಮಾತ್ಮ ಸೃಷ್ಟಿಸಿಟುಂತ ಮನುಸ್ಮೃತಿ ಹೇಳ್ದೆ. ಶಾಸ್ತ್ರ ಪ್ರಕಾರ ಯಾವುದೇ ಪ್ರಾಣಿಯ ಮಾಸ ತಿಂಬೊದು ತಪ್ಪಲ್ಲ. ನಂಗೆ ಮಾಸ ಒಗ್ಗುದುಲೆ. ಅದಿಕ್ಕೆ ತಿಂಬೊದುಲೆ ಅಷ್ಟೆ."

ಇತಿಹಾಸದ ಮಾಸ್ಟ್ರ ತರಗತಿಲಿ ಹೇಳ್ತಿದ್ದೊ.

ಅಹಿಂಸೆನ ಬೋದಿಸುವ ಮತಗಳ್‌ಂದಾಗಿ ಕೆಲವು ಸಸ್ಯಾಹಾರಿಗಾದೊ. ನಂಗೆ ಎಲ್ಲಾ ಪ್ರಾಣಿಗಳ ಮೇಲೆ ಪ್ರೀತಿ ಇರುದರ್‌ಂದ ಮಾಂಸ ತಿಂಬಕಾದುಲೆ. ನನ್ನ ಮನೆವು ತಿಂಬೊದರ ನಾನ್ ಬೇಡಂತೇಳ್ದುಲೆ. ಅವರವರ ಸ್ವಾತಂತ್ರ್ಯ ಅವುಕೆವ್ಕೆ.

ಹೈದನ ಕಡೆವರ ತಕರಾರ್ ಹೆಚ್ಚಿಕಾಕನ ಪೋಲೀಸ್‌ಮಾವ ಗಟ್ಟಿ ಸ್ವರಲಿ ಹೇಳ್ದೊ,

"ವೀಳ್ಯಶಾಸ್ತ್ರಕ್ಕೆ ಮಾಂಸ ತಿನ್ನದವು ಸಹ ಬಂದೊಳೊ. ಅವರ್ನ ಬುಟ್ಟು ನಾವ್ ತಿಂಬೊದು ಸರಿಯಲ್ಲಂತೇಳಿ ಸಸ್ಯಾಹಾರದ ಊಟ ಏರ್ಪಾಟ್ ಮಾಡ್ದ್. ಒಂದು ದಿನ ಮಾಸ ತಿನ್ನದಿದ್ದರೆ ಯಾರೂ ಸತ್ತು ಹೋದುಲೆ. ಮಾಸ ಬೇಕೇಬೇಕುಂತೇಳೊವು ನನ್ನೊಟ್ಟಿಗೆ ಬನ್ನಿ. ಪೋಲೀಸ್ ಜೀಪುಲಿ ನಿಮ್ಮ ಬಾರಿಗೇ ಕರ್ಕಂಡ್ ಹೋನೆ." ಅಲ್ಲಿಗೆ ತಕರಾರ್  ನಿತ್ತ್‌ಹೋತ್.

ಗುರುಕಾರಣೀಕರ ಹೆಸ್ರ್‌ಲಿ ಮದುವೆ ದಿನ ನಿಗದಿ ಮಾಡಿಕಾಕನ ಅಮ್ಮಣ್ಣಿ ಅಂದ್‌ಕಂಡತ್,

ಇಬ್ಬೊರು ಗುರುಗ ಇಲ್ಲಿ ಒಳೊ. ಕಾರಣೋರು? ಅಜ್ಜ ಮತ್ತೆ ಅಜ್ಜಿ ನನ್ನ ಯಾವ ರೂಪಲಿ ಬಂದ್ ಹರ್ಸ್‌ವೆನೋ? ಅಪ್ಪ? ಸತ್ತುಟುಂತೇಳುವಂತದ್ ನಿರ್ದಾರಾಗದೆ ಅವಂಗೆ ಅಂತ್ಯ ಸಂಸ್ಕಾರ, ಹದಿನಾರರ ಕುಲೆ ಕಾರ್ಯಕ್ರಮ ಒಂದೂ ಮಾಡ್ತ್‌ಲೆ. ಅಷ್ಟಮಂಗಲ ಪ್ರಶ್ನೆ ಇಸಿರೆ ಅಂವ ಎಲ್ಲಿಟ್ಟೊಂತ ಗೊತ್ತಾದೋ? ಮತ್ತೆ ಬ್ರಹ್ಮಕಲಶ ಮಾಡ್ಲೋಕೂಂತ ಹೇಳಿರೆ? ಬ್ರಹ್ಮಕಲಶಂದಾಗಿ ಅಪ್ಪ, ಅವ್ವ ಇಬ್ಬರ್ನೂ ಕಳ್ಕಂಬ ಹಾಂಗಾತ್. ಅದರ್‌ಂದ ನಂಗೆ ಸಿಕ್ಕಿದ್‌ಂತೇಳಿರೆ ಹಸ್ರ್ ಲುಂಗಿ ಮಾಣಿಯ ಮುಸ್ಸಂಜೆನ ಮುತ್ತು. ಅಂವ ಎಲ್ಲಿರ್ದು ಈಗ? ಎಲ್ಲಿ ಕವಡೆ ಹಾಕಿ ಜ್ಯೋತಿಷ್ಯ ಹೇಳ್ತುಟ್ಟೋ? ಎಲ್ಲಿ  ಮಣ ಮಣ ಮಂತ್ರ ಹೇಳಿ ಬೂಂ ಬೂಂ ಶಂಖ ಊದುತುಟ್ಟೋ? ನಿಶ್ಚಿತ ಆದಾಯ ಇಲ್ಲದ ಅವಂಗೆ ಯಾರಾದರೂ ಹೆಣ್ಣು ಕೊಡುವನೋ?

ಮದುವೆ ಸರಳ ರೀತಿಲಿ ನಡ್ತ್. ಇತಿಹಾಸದ ಮಾಸ್ಟ್ರ, ತ್ಯಾಂಪಣ್ಣ, ಮಾಲಿಂಗ ಮಾವ, ಸತ್ಯಣ್ಣ ಸಂಬ್ರಮಲಿ ಓಡಾಡಿ ಸುದಾರಣೆ ಮಾಡ್ದೊ. ಅವಳಿಗಿಂತ ಮುಂದೆನೇ ಮದುವೆಯಾದ ಗೆಳತಿಯರ್ ಒಂದೊಂದನ್ನು ಎತ್ತಿಕಂಡು ಬಂದಿದ್ದೊ. ಅವರ್ಲಿ ಲತಾ ಹೇಳ್ತ್,

"ಮಾಸ್ತ್ರ ಕಣ್ಣ್ ತಪ್ಪಿಸಿ ಓಡಾಡುತ್ತೊಳೆ ಕಣೇ. ಇನ್ನೇನಾಗದಿದ್ರೂ ದೇಶಕ್ಕೆ ಎರ್ಡ್ ಕಾಣಿಕೆ ಆಗಿಯೇ ಬುಟ್ಟತ್. ಇನ್ನೊಂದು ಬೇಕೋ ಬೇಡನೊಂತ ಗ್ಯಾನ ಮಾಡುತ್ತೊಳೆ. ಅಬ್ಬಬ್ಬಾ ಹೊರ್ದು ಮತ್ತು ಹೆರ್ದು ದೊಡ್ಡ ಹಿಂಸೆನೇ. ದೇವ್ರು ಇದೊಂದು ವಿಸಯಲಿ ಮಾತ್ರ ನೂರಕ್ಕೆ ನೂರು ಪುರುಷ ಪಕ್ಷಪಾತಿ. ಗಂಡಸ್ರೂ ಹೆರುವಂತಾಗಿದ್ದರೆ ಅವನ ಗಂಟೇನ್ ಹೋಗ್ತಿತ್ತ್?

ಮಂಜುನಾಥ ಬಾಗವತರ್ ಅವ್ಳಿಗೆ ಸೇಸೆ ಹಾಕಿಕಾಕನ ಕಣ್ಣ್‌ಲಿ ನೀರಿತ್ತ್. "ನಿನ್ನ ತಲೆಗೆರ್ಡ್ ಅಕ್ಕಿ ಕಾಳ್ ಹಾಕ್ಲೊಸಕುಂತಲೇ ಆ ಕಪಿಲೇಶ್ವರ ನನ್ನನ್ನ ಇಷ್ಟ್ ದಿನ ಬದ್ಕಿಸಿಯೊಳ್ದ್. ಅಮೇರಿಕಲಿರುವ ದೊಡ್ಡಂವ ಬಿಳೀ ಹೆಣ್ಣ್‌ನ ಕಟ್ಟಿಕಣ್ತ್. ಇಲ್ಲಿ ಇಂಜಿನೀಯರಿಂಗ್ ಮಾಡ್‌ತ್ತಿದ್ದವಂಗೆ ಚಂಡೀಗಡಲಿ ಕೆಲ್ಸ ಸಿಕ್ಕಿತಲ್ಲಾ? ಅಲ್ಲಿ ಒಬ್ಳು ಪಂಜಾಬಿ ಗೂಡೆನ ಕಟ್ಟಿಕಂಡುಟು. ಅವು ಮದುವೆ ಆದದಕ್ಕೆ ನಂಗೆ ಬೇಜಾರ್ ಏನಿಲ್ಲೆ. ಅವರವರ ಬದ್ಕು ಅವರವರ್ದು. ಎಲ್ಲಾ ಮುಗ್ದಮೇಲೆ ತಿಳ್ಸಿತ್. ಮುಂದೇನೇ ತಿಳ್ಸ್ ತ್ತಿದ್ದರೆ ನಾನೇ ಮುಂದೆ ನಿತ್ತ್ ಮದ್ವೆ ಕಾರ್ಯ ನಡ್ಸ್‌ತ್ತಿತ್ಲೆನಾ? ನಂಗೆ ಅದಲ್ಲ ಚಿಂತೆ. ನನ್ನ ನಂತರ ಕಲಾ ಶಾಲೇನ ನಡ್ಸವು ಯಾರ್? ಮಾಲಿಂಗ ಅಜ್ಜ ಆತ್. ಸತ್ಯ ಒಂದಿಷ್ಟ್ ಚಂಡೆ ಮದ್ದಳೆ ಕಲ್ತತ್. ಹಾಡ್, ಕುಣಿತ? ಊಹ್ಞೂಂ! ನಿನ್ನ ಗಂಡನ ಒಪ್ಪಿಗೆ ಪಡ್ದ್ ಇಲ್ಲೊಂದು ಕಲಾಶಾಲೇನ ಸುರು ಮಾಡ್. ನಿಂಗೆ ಗೊತ್ತಿರುದನ್ನ ನಾಕ್ ಜನಕ್ಕೆ ಹೇಳಿಕೊಡು".

ಮದ್ವೆ ಮಂಟಪಕ್ಕೆ ತಪಸ್ವಿನಿ ಹರಿಯೋದು ಲಾಯ್ಕ ಕಾಣ್‌ತಿತ್ತ್. ಮದುವೆಗೆ ಬಂದವು ಅಲ್ಲಿನ ಮೀನ್‌ಗಳಿಗೆ ಅಕ್ಕಿ ಹಾಕಿ ಹಿಡಿಯಕೆ ಯತ್ನಿಸ್‌ತ್ತಿದ್ದೊ. ಮೀನ್‌ಗ ಬಾಲಂದ ಹೊಡೆಕಾಕನ ಹೋ ಅಂತ ಬೊಬ್ಬೆ ಹಾಕ್‌ತ್ತಿದ್ದೊ. ಅದಿಕ್ಕಿಂತ ಹಂಞ ಕೆಳಗಡೆ ಇತಿಹಾಸದ ಮಾಸ್ತ್ರ ಕಟ್ಟಿದ ತೂಗು ಸೇತುವೆನ ಉದ್ದಕ್ಕೂ ಜನ ಸುಮ್ಮನೆ ಓಡಾಡ್‌ತ್ತಿದ್ದೊ. ಕೆಲವು ನಡೂಲಿ ನಿತ್ತ್ ಪೋಟೋ ತೆಗ್ಸ್‌ತ್ತಿದ್ದೊ. ತನ್ನ ಮನೆಗೆ ಹೋಕೆ ಮಳೆಗಾಲಲಿ ಪಾಲವೇ ಗತಿ. ಪುಣ್ಯಾತ್ಮರ್ ಅಲ್ಲೊಂದು ತೂಗುಸೇತುವೆ ಕಟ್ಸ್‌ತ್ತಿದ್ದರೆ, ಅವ್ವ ಬದ್ಕಿ ಉಳಿತ್ತಿತ್ತ್!.

ಅಮ್ಮಣ್ಣಿನ ಕಣ್ಣ್‌ಲಿ ನೀರ್ ಹನ್ಕಿತ್. ಅದರ ನೋಡ್ದ ಗಂಡ ಹೇಳ್ತ್

"ತವರ್ರು ಮನೆ ಬುಟ್ಟು ಹೋಕಾಕನ ತಂಗಿಗೂ ಮರ್ಡಿಕೆ ಬಂದಿತ್ತ್. ನಾನೇನ್ ಅಪರಿಚಿತನಾ? ಸುಮ್ಮನೆ ಕಣ್ಣೀರ್ ಹಾಕ್ಬಡ."

ಗಂಡನ ಮನೆ ದೊಡ್ಡದಿತ್ತ್. ಹಳೇ ಕಾಲದ್ದೇ ಒಂದಿಷ್ಟ್ ಕಾಪಿ ಮತ್ತೆ ಯಾಲಕ್ಕಿ ತೋಟ ಇತ್ತ್. ನೀರ್ ಸಾಕಷ್ಟ್ ಇತ್ತ್. ಜಾಲ್‌ನ ತುದೀಲಿ ಸಣ್ಣ ಹೂತೋಟ.

ಬಣ್ಣ ಬಣ್ಣದ ಗುಲಾಬಿ ಮತ್ತೆ ಡೇಲಿಯಾ ಹೂಗಳಿತ್ತ್. ಎದ್‌ರ್ಲಿ ಸಣ್ಣ ನೀರ್ನ ಕೊಳ. ಅದರ ತುಂಬಾ ನೈದಿಲೆ ಹೂವು. ಮನೆಯ ಹಿಂದ್‌ಗಡೆ ಕಾಲಿ ಗುಡ್ಡೆ. ಅತ್ತೆಯಾಗಲಿ, ಗಂಡನ ಅಕ್ಕ ಆಗಲಿ ದೊಡ್ಡಸ್ತಿಕೆ ಹೇಳಿಕಣ್‌ತ್ತಿಲೆ. ಯಕ್ಷಗಾನದ ಗುರುಗ, ಇತಿಹಾಸದ ಮಾಸ್ಟ್ರ್, ಕಾಲೇಜು ಗೆಳತಿಯರ್ನ ನೋಡಿ ತಣ್ಣಗಾಗಿರೊಕೂಂತ ಅವಳಿಗನ್ನಿಸಿತ್. ಗಂಡನ ತಂಗೆದ್ ನಗು ಮೋರೆ. ಅವ್ಳ ಸರಳವಾಗಿಯೇ ಇದ್ದದ್ ಅಮ್ಮಣ್ಣಿನ ಹೆದರಿಕೆನ ದೂರ ಮಾಡ್ತ್.

ಸುರೂನ ರಾತ್ರಿ ಎಂಬ ರೋಮಾಂಚನ ಯಾಕೆ ನನ್ನಲ್ಲಿ ಮೂಡ್ತ್‌ಲೇಂತ ಅವ್ಳ ಆಗಿಂದಲೇ ಪ್ರಶ್ನಿಸಿಕಣ್‌ತ್ತಿತ್ತ್. ರೊಮ್ಯಾಂಟಿಕ್, ಮಾತ್, ಲುಕ್ಕು, ವರ್ತನೆ ಯಾವುದೂ ಇಲ್ಲದ ಗಂಡ ಅದಕ್ಕೆ ಕಾರಣನಾ? ಅಲ್ಲ ಮನಸ್ಸಿನ ಮೂಲೆಲಿ ಅಡಗಿರುವ ಹಸ್ರ್ ಲುಂಗಿನ ಮುಸ್ಸಂಜೆ ಮುತ್ತಿನ ಮಾಣಿಯ ನೆನಪು ಕಾರಣನಾ? ಅತ್ತೆ ಅವಳ ಕೈಲಿ ಒಂದು ಲೋಟ ಹಾಲ್ ಕೊಟ್ಟತ್. ಗಂಡನ ತಂಗೆ ಕೈ ಅದುಮಿ, "ಇಂದ್ ಮರೆಕಾಗದ ರಾತ್ರಿ. ಬಿ ಚಿಯರ್‌ಪುಲ್ ಎಂಜಾಯ್" ಅಂತ ಹೇಳಿ ನಗಾಡಿ ಮಲ್ಲುಗವ ಕೋಣೆನ ಬಾಗಿಲ್ ಎಳ್ಕಣ್‌ತ್ತ್.

ಗಂಡ ಲೋಟ ಪೂರ್ತಿ ಹಾಲ್ನ ಒಬ್ಬನೇ ಗಟಗಟ ಕುಡ್ತ್. "ನಂಗೆ ರಾತ್ರೆ ಒಂದು ಲೋಟ ಹಾಲು ಕುಡ್ದೇ ಕುಡಿಯೋಕು. ಡಾಕ್ಟ್ರ ಹೇಳ್ದ್. ನಿಂಗೆ ಬೇಕಿದ್ದರೆ ಅಡುಗೆ ಕೋಣೆಗೆ ಹೋಗಿ ಕುಡ್ದು ಕಂಡ್ ಬಾ. ಯಾರೂ ಏನೂ ಹೇಳ್ದುಲೆ. ಇದ್ ಇನ್ನ್ ಮುಂದೆ ನಿನ್ನದೇ ಮನೆ"

ಅವ್ಳ ಮಂಚದ ಕೊಡೀಲಿ ಸುಮ್ಮನೆ ಕುದ್ದಿತ್ತ್. ಅವಂಗೆ ಮಾತಾಡಿಕೆ ವಿಸಯ ಇತ್ಲೆ. ಯಕ್ಷಗಾನ, ನಾಟಕ, ಸಾಹಿತ್ಯ ಅವಂಗೆ ಇಷ್ಟ ಇತ್ಲೆ. ಇವ್ಳಿಗೆ ಸಿನಿಮಾದ ಬಗ್ಗೆ ಗೊತ್ತಿತ್ತ್‌ಲೆ. ಅಂವ ಎರ್ಡ್ ಸರ್ತಿ ಆಸೆಂದ ಅವ್‌ಳ್‌ನ ನೋಡ್ತ್. ಕಡೆಗೆ ಎದ್ದ್ ನಿತ್ತ್ ಮೈಮುರ್ದು ಶರ್ಟ್ ತೆಗ್ದ್ ದೀಪ ಕೆಡ್ಸಿತ್. ಅವ್‌ಳ್‌ನ ಮಂಚದ ಮೇಲೆ ಉರುಳ್ಸಿಕಂಡ್ ಬಟ್ಟೆಗಳನ್ನ ಕಿತ್ತ್ ಬಿಸಾಕಿ ಅವಳ ಮೇಲೆ ಬಿದ್ದ್‌ಕಂಡ್ ಸೇಂಕ್‌ತಾ ಇತ್ತ್. ಅವ್ಳ ತುಂಬಾ ಹೆದ್ರಿಕಂಡ್ ಕಣ್ಣ್ ಮುಚ್ಚಿಕಣ್ತ್. ಮೊದಲ ರಾತ್ರಿ ಅವಳ ಪಾಲಿಗೆ ಒಂದು ಬಯ ಹುಟ್ಟಿಸುವ ಆಚರಣೆಯಾಗಿ ಬುಟ್ಟತ್.

ಮಾರ್ನೆ ದಿನ ಅವ್ಳು ಬೇಗನೆ ಎದ್ದ್ ಸ್ನಾನ ಮುಗ್ಸಿತ್. ತೋಟಕ್ಕೆ ಒಂದು ಸುತ್ತು ಹಾಕಿ ಬಾಕನ ಅತ್ತೆ ಇವ್ಳಿಗಾಗಿ ಕಾಯ್‌ತಿದ್ದೊ.

"ಬೊಳ್ಪಿಗೆ ತೋಟಕ್ಕೆ ಹೋಗ್ವ ಅಗತ್ಯ ಏನಿಲ್ಲೆ. ಮನೆಲಿ ದಿನಾ ಗುಡ್ಸಿ ಉಜ್ಜುದು ನಿನ್ನ ಕೆಲ್ಸ. ಸದ್ಯಕ್ಕೆ ನಾನ್ ಅಡ್ಗೆ ಮಾಡ್ನೆ. ನಿನ್ನ ಮಾವಂಗೆ ಸಿಹಿ ಮೂತ್ರ ಉಟ್ಟು.

ಗ್ಯಾಸ್ ಟ್ರಬಲ್ ಉಟ್ಟು, ನಂಗೆ ಹೈಪರ್ ಟೆನ್ಶನ್ ಉಟ್ಟು, ನಿನ್ನ ಗಂಡಂಗೆ ಅಸ್ತಮಾ ಕಾಯಿಲೆ. ಸಾರ್, ಸಾಂಬಾರ್, ಚಾ, ಕಾಪಿ ಮಾಡಿಕಾಕನ ಎಚ್ಚರ ಬೇಕಾದೆ. ನಾನ್ ಅಡ್ಗೆ ಮಾಡಿಕಾಕನ ಬಂದ್ ನೋಡಿಕಾ. ಎರ್ಡ್ ದಿನದೊಳಗೆ ನೀನೇ ಎಲ್ಲಾ ಕಲ್ತ್ ಬುಟ್ಟಿಯ."

ಕಾಲೇಜಿಗೆ ಮನೆಂದ ಅರ್ದಗಂಟೆ ದಾರಿ. ಗಂಡಗೊಂದು ಹಳ್ತ್ ಸ್ಕೂಟರ್ ಇದ್ದದರ್ಂದ ಓಡಾಟಕ್ಕೆ ಸಮಸ್ಯೆ ಇತ್ಲೆ. ಒಂದು ಹಿಂಬೊತ್ತು ಕಾಲೇಜಿಂದ ಮನೆಗೆ ವಾಪಾಸಾಕನ ಅತ್ತೆ ಹೇಳ್ತ್.

"ಮೂರು ಲಕ್ಷ ಕೇಳ್ದಕ್ಕೆ ನಿನ್ನ ಚಿಕ್ಕಮ್ಮ ಸಾವಿರ ನೆವನ ಹೇಳಿ ಬಾಯಿ ಮುಚ್ಚಿಸಿತ್. ಈಗ ದೂಳ್‌ಲಿ ಓಡಾಡಿ ಇವನ ಅಸ್ತಮಾ ಹೆಚ್ಚಾಗುಟು. ಮಳೆಗಾಲಲಿ ರೈನ್ ಕೋಟು ಹಾಕಿಕಂಡ್ ಸ್ಕೂಟರ್ಲಿ ಹೇಂಗೆ ಓಡಾಡಿರೆನೋ? ಈಗಾದ್ರ್ ಒಂದು ಕಾರ್ ತೆಗ್ದ್‌ಕೊಡಿಕೆ ನಿನ್ನ ಚಿಕ್ಕಮ್ಮಂಗೆ ಹೇಳ್. ಅಷ್ಟ್ ಆಸ್ತಿ ಇಸಿಕಂಡ್ ಯಾಕೆ ಸತ್ತದೆನೋ?

ಅಮ್ಮಣ್ಣಿ ಮಾತಾಡ್ತ್‌ಲೆ. ಎರ್ಡ್ ದಿನ ಕಳ್ದ್ ಅವ್ಳ ಮೊಬೈಲ್‌ಗೆ ಬಾಳಕ್ಕನ ಫೋನ್ ಬಾತ್.

"ಏನ್ನೇ ಹೇಂಗುಟ್ಟು ನಿನ್ನ ರಾಜಕುಮಾರ? ಎನಿಪ್ರಾಬ್ಲೆಂ?"

ಅಮ್ಮಣ್ಣಿ ಅತ್ತೆನ ಮಾತ್‌ಗಳ್ನ ತಂಗೆಗೆ ಒಪ್ಪಿಸಿತ್.

"ಡೋಂಟ್‌ವರಿಯಾ. ನಂಗಿಲ್ಲಿ ಒಳ್ಳೆ ಪೇಮೆಂಟು ಉಟ್ಟು. ಹತ್ತ್ ಸಾವಿರ ಡಾಲರ್ ಕಳ್ಸಿ ಕೊಟ್ಟನೆ. ಒಳ್ಳ ಕಾರ್ ತಕ. ಜುಮ್ಮಂತ ನಿನ್ನ ಅತ್ತೆನ ಒಂದೆರ್ಡ್ ದೇವಾಸ್ಥಾನಗಳಿಗೆ ಕರ್ಕಂಡ್ ಹೋಗು. ಬದಲಾದೆ ನೋಡು."

ಹೊಸ ಕಾರ್ ಬಾತ್. ಅಮ್ಮಣ್ಣಿ ಡ್ರೈವಿಂಗ್ ಕಲ್ತ್ ಲೈಸನ್ಸ್ ಮಾಡ್ಸಿ ಕಣ್ತ್. ಬಾಳಕ್ಕನ ಗಂಡ ಒಳ್ಳೆಯಂವ. ಅವ್ಳ ಹಣನ ಖರ್ಚು ಮಾಡುವ ಸ್ವಾತಂತ್ರ್ಯ ಬಾಳಕ್ಕಂಗೇ ಕೊಟ್ಟುಟು. ಅವಳ್ಂದ ದುಡ್ಡು ಬಾರದಿರ್‌ತ್ತಿದ್ದರೆ ಕಾರ್ ತಕಂಬಕೆ ಆಗ್‌ತ್ತಿತ್ಲೆ. ಅತ್ತೆ ದಿನಾ ಹಂಗ್‌ಸದೆ ಬುಡ್ತಿತ್ಲೆ. ಇನ್ನ್ ಮುಂದೆ ಇವರ ಅಸ್ತಮಕ್ಕೆ ನನ್ನ ಬೈಯುವ ಹಾಂಗಿಲ್ಲೆ. ಬಾಳಕ್ಕ ಹೇಳ್ದಂಗೆ ಅತ್ತೆ ಮಾವನ ಕಾರ್ಲಿ ಕುದ್ರಿಸಿಕಂಡ್ ಗಂಡನೊಟ್ಟಿಗೆ ಅವ್ಳ್ ಮೈಸೂರಿಗೆ ಹೋಗಿ ಬಾತ್. ಕಜೆ ಮನೆಗೆ ಕಾರ್ಲೇ ಹೋಗಿ ತ್ಯಾಂಪಣ್ಣ, ಚಿಕ್ಕಮ್ಮನ ಕಪಿಲೇಶ್ವರ ದೇವಾಸ್ತಾನಕ್ಕೆ, ಶಿವಪ್ಪ ಚಿಕ್ಕಪ್ಪನ ಮನೆಗೆ ಕರ್ಕಂಡ್ ಹೋತು.

ತ್ಯಾಂಪಣ್ಣ ತುಂಬಾ ಮನಸ್ಸಿನೊಳಗೇ ಯೋಚನೆ ಮಾಡ್ವ ಹಾಂಗಿತ್.

"ಯಾಕೋ ಹೆಚ್ಚು ದಿನ ಬದ್ಕುದುಲೆಂತ ಅನ್ನಿಸಿದೆ ಅಮ್ಮಣ್ಣಿ. ಇನ್ನೊಂದು ಜನ್ಮಾಂತೇಳುದು ಇದ್ದರೆ ನಿನ್ನ ಹೊಟ್ಟೆಲೇ ನಾನ್ ಹುಟ್ಟುದು. ಈ ಹಾಳ್ ಶರ್ರಕ್ಕೆ ಯಾವ ಸಂಸ್ಕಾರನೂ ಮಾಡ್ಬಡ. ಹಾಂಗೆ ತಪಸ್ವಿನಿಲಿ ಬುಟ್ಟುಬುಡು. ಮೀನ್‌ಗಳ ಹೊಟ್ಟೆ ಆದ್ರೂ ತುಂಬಲಿ."

ಹೀಂಗೆ ಹೇಳ್ದ ಒಂದೇ ವಾರಲಿ ತ್ಯಾಂಪಣ್ಣ ತೀರಿ ಹೋತ್. ಚಿಕ್ಕಮ್ಮನ ಫೋನ್ ಬಂದ ತಕ್ಷಣ ಅಮ್ಮಣ್ಣಿ ಕಜೆ ಮನೆಗೆ ಹೋತ್. ಶಿವಪ್ಪ ಚಿಕ್ಕಪ್ಪ, ರಾದ ಚಿಕ್ಕಮ್ಮ, ಶಾರದೆ, ಪ್ರಸಾದ, ತ್ಯಾಂಪಣ್ಣನ ಸುತ್ತ ಇದ್ದ್ ಅಳ್‌ತಿದ್ದೊ.

"ಸುಖದ ಸಾವು" ಒಂದೇ ಒಂದು ದಿನ ಕಾಯಿಲೆಲಿ ಮಲ್ಗಿತ್ಲೆ. ಇಂದ್ ಎದೆಬೇನೆಂತ ಎದೆ ಉಜ್ಜಿಕಣ್‌ತಿತ್ತ್. ಹಾಂಗೆ ಕುಸ್ದು ಬಿದ್ದ್ ಕಣ್ಣ್ ಮುಚ್ಚಿತ್." ಚಿಕ್ಕಮ್ಮನ ವಿವರಣೆ ಕೇಳಿ ಅಮ್ಮಣ್ಣಿಗೆ ಅಜ್ಜನ ನೆಂಪಾತ್. ಅವನೂ ಹಾಂಗೇ ತೀರಿ ಹೋಗಿರೊಕು.

ಅಜ್ಜನ ದೂಪೆ ಹತ್ರಲೇ ತ್ಯಾಂಪಣ್ಣಂಗೂ ಕಾಟ ಹೂಡಿ ಕಿಚ್ಚಿ ಕೊಟ್ಟೊ. ಒಳ್ಳ ಸಮಾದಿ ಎಲ್ಲ ಮಾಡಿ ಕ್ರಮ ಪ್ರಕಾರ ಹದಿನಾರರ ಕುಲೆ ಶಾಸ್ತ್ರ ಮಾಡಿ ಕಾರಣೋರರ ಸಾಲಿಗೆ ಸೇರ್ಸಿದೊ. ತನ್ನದ್‌ಂತೇಳುವ ಸಂಸಾರ ಇಲ್ಲದ, ನೆಂಟ್ರೂ ಇಲ್ಲದ ತ್ಯಾಂಪಣ್ಣ ಕಜೆ ಮನೆನ ಒಂದು ಬಾಗ ಆಗಿಹೋಗಿತ್ತ್. ಅಜ್ಜನ ಜಾಗನ ತುಂಬಿತ್ತ್. ತೀರ್ತದ ತ್ಯಾಂಪಣ್ಣನ ವಿಜ್ಞಾನಿ ತ್ಯಾಂಪಣ್ಣಾಂತ ಕರ್ದರೆ ನಗಾಡಿಕಂಡೇ ಉತ್ತರಿಸ್‌ತ್ತಿತ್ತ್. ಅಪ್ಪ ಕಾಣೆಯಾದ ಮೇಲೆ ಕಜೆ ಮನೆಗೊಂದು ಗಂಡ್ ದಿಕ್ಕಾಗಿತ್ತ್. ಸ್ವರ್ಗಂತೇಳುವಂತದ್ದ್ ಇದ್ದರೆ ಅಲ್ಲಿ ತ್ಯಾಂಪಣ್ಣ ಸುಖವಾಗಿ ಇರ್ದೂಂತ ಅಮ್ಮಣ್ಣಿ ಅಂದ್‌ಕಂಡತ್.

ಎಲ್ಲಾ ಕ್ರಿಯಾ ಕಾರ್ಯಕ್ರಮ ಮುಗ್ದ್ ಎಲ್ಲವೂ ಹೊರ್ಟ್ ನಿಲ್ಲಿಕಾಕನ ಚಿಕ್ಕಮ್ಮ ಹೇಳ್ತ್,

"ನಾನ್ ಒಂಟಿಯಾಗಿ ಬುಟ್ಟೆ, ಅಮ್ಮಣ್ಣಿ, ತಿಂಗಳಿಗೆ ಎರ್ಡ್ ಸರ್ತಿ ಆದ್ರ್ ಇಲ್ಲಿ ಬಂದ್ ಹೋಕು. ಶಿವಪ್ಪ ಬಾವ ಮತ್ತೆ ಕೃಷ್ಣಪ್ಪಣ್ಣ ಆಗಾಗ ಇಲ್ಲಿಗೆ ಬರ್‌ತಿರೋಕು. ಹೆಣ್ಣ್ ಹೆಂಗ್ಸ್ ನಾನ್. ಆಸ್ತಿ, ಮನೆ, ದೇವಸ್ತಾನ, ದೂಪೆ ಎಲ್ಲಾನೂ ನೋಡಿಕಣಕು. ಇನ್ನ್ ತವರು ಮನೆಗೆ ಹೋದು ನಂಗೆ ಇಷ್ಟ ಇಲ್ಲೆ. ಕಡೇ ದಿನಗಳ್ನ ಇಲ್ಲೇ ಕಳ್ದನೆ. ನಾನಿರುವವರೇಗೆ ಈ ಜಾಗ ಇರ್ಲಿ. ಮುಂದೆಗೆ ಹೇಂಗೆ ಅನುಕೂಲ ಆದೆನೋ ಹಾಂಗೆ ಮಾಡಿಬುಡಿ. ಮಾರುವ ಹಾಂಗಿದ್ದರೆ ಮಾರಿ ಬುಡಿ."

ಕಜೆ ಜಾಗನ ಮಾರುದೋ? ತಪಸ್ವಿನಿಗೆ ತಾಗಿಕಂಡ್ ಇಂತ ಒಳ್ಳ ಜಾಗ ಬೇರೆಲ್ಲಿ ಸಿಕ್ಕುದು? ಅಷ್ಟಕ್ಕೂ ಇಷ್ಟು ಒಳ್ಳ ನೀರಿರುವ ತಪಸ್ವಿನಿನ ಮರ್ತ್ ಬುಡದೋ?

ಅಜ್ಜ, ಅಜ್ಜಿ, ತ್ಯಾಂಪಣ್ಣನ ಸಮಾದಿಗಳ್ನ ಈ ಜಾಗ ತಕಂಡವು ಉಳ್ಸವನೋ? ಅಮ್ಮಣ್ಣಿಗೆ ಗಲಿಬಿಲಿ ಆತ್. ತಾನ್ ಗಂಡನ ಮನೆಂದ ಇಲ್ಲಿಗೆ ಬಂದ್ ಇದ್ದರೇನ್? ಅದಕ್ಕೆ ಅಂವ ಒಪ್ಪಿಕಿಲೆ. ಅಂವ ಒಪ್ಪಿರೂ ಅತ್ತೆ ಬಂದಿರಿಕಿಲೆ. ಚಿಕ್ಕಮ್ಮ ಒಬ್ಬಿಂದ ಜಾಗನ ನೋಡಿಕಂಬಕೆ ಆಕಿಲ್ಲೆ. ಏನ್ ಮಾಡ್ದೂ...? ಎಷ್ಟ್ ಯೋಚಿಸಿರೂ ಒಂದು ತೀರ್ಮಾನಕ್ಕೆ ಬಾಕೆ ಅವಳಿಂದಾತ್ಲೆ. ಸದ್ಯಕ್ಕೆ ಚಿಕ್ಕಮ್ಮ ಹೇಂಗೂ ನೋಡಿಕಣ್ದೆ. ಮತ್ತೆ ಅಂತ ಪರಿಸ್ಥಿತಿ ಬಾಕನ ನೋಡಿಕಂಡರಾತ್‌ಂತ ಸುಮ್ಮನಾತ್.

ಈ ಸರ್ತಿ ಅವ್ಳ್ ಹೊರಗಾತ್ಲೆ. ಎರಡ್ನೇ ತಿಂಗಳಾದ್ರೂ ಮುಟ್ಟು ಆಗದಿರಿಕಾಕನ ತನ್ನಲ್ಲೊಂದು ಜೀವ ಹುಟ್ಟುತ್ತಿರುದು ಅವಳಿಗೆ ಖಂಡಿತಾತ್. ಗಂಡಂಗೆ ಅದನ್ನ ಹೇಳ್ತ್. "ಈಗ ನಿಂಗೆ ಗೊತ್ತಾಗಿರುದು. ನಾವ್ಗೆ ಕಾರ್ ಎಷ್ಟ್ ಅಗತ್ಯಂತ ಹೆರಿಗೆ ರಜೆ ಸಿಕ್ಕುವಲ್ಲಿವರೇಗೆ ಆರಾಮಾಗಿ ಕಾರ್ಲಿ ಕಾಲೇಜಿಗೆ ಹೋಗಿ ಬರಕ್."

ಗಂಡ ಈಗಳೊ ಸಂಬಳದ ಬಗ್ಗೆನೇ ಗ್ಯಾನ ಮಾಡ್‌ತುಟ್ಟು. ಲಾಸ್ ಆಪ್ ಪೇ ಮಾಡ್ಬಡಂತ ಸೂಚ್ಯವಾಗಿ ತಿಳಿಸ್‌ತ್ತುಟ್ಟು. ಅಪ್ಪ ಆಗುತ್ತಿರುದು ಇವಂಗೆ ಕುಸಿ ಕೊಡುತ್ತಿಲ್ಲೆನೋ? ಅವ್ಳ ಅತ್ತೆನಲ್ಲಿ ಸಹ ಯಾವುದೇ ಬದಲಾವಣೆಗಳಿತ್ಲೆ. ಗಂಡ ಈ ವಿಚಾರನ ಅವನ ಅವ್ವನಲ್ಲಿ ಹೇಳದೇ ಇರ್ದೋ? ಹೆಣ್ಣಾದ ಅವ್ವಿಗೂ ಕುಸಿಯಾಕಲ್ಲ?"

ಕತ್ತಲೆಗೆ ಬಾಳಕ್ಕಂಗೆ ವಿಷಯ ತಿಳ್ಸಿತ್.

"ಗ್ರೇಟ್ ಕಣೇ ಅಮ್ಮಣ್ಣೀ. ನಾವು ಇನ್ನೂ ಒಂದು ವರ್ಷ ಬೇಡಾಂತೊಳೊ. ಅಕ್ಕ ಆಗಿ ನಮ್ಮ ದೇಶಕ್ಕೆ ಸುರೂನ ಕಾಣಿಕೆ ಕೊಡಕ್ಕಾದ್ ನಿನ್ನ ದರ್ಮನೆ. ಟೇಕ್‌ಕೇರ್. ಸಂಕೋಚ ಬೇಡ ಮಾರಾಣಿ ದುಡ್ಡು ಬೇಕಾದ್ರೆ ಕೇಳ್."

ತನಗಾಗಿ ತುಡಿಯುವ ಒಂದು ಜೀವ ಉಟ್ಟುಂತೇಳುವ ಬಾವನೆ ಅವಳ ಮನ್‌ಸಿಗೆ ಕುಸಿಕೊಟ್ಟತ್.

ಒಂದು ದಿನ ಅವಳ ಗಂಡ ಇದ್ದಕ್ಕಿದ್ದಾಂಗೆ ಹೇಳ್ತ್,

"ನಾಳೆ ಹೋಗಿ ಲೇಡಿ ಡಾಕ್ಟ್ರಂಲ್ಲಿ ಚೆಕಪ್ ಮಾಡ್ಸಿಕಂಡ್ ಬರೋನ. ಅವ್ವನೂ ಬಂದದೆ."

"ಚೆಕಪ್ಪ್ ಯಾಕೆ? ನಂಗೆ ಯಾವುದೇ ಸಮಸ್ಯೆ ಇಲ್ಲೆ. ನಾರ್ಮಲಾಗಿಯೊಳೆ."

"ಚೊಚ್ಚಲ ಹೆರಿಗೆ ಅಲ್ಲಾ? ತುಂಬಾ ಎಚ್ಚರಲಿ ಇರೋಕಾದೆ. ಅವ್ವನೂ ಹೇಳಿಟು."

ಮಾರ್ನೆ ದಿನ ಲೇಡಿ ಡಾಕ್ಟರ್ ಅವಳ್ನ ಪರೀಕ್ಷೆ ಮಾಡ್ದೊ. ಆಮೇಲೆ ಮೋರೆ ಗಂಟಿಕ್ಕಿದೊ. "ಪ್ರಾಬ್ಲೆಮ್ ಉಟ್ಟು. ಸ್ಕ್ಯಾನಿಂಗ್ ಮಾಡ್ಸೋಕಾದೆ" ಅಂತ ಹೇಳ್ದೊ.

ಅಮ್ಮಣ್ಣಿ ಅತ್ತೆನ ಮೋರೆ ನೋಡ್ತ್. "ಮಾಡ್ಸಿ" ಅತ್ತೆ ಒಪ್ಪಿಗೆ ಕೊಟ್ಟೊ.. ಸ್ಕ್ಯಾನಿಂಗ್ ಮುಗ್ಸಿ ಬಂದ ಮೇಲೆ ಮನೇಲಿ ಎಲ್ಲವೂ ಗಂಬೀರರಾಗಿದ್ದೊ. ಡಾಕ್ಟ್ರ ಎರ್ಡ್ ಟಾನಿಕ್ ಬರ್ದ್ ಕೊಟ್ಟಿದ್ದೊ. ಅದ್ ಬುಟ್ಟರೆ ಬೇರೆ ಏನು ಸಹ ಅವಳಲ್ಲಿ ಹೇಳಿತ್ಲೆ.

ಕತ್ತಲೆಗೆ ಗಂಡ ಹೇಳ್ತ್,

"ನಿನ್ನ ಹೊಟ್ಟೆಲಿರುದು ಹೆಣ್ಣ್ ಕೂಸು. ನಾವ್ಗೆ ಯಾರಿಗೂ ಸುರೂನ ಕೂಸು ಹೆಣ್ಣಾದು ಇಷ್ಟ ಇಲ್ಲೆ. ತೆಗ್ಸಿಬುಡೊನೋಂತ ಅವ್ವ ಹೇಳ್ತುಟ್ಟು. ಅವ್ಳು ದಂಗ್ ಬಡ್ದ್ ನಿತ್ತ್‌ಬುಡ್ತ್. ಮತ್ತೆ ಸುದಾರಿಸಿಕಂಡ್ ಸಣ್ಣ ಸ್ವರಲಿ ಕೇಳ್ತ್.

"ಅವು ಹೇಳ್ಲಿ. ನೀವೇನ್ ಹೇಳ್ರೆ?"

"ಅವ್ವ ಹೇಳ್ದ್ ಸರಿ. ಸುರೂದು ಹೆಣ್ಣಾದು ಬೇಡ"

"ಹೆಣ್ಣಾದರೆ ಏನ್ ಗಡ? ಇಷ್ಟಕ್ಕೂ ಹೊರುವವಳೂ ನಾನ್. ಹೆರುವವಳೂ ನಾನೆ. ನಂಗೆ ಹೆಣ್ಣಾದರೇನೇ ಇಷ್ಟ. ಅಬಾರ್ಶನ್ ಅಂದರೆ ಅದೇನ್ ಹುಡುಗಾಟಂತ ತಿಳ್ದರನೋ? ಹೆರಿಗೆಗಿಂತಲೂ ಅಪಾಯದ್ದ್ಂತ ನಾನು ಓದಿಯೊಳೆ. ನಮ್ಮ ರಕ್ತ ಹಂಚಿಕಂಡ್ ಹೊಸ ಜೀವವೊಂದು ಹುಟ್ಟಿಟು. ಅದರ ಕೊಲ್ಲಿಕೆ ಅಪ್ಪನಾಗಿ ನೀವ್ಗೆ ಹೇಂಗೆ ಮನಸ್ಸಾದರೂ ಬಂದದೆ? ಎಷ್ಟಕ್ಕೂ ಬೇಡ. ನಾನ್ ಅಬಾರ್ಶನ್ನಿಗೆ ಒಪ್ಪುದುಲೆ."

ಗಂಡ ಮಾತಾಡ್ತ್‌ಲೆ. ಬೊಳ್ಪಿಗೆ ಕಾಲೇಜಿಗೆ ಹೊರ್ಡಿಕಾಕನ ಅತ್ತೆ ಮಾತಾಡ್ದೊ.

"ಏನೇ ತಾಟಗಿತ್ತಿ? ನಾವೆಲ್ಲ ಸೇರಿ ಮಾಡ್ದ ನಿರ್ದಾರ ಅದ್. ಗಬ್ಬ ತೆಗ್ಸುದು ಬೇಡಂತ ಹೇಳಿಕೆ ಎಷ್ಟ್ ಕೊಬ್ಬು ನಿಂಗೆ? ಈ ಮನೆಗೆ ಮೊಮ್ಮಗ ಬರಕೂಂತ ನಾವೆಲ್ಲ ಹಾರೈಸಿರೆ, ಹೆಣ್ಣಾದರೇನ್ಂತ ನೀ ಕೇಳ್ದ ಗಡ. ಈ ಮನೆಯ ಹಿರಿಯರ್ ನೀನೋ ನಾವೊ?"

"ಹಿರಿಯರ್ ನೀವೇ ಅಮ್ಮ. ಹೆರಕಾದ್ ನಾನ್. ನನ್ನ ಹೊಟ್ಟೆಯೊಳಗಿರುದು ಒಂದು ಜೀವ. ಅದ್ ಹೆಣ್ಣೋ, ಗಂಡೋಂತೇಳುವಂತದ್ದ್ ನಂಗೆ ಮುಖ್ಯ ಅಲ್ಲ. ನೀವು ಮೂರು ಹೆತ್ತವು. ಪ್ರತಿಯೊಂದು ಹೆರಿಗೆನೂ ಹೆಣ್ಣಿಗೆ ಪುನರ್‌ಜನ್ಮಂತ ನೀವ್ಗೆ ಗೊತ್ತುಟು. ಗಬ್ಬ ತೆಗ್ಸುದು ಹೆರಿಗೆಗಿಂತಲೂ ಕಷ್ಟಂತ ನಾನ್ ಓದಿಯೊಳೆ. ಒಂದು ವೇಳೆ ಈಗ ಗಬ್ಬ ತೆಗ್ಸಿರೆ ಮುಂದಿನದ್ ಗಂಡಾದೆಂತ ಹೇಂಗೆ ಹೇಳಿರೆ. ಅದೂ ಹೆಣ್ಣಾದ್ರೆ ಏನ್ ಮಾಡ್ರೆ?"

"ನಿಂಗೆ ಪ್ರತಿಸಲನೂ ಹೆಣ್ಣ್‌ಕೂಸೇ ಆದೆಂತಾದರೆ ಮಂಜಂಗೆ ಬೇರೆ ಮದ್ವೆ ಮಾಡ್ಲೋಕಾದೆ."

"ಆಗಲಿ, ನಿಮ್ಮ ಎರಡ್ನೆ ಸೊಸೆಗೂ ಹೆಣ್ಣೇ ಆದರೆ ಆಗಳೂ ಗಬ್ಬ ತೆಗ್ಸಿರೆನಾ? ಕೂಸುನ ಲಿಂಗ ನಿರ್ಧಾರ ಆದು ಅಪ್ಪಂದ. ಅಮ್ಮಂದಲ್ಲ. ಹೊಟ್ಟೆಯೊಳಗಿರುವ ಕೂಸು ಹೆಣ್ಣಾಗಿದ್ದರೆ ಅದಕ್ಕೆ ನಿಮ್ಮ ಮಂಜ ಕಾರಣ. ಅನುಮಾನ ಇದ್ದರೆ ಲೇಡಿ ಡಾಕ್ಟ್ರನ್ನೇ ಕೇಳಿ ನೋಡಿ. ನೀವು ದಯವಿಟ್ಟು ನನ್ನ ಜೀವ ತಿಂಬಡಿ."

"ನೀನ್ ಅದೆಲ್ಲಾ ನಂಗೆ ಹೇಳ್ದು ಬೇಡ. ಮನೆಯ ಹಿರಿಯಳಾಗಿ ಹೇಳ್‌ತ್ತೊಳೆ ನೀನ್ ಗಬ್ಬ ತೆಗ್ಸೊಕೆ."

ಅಮ್ಮಣ್ಣಿ ಗಂಡನ ಮೋರೆ ನೋಡ್ತ್. ಅವ ತಲೆ ಕೆಳಗೆ ಹಾಕಿ ಕುದ್ದಿತ್ತ್. ಹೆಣ್ಣ್ ಕೂಸಿನ ನೆಪ ಒಡ್ಡಿ ಅವಂಗೆ ಎರಡ್ನೆ ಮದ್ವೆ ಮಾಡ್ಸುವ ಯೋಚನೆ ಅತ್ತೆಗಿರ್‌ದೋ? ಆಗ ವರದಕ್ಷಿಣೆ, ಚಿನ್ನ ಪಡಿಯಕ್! ಕಾರ್ ಹೇಂಗೂ ಬಂದಾಗುಟು. ಇನ್ನೇನೂ ನನ್ನಿಂದ ಕೇಳುವ ಹಾಂಗಿಲ್ಲೆ. ಎಲ್ಲವೂ ಸೇರಿ ನಾಟಕ ಆಡುತ್ತೊಳೊ. ಹೇಂಗೆ ನಿಬಾಯಿಸುದು? ಗಂಬೀರ ಸ್ವಬಾವದವರ್ನ ನಂಬುವ ಹಾಂಗಿಲ್ಲೆಂತ ತ್ಯಾಂಪಣ್ಣ ಹೇಳ್ದ್ ನೆನಪಾತ್. ಅತ್ತೆ ಏನೇ ಹೇಳ್ಲಿ. ನಾನ್ ತಾಳ್ಮೆ ಕಳ್ಕಣೆಕಾಗದ್.

"ಅಮ್ಮಾ ನೀವು ಎರ್ಡ್ ಹೆಣ್ಣ್ ಹೆತ್ತವು. ಹೆಣ್ಣಿನ ಬೇನೆ ತಿಳ್ದವು. ನಿಮ್ಮ ಸುರೂನ ಕೂಸೂ ಹೆಣ್ಣೇ. ಅದರಿಂದಾಗಿ ನೀವ್ಗೆ ಏನ್ ತೊಂದರೆಯಾಗುಟು? ಹೋಗಲಿ ಸುರೂನ ಮಗಳ್ನ ಹೊತ್ತಿರ್‌ಕಾಕನ ನೀವ್ಗೆ ನಿಮ್ಮ ಅತ್ತೆ ಅಬಾರ್ಶನ್ ಮಾಡ್ಸೊಕೂಂತ ಹೇಳ್ತಿದ್ದರೆ ನೀವ್ ಒಪ್ಪುತ್ತಿದ್ದರೆನಾ?"

"ಆ ಕಾಲಲಿ ಸ್ಕ್ಯಾನಿಂಗ್ ಎಲ್ಲಿತ್ತ್? ಈಗ ಉಟ್ಟು. ಅದಿರುದು ನಮ್ಮ ಅನುಕೂಲಕೆ. ಅತ್ತೆ ತೆಗ್ಸ್‌ಂತ ಹೇಳ್ತಿದ್ದರೆ ನಾನ್ ತೆಗ್ಸ್‌ತ್ತಿದ್ದೆ. ಅತ್ತೆಗೆ ಎದ್‌ರ್ ಹೇಳಿ ನಾನ್ಯಾಕೆ ನರಕಕ್ಕೆ ಹೋಗ್ಲಿ? ಈಗೇನ್ ಮಾಡಿಯಾ? ತೆಗ್ಸಿಯಾನಾ? ಇಲ್ಲೆನಾ?

"ಇಲ್ಲೆಮ್ಮಾ, ಅಬಾರ್ಶನ್ ಅಂದರೆ ಹಸಿ ಜೀವದ ಕೊಲೆ. ನನ್ನ ಮಗಳ್ನ ನಾನ್ ಕೊಲ್ಲುದೋ? ನನ್ನಿಂದ ಆಕೇಲೆ."

"ನನ್ನ ಮಾತ್‌ನ ತಿರಸ್ಕರಿಸಿಯನೇ ಹಲ್ಕಟ್ ರಂಡೇ"

ಅತ್ತೆ ಸಿಟ್ಟ್‌ಲಿ ದುಡು ದುಡು ಬಂದ್ ಅಮ್ಮಣ್ಣಿನ ಹೊಟ್ಟೆಗೆ ಬಲವಾಗಿ ಒದ್ದತ್.

"ಅಯ್ಯಯ್ಯೋ ಅಮ್ಮ...."

ಕಿರ್ಚಿ ಬಿದ್ದ ಅಮ್ಮಣ್ಣಿನ ಹೊರಳಾಟ ನೋಡಿ ಗಂಡಂಗೆ ವಿಪರೀತ ಗಾಬರಿ ಆತ್. ಅವಳ್ನ ಎತ್ತಿಕಂಡ್ ಹೊರಗೆ ಸಾಗಿಸಿತ್. ಕಾರ್ನ ಹಿಂಬದಿನ ಸೀಟಿಲಿ ಮಲ್ಗಿಸಿ ಹಣತಾಕೆ ಒಳಗೆ ಓಡ್ತ್. ಒದ್ದ ರಬಸಕ್ಕೆ ಆಯತಪ್ಪಿ ಬಿದ್ದಿದ್ದ ದಡೂತಿ ಅವ್ವ ಪಕ್ಕನೆ ಎದ್ರಿಕಾಗದೆ ಒದ್ದಾಡ್‌ತಿತ್ತ್. ಮಂಜನ ಓಡಾಟ ಕಂಡ್ ಅವ್ವ್ ಬೊಬ್ಬೆ ಹಾಕಿತ್.

"ನಿನ್ನ ಹೆತ್ತ ಅವ್ವ ಹೀಂಗೆ ಒದ್ದಾಡ್‌ತ್ತಿದ್ದರೆ ನೀನ್ ಕಟ್ಟಿಕಂಡವ್‌ಳು ನಿಂಗೆ ಹೆಚ್ಚಾಗಿ ಬುಟ್ಟತೋ? ಎದ್ದ್ ಬಂದ್ ಮಾಡ್ನೆ ಮದ್ದ್ ನನ್ನ ಮಗ್ನೆ"

ಅಂವ ಅವ್ವನ ಮಾತ್‌ನ ಕೆಬಿಗೆ ಹಾಕಿಕಣದೆ ಹಣ ಜೇಬಿಗೆ ತುರ್ಕಿಸಿ ಹೊರ್ಕಡೆ ಬಾತ್. ಕಾರ್ ಸ್ಟಾರ್ಟ್ ಮಾಡಿ ಶರವೇಗಲಿ ಸಿಟಿ ಕಡೆ ಓಡ್ಸಿತ್. ಅಮ್ಮಣ್ಣಿ ಹಿಂದೆನ ಸೀಟಿಲಿ ಮಲಗಿದ್ದವ್‌ಳು ಕಣ್ಣ್ ಮುಚ್ಚಿಕಂಡ್ ನರಳ್‌ತಿತ್.

———***———

## ೧೧. ಯಾವ ಮೋಹನ ಮುರಳಿ?

ದಾರಿಲಿ ರಕ್ತಸ್ರಾವ ಸುರುವಾತ್. ಆಸ್ಪತ್ರೆಗೆ ಬಂದ ಹಂಞ ಹೊತ್ತುಲಿ ಅಬಾರ್ಶನ್ ಆತ್. ಅವ್ಳ ಅಟೆಂಡ್ ಮಾಡ್ದ ಲೇಡಿ ಡಾಕ್ಟರ್ ಗಂಡಂಗೆ ಎಚ್ಚರಿಕೆ ಹೇಳ್ತ್.

"ತುಂಬಾ ಏಟ್ ಬಿದ್ದುಟು. ಯೂಟ್‌ರಸ್ಸ್ ಸರಿಯಾಕೆ ಹಂಞ ಸಮಯ ಬೇಕು. ಅಲ್ಲಿವರೇಗೆ ನೀವು ಕಾಪ್ಯುಲೇಶನ್ ಮಾಡುವ ಹಾಂಗಿಲ್ಲೆ."

"ಡಾಕ್ಟ್ರೇ, ನಿಮ್ಮಂದ ನಂಗೊಂದು ಉಪಕಾರ ಆಕು. ಇದ್ ಕೊಲೆ ಪ್ರಯತ್ನಕ್ಕೆ ನಡ್ದಕೇಸ್. ತಕ್ಷಣ ನೀವು ಪೋಲಿಸರ್ನ ಕರ್‍ಲೋಕು. ಕೇಸ್ ರಿಜಿಸ್ಟರ್ ಮಾಡೋಕಾದೆ." ಡಾಕ್ಟ್ರು ಅಮ್ಮಣ್ಣಿನ ಪ್ರಶ್ನಾರ್ತಕವಾಗಿ ನೋಡ್ದೋ.

"ಇದ್ ನೀವ್ ಬಿದ್ದ್ ಆದದ್‌ಂತ ಹೇಳ್ದೊಲ್ಲ. ಮತ್ತೆ ಕೊಲೆ ಯತ್ನದ ಕೇಸ್ ಹೇಂಗಾದೆ?"

ಇವರ ಅಮ್ಮ ನನ್ನ ಹೊಟ್ಟೆಗೆ ಮೆಟ್ಟಿದ ಕಾರಣ ನಾನ್ ಬಿದ್ದದ್ದ್ ಹೌದು. ಅಬಾರ್ಶನ್ನ್ ಆದ್ದ್ ಅದರ್‌ಂದ ಅಲ್ಲ. ಇವರ ಅಮ್ಮ ಒದ್ದದರ್‌ಂದ. ಅಲ್ಲಿವರೇಗೂ ಭ್ರೂಣಕ್ಕೆ ಜೀವ ಇತ್ತಲ್ಲ ಡಾಕ್ಟ್ರ? ಅದರ ಜೀವ ಹೋಗುಟು. ಅವರ ಅಮ್ಮ ಕೊಲೆ ಮಾಡ್ಯೊಳೊ. ಇದ್ ಕೇಸಾದೆ. ಬಸುರಿ ಹೆಂಗ್ಸನ ಹೊಟ್ಟೆ ತುಳಿಯುವ ಉದ್ದೇಶ ಕೊಲೆ ಮಾಡ್ದು. ನಾನ್ ಇನ್ನೂ ಬದ್ಕಿಯೊಳೆ. ಆದರ್‌ಂದ ಅಟೆಂಪ್ಟು ಮರ್ಡರ್. ಅದ್ ಇನ್ನೊಂದು ಕೇಸ್. ನಾನಿದನ್ನ ಪೋಲಿಸ್‌ನವುಕೆ ಹೇಳೋಕು ಡಾಕ್ಟ್ರೆ."

ಅಮ್ಮಣ್ಣಿಗ ಗಂಡ ಅಂಗಲಾಚಿತ್.

"ಅಮ್ಮ ದೊಡ್ಡ ತಪ್ಪು ಮಾಡ್ದ್ ನಿಜ. ಆದರೆ ಅದಿಕ್ಕೆ ಇನ್ನ್ ಕೇಸ್ ಮಾಡಿ ಪ್ರಯೋಜನ ಏನ್? ಸತ್ತ ಭ್ರೂಣಕ್ಕೆ ಮತ್ತೆ ಜೀವ ಬಂದದೆನೋ? ನೀವಾದ್ರ್ ಸ್ವಲ್ಪ ಹೇಳಿ ಡಾಕ್ಟ್ರೆ."

"ನೀವ್ ಹೇಳಿಕೆ ಮುಂದೆ ನಾನ್ ಹೇಳೊದರ್ನ ಕೇಳಿ ಡಾಕ್ಟ್ರೆ. ನಿನ್ನೆ ಇಲ್ಲಿ ಸ್ಕ್ಯಾನಿಂಗ್ ಮಾಡ್ಸಿದ ಮೇಲೆ ಅದ್ ಹೆಣ್ಣು ಕೂಸೂಂತ ಗೊತ್ತಾದ ಮೇಲೆ ಅಬಾರ್ಶನ್ ಮಾಡ್ಸಿಕೆ ಇವೆಲ್ಲಾ ಒಂದೇ ಸಮನೆ ಹಟ ಹಿಡ್ದೋ ಡಾಕ್ಟ್ರೆ. ರಕ್ತ ಹಂಚಿಕಂಡ್ ಬೆಳೆಯುವ ಕೂಸುನ ಕೊಲ್ಲಿಕೆ ಯಾವ ತಾಯಿಗೆ ಮನ್ಸ್ ಬಾದು ಹೇಳಿ. ನಾನ್ ಒಪ್ಪಿತ್ಲೆ. ಅದಕ್ಕೆ ಅವರ ಅಮ್ಮ ಹೊಟ್ಟೆಗೆ ಒದ್ದು ಬುಟ್ಟೊ. ಈಗ ನೋಡಿ ಹೀಂಗಾಗುಟು. ಮೂರು ಹೆತ್ತ ಮಾರಾಯ್ತಿ ಗಬ್ಬದ ಸೊಸೆನ ಹೊಟ್ಟೆಗೆ ಮೆಟ್ಟಿದ್‌ಂತೇಳಿರೆ ಅವ್ಳು

ಒಬ್ಳು ಹೆಣ್ಣಾ? ಇನ್ನೊಮ್ಮೆ ನಾನ್ ಬಸ್‌ರಿಯಾದರೆ ಅದೂ ಹೆಣ್ಣಾಗಿ ಬುಟ್ರೆ ಮತ್ತೆ ನಾನ್ ಇದೇ ಶಿಕ್ಷೆ ಅನುಬವಿಸಕಾದೆ. ಅತ್ತೆ ಇನ್ನೊಂದು ಬ್ರೂಣ ಹತ್ಯೆಗೆ ಕಾರಣರಾದವೆ. ನಾನ್ ಹೆಣ್ಣ್ ಹೆತ್ತರೆ ಇವ್ಕೆ ಇನ್ನೊಂದು ಮೊದ್ವೆ ಮಾಡ್ಸ್‌ವೆಗಡ. ಹೇಳಿ ಡಾಕ್ಟ್ರೆ, ಆ ನರಕಲಿ ಯಾವ ಹೆಣ್ಣ್ ಬದ್ಕುದು? ದಯವಿಟ್ಟು ಪೋಲಿಸರ್ನ ಕರ್ಸಿ. ಇಲ್ಲದಿದ್ದರೆ ನೀವೂ ಈ ಪಾತಕಲಿ ಶಾಮೀಲಾಗೊಳರಿ ಅಂತ ತಿಳಿಯೊಕಾದೆ."

ಡಾಕ್ಟ್ರ ಸ್ಟೇಶನ್ನಿಗೆ ಪೋನ್ ಮಾಡ್ದೋ. ಎಸ್ಸೈ ಬಂದ್ ಅಮ್ಮಣ್ಣಿನ ಹೇಳಿಕೆ ದಾಖಲಿಸಿ ಸೈನ್ ತಕೊಂಡ್ರೊ. ಡಾಕ್ಟ್ರಂದ ಮೆಡಿಕಲ್ ರಿಪೋರ್ಟ್ ತಕಂಡ್ "ನಡೀ ಮನೆಗೆ ನಿನ್ನ ಹೆತ್ತ ಆ ಮಹಾತಾಯಿನ ತೋರ್ಸು." ಅಂತ ಗಂಡನ ಮುಂದೆಗೆ ದೂಡ್ತ್.

"ಸರ್ ಇವು ನಿನ್ನೆ ನನ್ನ ಅಬಾರ್ಶನ್ ಮಾಡೋಕೂಂತ ಒತ್ತಾಯಿಸ್ತೊಳೊ. ಗಂಡನ ಹಾಂಗೆ ಇವು ನಡ್ಕಂಡಿದ್ದರೆ ಅತ್ತೆಗೆ ಅಂತ ಕೆಟ್ಟ ದೈರ್ಯ ಬಾತಿತ್ಲೆ. ಅಪರಾದಕ್ಕೆ ಇವೂ ಕೂಡ ಕುಮ್ಮಕ್ಕ್ ಕೊಟ್ಟಂತಾಗುಟು. ಇವರ್ನೂ ನೀವು ವಿಚಾರಿಸೋಕು."

"ಬೋಳೀ ಮಂಜ ನೋಡಿಕೆ ಎಷ್ಟ್ ಸೈಲಂಟಾಗುಟ್ಟು. ಹತ್ತ್ ಜೀಪು. ನಿಂಗೆ ಹಿಡ್ದ ಗ್ರಾಚಾರ ಎಲ್ಲಾ ಬಿಡಿಸ್ನೆ."

"ಸರ್, ಒಂದ್ನಿಮಿಷ. ಅವರ್ಲಿ ನನ್ನ ಕಾರ್ನ ಕೀ ಉಟ್ಟು. ಅದನ್ನ ಕೊಡ್ಸಿ ಸಾರ್. ನನ್ನಲ್ಲೀಗ ಚಿಕ್ಕಾಸ್ ಕೂಡ ಇಲ್ಲೆ. ಆಸ್ಪತ್ರೆ ಬಿಲ್ಲ್ ಅವೇ ಕೊಡೋಕು. ನಾನಿನ್ನ್ ಅವರ ಮನೆಗೆ ಹೋದುಲೆ. ಹೆಣ್ಣಿಗೆ ಗಂಡನ ಮನೆ ಸ್ವರ್ಗ ಆಕು. ನನ್ನ ಪಾಲಿಗೆ ಅದ್ ನರ್ಕ ಆಗೋತ್. ಗರ್ಬಕೋಶಕ್ಕೆ ಎಂತಾ ಏಟ್ ಬಿದ್ದುಟುಂತೇಳಿರೆ ನಾನಿನ್ನು ಎಂದಿಗೂ ತಾಯಿ ಆಕಿಲ್ಲೆ ಸಾರ್."

ಅಮ್ಮಣ್ಣಿ ಬಿಕ್ಕಿತ್. ಎಸ್ಸೈ ಗಂಡನ ಕಪಾಲಕ್ಕೆ ಪಟಾರ್‌ಂತ ಒಂದ್ ಬಿಗ್ತ್. ಅವನ ಜೇಬಿಗೆ ಕೈ ಹಾಕಿ ಕಾರಿನ ಕೀ ತೆಗ್ದ್ ಅಮ್ಮಣ್ಣಿಗೆ ಕೊಟ್ಟತ್.

"ಬಿಲ್ಲಿಗಿಂತ ಜಾಸ್ತಿ ಇರುದರ್ನ ಆ ಹೆಣ್ಣು ಮಗೂಗೆ ಕೊಡಿ. ಈ ಬೋಳೀಮಂಜಗೆ ಮಾಡ್ನೆ ಹಬ್ಬ."

ಗಂಡನ ಕಾಲರಿಗೆ ಕೈ ಹಾಕಿ ಎಸ್ಸೈ ಅವ್ನ ಎಳ್ಕಂಡೇ ಹೋತ್. ಕರ್ಗುವ ಮನಸ್ನ ಗಟ್ಟಿ ಮಾಡಿಕಣಿಕೆ ಅಮ್ಮಣ್ಣಿ ಕಣ್ಣ್ ಮುಚ್ಚಿಕಣ್ತ್. ಪೋಲೀಸ್ ಜೀಪು ಹೋದದ್ದು ಕಂಡಾದ ಮೇಲೆ ಡಾಕ್ಟ್ರಲ್ಲಿ ಕೇಳ್ತ್.

“ಡಾಕ್ಟ್ರೇ, ನಂಗೆ ಒಂದು ನೈಟಿ, ಫ್ರೀ ಸೈಸ್‌ನ ಎರ್ಡ್ ಚೂಡಿದಾರ ಮತ್ತೆ ಎರ್ಡ್ ಇನ್ನರ್ ವೇರ್, ಮತ್ತೊಂದು ಪ್ಯಾಡ್ ತರ್ಸಿ ಕೊಟ್ರೆ ತುಂಬಾ ಉಪಕಾರ ಆದೆ. ನಾನ್ ಇಲ್ಲಿಂದ ತವ್ರು ಮನೆಗೆ ಹೋನೆ. ಮತ್ತೆ ಗಂಡನ ಮನೆಗೆ ಕಾಲಿಡುದ್ಲೆ.

ನಿಮ್ಮ ಯುಟ್ರಸ್‌ಗೆ ಹಂಞ ಪೆಟ್ಟಾಗಿರುದು ನಿಜ. ಆದರೆ ಹೆದ್ರಿಕಣುವಂತದ್ದೇನಿಲ್ಲೆ. ನೀವು ಮತ್ತೆ ಅಮ್ಮ ಆಕ್. ತಾಯ್ತನ ಒಂದು ದಿವ್ಯ ಅನುಬವ. ಅದರ್‌ಂದ ವಂಚಿತರಾಗದಿರಿ.”

“ಮುಂದೆ ಇವಂದ ಬಿಡುಗಡೆಯಾಕು ಡಾಕ್ಟ್ರೆ. ಅಲ್ಲಿಗೆ ತನ್ನ ತಾಯ್ತನದ ಬಯಕೆಗೂ ಪ್ರಸವ ಆದಂಗೆನೆ. ನಾನ್ ಮದುವೆಯಾಗದಿದ್ದರೇನೇ ಸುಖವಾಗಿರ್‌ತ್ತಿದ್ದೆ. ಈ ಗಂಡಂತೇಳಂವ ಉಟ್ಟಲ್ಲಾ? ಒಂದೇ ಒಂದು ದಿನ ಸಿಹಿ ಮಾತ್ ಆಡ್ತ್‌ಲೆ. ಕೂಡಿಕೆ ಮುಂದೆ ಒಂದು ಉತ್ತೇಜಕದ ಮಾತ್ ಕೂಡ ಇಲ್ಲೆ. ಕೆಲ್ಸ ಮಾಡಿ ದಣ್ದ್ ಕತ್ತಲೆಗೆ ಮಲ್ಗಿಕಂಡರೆ ಇಂವ ದೀಪ ಕೆಡ್ಸಿ ಅದೊಂದು ನಿತ್ಯ ಮಾಡಿಯೇ ಮಾಡಕಾದ ಡ್ಯೂಟಿಂತೇಳುವ ಹಾಂಗೆ ನನ್ನ ಮೇಲೇರಿ ಬರಂವ. ನನ್ನ ಶರೀರದ ಉಬ್ಬುತಗ್ಗ್‌ಗಳ್ನ ಅಂವ ಬೆಳ್ಕ್‌ಲಿ ನೋಡೋಕು, ಅವುಗಳೊಟ್ಟಿಗೆ ಚೆಲ್ಲಾಟ ಆಡೋಕು, ನನ್ನ ಹೆಣ್ತನನ ಮೆಚ್ಚಿಕಣಕೂಂತ ಎಷ್ಟೋ ಸರ್ತಿ ನಂಗೆ ಅನ್ನಿಸಿಟು. ಏನ್ ಮಾತಾಡ್ರೆ ಎಲ್ಲಿ ತಪ್ಪಾದೆನೋಂತ ಮೌನ ಆಗಿ ಅವನ ಹಿಂಸೆನ ಸಹಿಸಿಯೊಳೆ. ಅವಂದಾಗಿ ನಂಗೆ ಸೆಕ್ಸ್‌ಂತೇಳುವಂತದ್ ಗೊತ್ತಾಗದ ರಿಚುವಲ್ ಆಗಿ ಹೋತು.”

ಅಮ್ಮಣ್ಣಿ ಮತ್ತೆ ಬಿಕ್ಕಿತ್. ಒಂದು ಲೋಟ ನೀರ್ ಕುಡ್ದ್ ಸುದಾರಿಸಿಕಣ್ತ್.

“ಗಂಡ್ ಹೆಣ್ಣ್ ಮೆಚ್ಚಿ ಒಂದಾದರೆ ಕಾವ್ಯ ಅರ್ಳಿದೆ ಗಡ, ಕಾದಂಬರಿ ಮೂಡ್ದೆಗಡ. ಹೆಣ್ಣ್ ಗಂಡ್‌ಂದ ಸ್ಫೂರ್ತಿ ಪಡೆಕು, ಗಂಡಿಗೆ ಸ್ಫೂರ್ತಿಯಾಕು ಹೆಣ್ಣ್. ಹೆಣ್ಣ್‌ನ ಸ್ಫೂರ್ತಿ ಸೆಲೆಯಾಗಿ ಮಾಡಿಕಂಬವನೇ ನಿಜವಾದ ಗಂಡ್. ಅವನೋ ಬಾವನೆಗಳಿಲ್ಲದ ಮೃಗ. ಅವನ ಗಂಡಂತ ನನ್ನ ದೇಹನೂ ಒಪ್ಪಿಕಣ್‌ತ್ತಿತ್ಲೆ. ಸಮಾಜದ ದೃಷ್ಟಿಲಿ ಅವ ತಾಳಿ ಕಟ್ಟಿದ ಗಂಡ! ಇಷ್ಟಕ್ಕೇ ಆದ ಸ್ವಪ್ನ ಮುಗ್ದ್ ಹೋತಲ್ಲಾ? ನಂಗೆ ಡ್ರೈವಿಂಗ್ ಲಾಯಿಕ್ಕಾಗಿ ಗೊತ್ತುಟು ಡಾಕ್ಟ್ರೆ. ಸೀದಾ ತವ್ರು ಮನೆಗೇ ಹೋನೆ. ಅಲ್ಲಿ ಮಾತ್ರ ನಾನ್ ನನ್ನ ಬಾವನೆಗಳೊಟ್ಟಿಗೆ ಬದ್ಕಿಕೆ ಸಾದ್ಯ ಆದು.”

ಅವ್ಳ್ ಹೇಳ್ದ ವಸ್ತುಗ ಬಾತ್. ಅವ್ಳ್ ಸೀರೆ ಬದಲ್ಸಿ ಚೂಡಿದಾರ ಹಾಕಿಕಣ್ತ್. ಕಾರಿಗೆ ಹತ್ತಿಕೆ ಮುಂದೆ ಡಾಕ್ಟರ್ ಹೇಳ್ದೊ,“ನೀವ್ಗಿನ್ನೂ ತೀರ ಸಣ್ಣ ವಯಸ್ಸ್. ನಿಮ್ಮ ಬಾವನೆಗಳನ್ನ ಗೌರವಿಸುವ ಗಂಡನ ಹುಡ್ಕಿಕಣಿ. ಸುಮ್ಮನೆ ಬದ್ಕ್‌ನ ನೀರಸ ಮಾಡಿಕಣದಿರಿ. ಎಲ್ಲಾ ಗಂಡ್ಸರ್ ಒಂದೇ ರೀತೀಂತ ತಿಳ್ಕಂಬಡಿ.”

ಅಮ್ಮಣ್ಣಿ ನೆಗಾಡಿ ಡಾಕ್ಟ್ರ ಕೈ ಕುಲ್ಕಿ ಕಾರ್ ಏರ್ತ್. ಕಜೆ ಮನೆಗೆ ಹೋಗಿ ಚಿಕ್ಕಮ್ಮಂಗೆ ಎಲ್ಲಾ ವಿಚಾರನೂ ಹೇಳ್ತ್,

"ನೀನ್ ಮಾಡ್ದ್ ಸರಿಯಾದ್ದೆ ಅಮ್ಮಣ್ಣಿ. ಅಂವ ಆಗಿ ಮೆಚ್ಚಿ ಆದ ಮದುವೆಯಿದ್. ಕುಲಾಚಾರ ಪ್ರಕಾರ ಎಲ್ಲಾ ಹಿರಿಯರ್ ಸೇರಿ ಮಾಡ್ಸಿದ ಮದುವೆ ಹೀಂಗಾತ್. ಬಾಳಕ್ಕ ನೋಡು. ಜಾತಿ, ಕುಲ, ಗೋತ್ರ, ಜಾತಕ, ಮುಹೂರ್ತ, ಪಂಚಾಂಗ, ನಕ್ಷತ್ರ ಯಾವುದನ್ನೂ ನೋಡ್ತ್‌ಲೆ. ಎಷ್ಟು ಸುಖವಾಗುಟ್ಟು. ಇನ್ನು ಯೋಚಿಸಿ ಪಲ ಇಲ್ಲೆ. ಅಲ್ಲಿನ ಋಣ ತೀರ್ತ್. ಮುಂದೇನ್ ಮಾಡಿಯಾ?"

ಅಮ್ಮಣ್ಣಿಗೆ ಕಾನೂನೂ ಪ್ರಕಾರ ಬಿಡುಗಡೆ ಸಿಕ್ಕಿತ್. ಪರಿಹಾರಂತೇಳಿ ಮೂರು ಲಕ್ಷ ಕೈ ಸೇರ್ತ್. ನ್ಯಾಯಾಲಯ ಅವ್ಳ ಅತ್ತೆಗೆ ಮೂರು ವರ್ಷಗಳ ಕಠಿಣ ಶಿಕ್ಷೆ ಕೊಟ್ಟಿತ್. ಗಂಡಂಗೆ ಐವತ್ತು ಸಾವಿರ ದಂಡ ಮತ್ತೆ ಒಂದು ವರ್ಷದ ಸಾದಾ ಶಿಕ್ಷೆ ಆತ್.

ಪರಿಹಾರ ರೂಪಲಿ ಸಿಕ್ಕಿದ ಮೂರು ಲಕ್ಷಕ್ಕೆ ತನ್ನ ಬೇಂಕ್ ಖಾತೆಲಿದ್ದ ಎರ್ಡ್ ಲಕ್ಷ ಸೇರ್ಸಿ ಮನೆ ಹತ್ರ ಪಾಲ ಇದ್ದಲ್ಲಿ ಅವ್ಳು ತೂಗುಸೇತುವೆ ನಿರ್ಮಿಸಿತ್. ದೊಡ್ಡೇರಿಗೆ ತೂಗುಸೇತುವೆ ನಿರ್ಮಿಸಿದ ಇತಿಹಾಸದ ಮಾಸ್ಟ್ರನ ಉದ್ಘಾಟನೆಗೆ ಕರ್ದಿತ್. ಮುಖ್ಯ ಅತಿತಿಯಾಗಿ ಮಂಜುನಾಥ ಬಾಗವತರ್ ಬಂದಿದ್ದೊ. ತಪಸ್ವಿನಿಗೆ ಮಹಿಳೆಯೊಬ್ಬಳು ಒಬ್ಬಂಟಿಯಾಗಿ ಸ್ವಂತ ದುಡ್ಡಿಲಿ ತೂಗುಸೇತುವೆ ನಿರ್ಮಿಸಿದ್ ಪತ್ರಿಕೆಗಳಲ್ಲಿ ದೊಡ್ಡ ಸುದ್ದಿ ಆತ್. ಹೆದ್ದಾರಿಲಿ ಹೋಗೊವು ಒಂದು ಕ್ಷಣ ಅಲ್ಲಿ ವಾಹನ ನಿಲ್ಸಿ ತೂಗುಸೇತುವೆ ಹತ್ತಿ ಕುಸಿಪಟ್ಟ್ ಮುಂದೆ ಸಾಗ್‌ತಿದ್ದೊ. ತಪಸ್ವಿನಿನ ನಡೂಲಿರುವ ಅವ್ಳ ಇಷ್ಟದ ಬಂಡೆ ಒಂದಿತ್ತ್. ಅವ್ಳ ಅಜ್ಜ ಗಾಳ ಹಾಕಿಕೆ ಆ ಬಂಡೆ ಮೇಲೇನೇ ಕುದ್ರ್‌ತಿದ್ದದ್. ಅದೇ ಬಂಡೆ ಈಗ ಒಂದು ಪಿಕ್ನಿಕ್ಕ್ ತಾಣ ಆತ್.

ಉದ್ಘಾಟನೆಗೆ ಬಂದಿದ್ದ ಮುಂಜುನಾಥ ಬಾಗವತರ್ ಅಮ್ಮಣ್ಣಿಗೆ ಒಂದು ಸಲಹೆ ಕೊಟ್ಟೊ,

"ನೀನ್ ಇನ್ನ್ ಹೇಂಗೂ ಕೆಲಸಕ್ಕೆ ಹೋದುಲ್ಲೆಂತ ಹೇಳ್ತಾ ಒಳ. ಮುಂದೆ ನಿನ್ನ ಮನೆನೇ ಒಂದು ಕಲಾಶಾಲೆ ಮಾಡಿರೆ ಹೇಂಗೆ? ಪೇಪರ್ಲಿ ಒಂದು ಜಾಹಿರಾತ್ ಕೊಟ್ಟುಬುಡು. ಯಾರ್ ಕಲಿಯಕೆ ಬಂದವೆನೋ ಅವ್ಕೆ ನಿಂಗೆ ಗೊತ್ತಿರುದನ್ನ ವಂಚನೆ ಇಲ್ಲದೆ ಹೇಳಿಕೊಡು. ಅಗತ್ಯ ಬಾಕನ ಮಾಲಿಂಗನ, ಸತ್ಯಣ್ಣನ ಕರ್ಸಿಕ. ಸಾಂಪ್ರದಾಯಕ ವಿದ್ಯೆಗಳಲ್ಲಿನ ಗುರು-ಶಿಷ್ಯ ಸಂಬಂದ ಉಟ್ಟಲ್ಲಾ, ಅದ್ ಮನಸ್ಸಿಗೆ ತುಂಬಾ ನೆಮ್ಮದಿ ಕೊಟ್ಟದೆ."

ಬ್ರಿಟಿಷರ ಕಾಲಲಿ ಕಂದಾಯನ ಹಣದ ರೂಪಲಿ ಕೊಡೋಕುಂತ ಕಾನೂನು ಮಾಡ್ದೊ. ಉಪ್ಪಿಗೆ, ಹೊಸೆಪ್ಪಿಗೆ ತೆರಿಗೆ ಹಾಕಿದೊ. ಫ್ರೆಂಚ್ ಕ್ರಾಂತಿನ ಹಾಂಗೆ ಜನ ಇಲ್ಲೂ ದಂಗೆಯೆದ್ದೊ.

ಸಮಾರಂಬ ಮುಗ್ಸಿ ಎಲ್ಲವೂ ಹೊರ್ಟ್ ಹೋದೋ. ಇತಿಹಾಸದ ಮಾಸ್ಟ್ರ ಇನ್ನೇನ್ ಹೊರ್ಡಕುಂತೇಳಿಕಾಕನ ಅಮ್ಮಣ್ಣಿ ಕೈ ಸನ್ನೆ ಮಾಡ್ತ್.

"ಸರ್, ನಿಮ್ಮ ದಾರಿಲೇ ನಡ್ದಳೆ. ಕಡೆಗೂ ಒಂದು ಸಣ್ಣ ಸೇತುವೆನ ನಿರ್ಮಿಸಿಯೇ ಬುಟ್ಟೆ."

ಮಾಸ್ಟ್ರ ತಣ್ಣಂಗೆ ನಗಾಡಿ ತಲೆತೂಗಿದೊ.

"ಶಾಬಾಸ್ ಗೂಡೆ, ನಾನ್ ಯಾರ್ಯಾರ್ನೋ ಕಾಡಿ, ಬೇಡಿ ಸೇತುವೆ ಮಾಡಕಾತ್. ನೀನ್ ಸ್ವಂತಾಗಿ ಸಾದಿಸಿ ತೋರ್ಸಿದೆ. ಗುರುನ ಮೀರ್ಸಿದವಳ್ ನೀನ್. ನಿನ್ನಂತವಳ್ ದೇಶದ ಅಲಲ್ಲಿ ಹುಟ್ಟಿ ಬಂದರೆ ಈ ದೇಶ ಉದ್ದಾರಾದುದರ್ಲಿ ಅನುಮಾನನೇ ಇಲ್ಲೆ."

"ಸಾಕ್ ಸರ್, ಹೆಚ್ಚಿಗೆ ಹೇಳ್ಬಡಿ. ಜಂಬ ಬಂದ್ ಬುಟ್ಟದೆ. ಎಳೆತನಂದ ಒಂದು ಆಸೆ ಇಸಿಕಂಡಳೆ. ಇನ್ನೂ ಅದರ್ನ ಪೂರೈಸಿಕೆ ಆತ್ಲೆ. ತಪಸ್ವಿನಿ ಮೂಲ ನೋಡ್ದು. ಓ ಅಲ್ಲಿ ಕಂಡದೆ ನೋಡಿ ಬೆಟ್ಟ ಸಾಲ್‌ಗ? ಅಲ್ಲೆಲ್ಲೋ ತಪಸ್ವಿನಿನ ಮೂಲ ಉಟ್ಟು. ಅಲ್ಲಿನೇ ತಪಸ್ವಿನಿ ಮತ್ತು ಅವ್ಳ ಗಂಡ ತಪಸ್ ಮಾಡ್ತಿದ್ದ ಗುಹೆಗ ಉಟ್ಟುಗಡ. ಅಜ್ಜ ಹೇಳ್ತಿದ್ದದ್ದ್ ಅದನ್ನ್. ಆ ದಿನಗಳ್‌ಂದ ಹುಟ್ಟಿಕಂಡ ಆಸೆ ಅದ್. ನೀವು ಜೊತೆಗಿದ್ದರೆ ನಂಗೆ ದೈರ್ಯ. ಯಾಗ ಪೋಯಿ ಸಾರ್?"

"ನಂಗೆ ಹಂಞ ಟೈಮು ಕೊಡು. ನಾನೊಂದು ಸಂಶೋದನಾ ಕೇಂದ್ರ ಸುರು ಮಾಡಿಯೊಳೆ. ನೀನ್ ಹೇಳುತ್ತಿರುವ ಬೆಟ್ಟ ಸಾಲ್‌ಗ ಚಾರಿತ್ರಿಕ ಮಹತ್ವ ಪಡ್ದುಟು. ನನ್ನಲ್ಲಿ ಅದರ ವಿವರ, ಅಲ್ಲಿನ ನಕ್ಷೆ ಎಲ್ಲಾ ಉಟ್ಟು, ನನ್ನ ದಾಕಲೆಗಳ್ನ ನೋಡಿ, ತಿಳ್ಕಂಡ್ ನಿಂಗೆ ಹೇಳ್ನೆ. ಉತ್ಕನನಂತೇಳಿ ಕಾಡ್ ಮೇಡ್ ಅಲೆಕಾಕನ ಜೀವ ರಕ್ಷಣೆಗಾಗಿ ಪಿಸ್ತೂಲಿಗೆ ಅರ್ಜಿ ಕೊಟ್ಟಿದ್ದೆ. ಜೊತೆಗೆ ಬೈನಾಕುಲರ್ ಮತ್ತು ಕ್ಯಾಮರಾ ಬೇಕು. ನಿನ್ನ ತಯಾರಿ ನೀನ್ ಮಾಡಿಕ. ಮತ್ತೆ ಒಂದಿನ ಪೋಯಿ."

ಹಾಂಗೆ ಹೇಳಿ ಹೋದ ಮಾಸ್ಟ್ರ ಒಂದು ವಾರ ಕಳ್ದ್ ಬಂದೊ.

"ಆ ಬೆಟ್ಟಗಳ ತಪ್ಪಲ್‌ಲಿ ಗುಹೆಗಳೊಳಲ್ಲ? ಅಲ್ಲಿ ಆದಿಶಿಲಾಯುಗದ ಜನ ವಾಸ ಮಾಡ್‌ತಿದ್ದೊ. ಈ ಊರಿನ ಚರಿತ್ರೆ ಅಷ್ಟ್ ಹಿಂದೆಗೆ ಹೋದೆ. 1857ರಲ್ಲಿ ನಮ್ಮ ದೇಶದ ಸುರೂನ ಸ್ವಾತಂತ್ಯ ಸಂಗ್ರಾಮ ನಡ್ತ್‌ಲ್ಲ? ಅದಕ್ಕೂ ಇಪ್ಪತ್ತು ವರ್ಷಗಳ ಹಿಂದೆ ಇಲ್ಲೊಂದು ದೊಡ್ಡ ಬಂಡಾಯ ನಡ್ತ್. ಈ ನಾಡ್‌ನ, ಒಬ್ಬ ರಾಜ ಆಳ್ತಿತ್ತ್. ಹೆಚ್ಚಿನ ಎಲ್ಲಾ ರಾಜರಂಗೆ ಅವನೂ ಸ್ತ್ರೀ ಲಂಪಟನಾಗಿತ್ತ್. ಪ್ರಜೆಗಳ ಪ್ರಾಣ ತಿಂಬವ ಅಂವ. ಬ್ರಿಟಿಷರ್ ಅವನ ಗದ್ದುಗೆಂದ ಇಳ್ಸಿ ಅವೇ ಆಡಳಿತ ಸುರು ಮಾಡ್ದೊ.

ಚಿಕ್ಕಮ್ಮ ಚಾ ತಂದ್‌ಕೊಟ್ಟತ್. ಅದ್ ಮಾಸ್ತ್ರಲ್ಲಿ ಹೊಸ ಉತ್ಸಾಹ ಮೂಡ್ಸಿತ್.

"ಹೋರಾಟಕ್ಕೆ ಒಬ್ಬ ನಾಯಕ ಬೇಕಲ್ಲಾ?"

"ನಾಯಕರೇನೋ ಬೇಕಾದಷ್ಟ್ ಇದ್ದೊ. ಯಾರ್ನ ಮಾಡಿರೂ ಒಂದಲ್ಲ ಒಂದು ಜಾತಿಗೆ ಅಸಮಾದಾನ ಆದೆ. ಅದಕ್ಕೆ ಅಪರಂಪಾರ ಎಂಬ ಸನ್ಯಾಸಿನ ನಾಯಕನನ್ನಾಗಿ ಮಾಡಿಕಂಡೋ. ಸಂನ್ಯಾಸಿಗಳಿಗೆ ಜಾತಿನ ಸೋಂಕಿಲ್ಲೆಲ್ಲಾ? ಹೋರಾಟೇನೋ ನಡ್ತ್. ಆದರೆ ಅವು ಗ್ರಹಿಸಿದ ಹಾಂಗೆ ಆತ್ಲೆ. ಆ ಮೇಲೆ ಶನಿವಾರಸಂತೆ ಕಡೆನ ಪುಟ್ಟ ಬಸವ ಎಂಬ ರೈತಂಗೆ ಸನ್ಯಾಸಿ ವೇಷ ಹಾಕ್ಸಿ ಕಲ್ಯಾಣಪ್ಪಂತ ಹೆಸ್ರ್ ಹಾಕಿ ಹೋರಾಟ ಮುಂದುವರ್ಸಿದೊ. ಇಲ್ಲಿಂದ ಬ್ರಿಟಿಷರ ಓಡ್ಸಿದೊ. ಆದರೆ ಮತ್ತೆ ಬ್ರಿಟಿಷರ ದೊಡ್ಡ ಸೇನೆ ಬಾತ್. ಬಂಡಾಯ ವಿಪಲ ಆತ್. ಸೆರೆ ಸಿಕ್ಕಿದವುಕೆಲ್ಲಾ ಗಲ್ಲ್ ಶಿಕ್ಷೆ ಆತ್. ಈ ಬಂಡಾಯನ ನಮ್ಮೂರ ಜನಗ "ಕಲ್ಯಾಣಪ್ಪನ ಕಾಟ್‌ಕಾಯಿ'ಂತ ನೆನಪಿಟ್ಟ್‌ಕೊಂಡೊಳೊ. ಆ ಹೋರಾಟ ಕಾಲಲಿ ಈ ಗುಹೆಗ ಬಂಡುಕೋರರಿಗೆ ಅಡಿಗಿಕಂಡ್ ಇರಿಕೆ ಒಳ್ಳ ಜಾಗ ಆಗಿತ್ತ್. ತಲೆ ತಪ್ಪಿಸಿಕಂಡ ಹೋರಾಟಗಾರರ್ ಅವರ ಕಡೆ ದಿನಗಳ್ನ ಅದೇ ಗುಹೆಗಲ್ಲಿ ಕಳ್ದೊ."

"ಬ್ರಿಟಿಷರ ವಿರುದ್ಧ ಮಾಡ್ದ ಹೋರಾಟಗೆಲ್ಲಾ ಯಾಕೆ ಸೋತತ್ ಸಾರ್?"

"ನಮ್ಮವರ್ಲಿ ಒಗ್ಗಟ್ಟ್ ಇಲ್ಲದ್ದೇ ಅದಕ್ಕೆ ಕಾರ್ಣ. ನಮ್ಮಲ್ಲಿ ಜಾತಿಗ ಸಾವಿರಾರ್ ಉಟ್ಟಲ್ಲಾ? ಒಟ್ಟಿಗೆ ಕುದ್ದು ಉಣದೊವು ಒಟ್ಟಿಗೆ ನಿಂತ್ ಹೋರಾಡಿಕೆ ಆದೆನೋ? ಈ ವಿಚಾರನೂ ಹಾಂಗೇ ಆತ್. ಕೆಲವು ಜನ ಬ್ರಿಟಿಷರ ಪರ ನಿಂತೊ. ಹೋರಾಟಗಾರರ್ ಅಡಿಂಗಿದ ಜಾಗಗಳ ತೋರ್ಸಿ ಅವರ ಹಿಡಿಯಕೆ ಸಹಾಯ ಮಾಡಿ ದಂಗೆ ಅಡ್ಗಿಸಿಕೆ ಸಹಾಯ ಮಾಡ್ದೊ. ಗ್ರೀಸ್ ದೇಶದ ಅಲೆಕ್ಸಾಂಡರ್ ಚಕ್ರವರ್ತಿ ನಮ್ಮ ದೇಶಕ್ಕೆ ದಂಡೆತ್ತಿ ಬಾಕಾಕನ ಅಂಬಿ ಎಂಬ ಅರಸ ಅವನ ಜತೆ ಸೇರಿ ಪೋರಸ್ಸ್ ಎಂಬ ಸ್ವಾಬಿಮಾನಿ ಅರಸನ ಸೋಲ್ಸಿಕೆ ಸಹಾಯ ಮಾಡ್ತ್. ಗೋರಿಮಹಮ್ಮದಂತೇಳಂವ ಎರಡ್ನೇ ಸರ್ತಿ ಬಾಕಾಕನ ಏನಾತ್? ಜಯಚಂದ ಎಂಬವ ಅವನ ಕಡೆ ಸೇರಿ ಪೃಥ್ವಿರಾಜನ ಸೋಲಿಗೆ ಕಾರಣಾತ್. ಅಷ್ಟೇ ಅಲ್ಲ. ಮುಸ್ಲಿಮ್ ರಾಜ್ಯ ಇಲ್ಲಿ ತಳ ಊರಿಕೆ ಅನುಕೂಲ ಆತ್. ಅದೇ ನಮ್ಮ ಪರಂಪರೆ. ಈಗಳೂ ಸಹ ನಮ್ಮ ದೇಶದ ಗುಟ್ಟುಗ ಪರರಾಷ್ಟ್ರಕ್ಕೆ ಸೋರಿ ಹೋಗುತ್ತಲೇ ಉಟ್ಟು."

ಅಮ್ಮಣ್ಣಿ ನಿಟ್ಟುಸಿರ್ ಬುಟ್ಟತ್.

"ನೀವ್ ಹೇಳ್ದ ಕಲ್ಯಾಣಪ್ಪನ ಕತೆನ ಅಜ್ಜ ಒಂದೆರಡ್ ಸರ್ತಿ ಹೇಳಿತ್ತ್. ಈಗ ಆ ಗುಹೆಗಲ್ಲಿ ಏನಿರ್ದು ಸರ್?"

“ಅದ್ ನಿನ್ನ ಅದೃಷ್ಟನ ಅವಲಂಬಿಸುಟ್ಟು. ಒಂದಷ್ಟ್ ತಲೆ ಬುರುಡೆಗ, ಹಳೆಕಾಲದ ಮಣ್ಣಿನ ಪಾತ್ರೆಗ ಸಾಮಾನ್ಯ ಇದ್ದದೆ. ಅದೃಷ್ಟ ಲಾಯಕ್ಕಿದ್ದರೆ ಚಿನ್ನಾಬರಣನೋ, ವಜ್ರನೋ ಸಿಕ್ಕುದು. ನಸೀಬು ತೀರಾ ಹಾಳಾದರೆ ಹಾವೋ, ಚೇಳೋ, ಹುಲಿನೋ, ಚಿರತೆನೋ ಎದ್‌ರಾಕೊ ಸಾಕ್.”

ಬೊಳ್ಪಿಗೆ ಬೇಗ ಎದ್ದ್ ಬೇಕಾದೆಲ್ಲ ಚೀಲಕ್ಕೆ ತುಂಬ್ಸಿ ಬೆನ್ನಿಗೇರ್ಸಿಕಂಡ್ ಅವು ಹೊರ್ಟ್ವೊ. ಚಿಕ್ಕಮ್ಮ ತಟ್ಟೆಯೊಂದು ತಂದ್ ಮಾಸ್ಟ್ರಿಗೆ ಕೊಟ್ಟ್ ಹೇಳ್ತ್.

“ನಿಮ್ಮ ದಾರಿಯುದ್ದಕ್ಕೂ ಉಂಬುಳುಗ ಇರ್ದು. ಈ ತಟ್ಟೆಲಿರುವ ಮಿಶ್ರಣನ ಪಾದಂದ ಮೊಣಕಾಲ್‌ವರೇಗೆ ಹಚ್ಚಿಕಣಿ. ನಶ್ಯಕ್ಕೆ ಕಾಯಿ ಎಣ್ಣೆ ಹಾಕಿ ಮಾಡ್ದ ಮಿಶ್ರಣ. ಎರ್ಡ್ ಕೋಲುಗಳ ಕೊಡಿಗೆ ಉಪ್ಪುನ ಬಟ್ಟೆಲಿ ಗಂಟ್‌ಕಟ್ಟಿ ಸಿಕ್ಕಿಸಿಯೊಳೆ. ಹಂಞ ನೀರ್ಲಿ ಚಂಡಿಮಾಡಿ ಉಂಬುಳುಗಳಿಗೆ ಮುಟ್ಟಿಸಿರೆ ಸಾಕ್. ಅವ್ಗಳ ಕತೆ ಮುಗ್ದೋ ಹೋದೆ. ಅಮ್ಮಣ್ಣಿ ನಿನ್ನ ಮೊಬೈಲ್ ತಕ. ಸಮಸ್ಯೆ ಏನಾದ್ರ್ ಬಂದರೆ ನಂಗೆ ತಿಳ್ಸ್. ಶಿವಪ್ಪ ಚಿಕ್ಕಪ್ಪಂಗೂ ತಿಳ್ಸಿಬುಡು.”

“ಅಮ್ಮ ನೀವಿದನ್ನ ಕೊಟ್ಟದ್ ನಿಜಕ್ಕೂ ಒಳ್ಳದಾತ್. ಉಪ್ಪಿನ ಪ್ರಯೋಗ ನಂಗೂ ಮಾಡಿ ಗೊತ್ತುಟು. ಆದ್ರೆ ಕಾಯೆಣ್ಣೆ ನಶ್ಯ ಮಿಶ್ರಣ ನಂಗೆ ಹೊಸ್ತು. ಅಮ್ಮಣ್ಣೀ, ಇನ್ನ್ ಮುಂದೆ ನೀನ್ ದುಡ್ಡಿಗೆ ಯೋಚನೆ ಮಾಡೋಕುಂತಿಲ್ಲೆ. ‘ಕಪಿಲಳ್ಳಿ ಉಂಬುಳು ಪ್ರಾಡಕ್ಟ್’ ಅಂತ ಒಂದು ಕಂಪೆನಿ ಮಾಡಿಕ. ಪೇಟೆಂಟ್ ಪಡ್ಕಂಡ್ ಎಕ್ಸ್‌ಪೋರ್ಟು ಬಿಸಿನೆಸ್ ಸುರುಮಾಡಿ ಬುಡು. ಕಪಿಲಳ್ಳಿಯ ಹೆಸ್ರ್ ವಿಶ್ವದೆಲ್ಲೆಡೆ ಕೇಳಿಬರ್ಲಿ.

ಚಿಕ್ಕಮ್ಮ ಮನಸಾರೆ ನಗಾಡ್ತ್.ಬೆಟ್ಟಗಳ ಕಡೆಗೆ ಪ್ರಯಾಣ ಹೊರೊಟೊ. ಮಾತಾಡ್ತಾ ದಾರಿ ಸಾಗಿತ್ತ್.

“ಈ ಪ್ರಾಯಲಿ ಬೆಟ್ಟಗುಡ್ಡ ಹತ್ತುದು, ಗುಹೆ ನುಗ್ಗುದು ಕಷ್ಟ ಆದೆ. ಈ ಬೀಪಿ, ಶುಗರ್ ಉಟ್ಟಲ್ಲಾ? ಹಂಞ ಹೊಟ್ಟೆ ಇಸಿರೂ ತಡೆಕೆ ಆದುಲೆ. ಬೆಟ್ಟ ಇಳೆಕಾಕನ ಕಾಲ್ ನಡ್ಗಿದೆ. ಅದಕ್ಕೇ ನಿನ್ನ ಮನೇಲಿ ಲಿಮಿಟ್ಟ್ ಮೀರಿ ಹೆಚ್ಚ್ ಪುಂಡಿ ಹೊಡ್ಡ್ ಬುಟ್ಟೆ. ಸಾಕಷ್ಟ್ ಚೀಲಕ್ಕೂ ತುಂಬಿಸಿಕಂಡಳೆ. ನೀನ್ ಮಾಡ್ದ ಪುಂಡಿನೋ, ಪಕ್ಕನೆ ನೋಡಿರೆ ಹಂದಿಗಳ ಕೊಲ್ಲಿಕೆ ಇಸಿವೆಲ್ಲಾ ನಾಡ್ ಬಾಂಬು, ಪೊಟ್ಟಾಸ್‌ಂತ ಕರ್ದವೆ. ಅದರ ಹಾಂಗೆ ಇತ್ತ್.

“ಅಷ್ಟ್ ತಿಂದ್‌ಕಂಡ್ ನೀವು ಹೀಂಗೆ ಹೇಳ್ದೊ? ನೀವ್ಗೆ ಪುಂಡಿ ಸಾಕಾಗದಿದ್ದರೆ ಅಂತ ನೇಂದ್ರ ಬಾಳೆ ಹಣ್ಣ್‌ನ ತಂದೊಳೆ. ನಂಗೆ ಬೊಳ್ಪಿಗೆ ತಿಂದದ್ ಕತ್ತಲೆವರೆಗೂ

ಸಾಕಾದೆ. ಇನ್ಸ್ ಹಸಿವೆಂದ ನಿಮ್ಮ ಕೈಕಾಲ್ ನಡ್ಗುವ ಹಾಂಗಿಲ್ಲೆ. ಹುಲಿನೋ, ಚಿರತೆನೋ, ಕಂಡ್ ನಡ್ಗಿರೆ ಮಾತ್ರ ಏನೂ ಮಾಡುವಾಂಗಿಲ್ಲೆ."

"ನಾವೀಗ ಹೊರ್ಪದ್ ಆ ಬೆಟ್ಟಗಳ ಮೂಲಕ್ಕೆ. ಒಂದು ಸರ್ತಿ ಆ ಬೆಟ್ಟಗಳ ನೆತ್ತಿಮೇಲೆ ಚಾರಣ ಮಾಡಿಯೊಳೆ. ಸುರೂಗೆ ದೊಡ್ಡ ಕಾಡ್ ಸಿಕ್ಕಿತ್. ಅಲ್ಲಲ್ಲಿ ಕಾಟಿ ಸೆಗಣಿ, ಆನೆ ಲದ್ದಿ, ಹುಲಿಗಳ ಹೇಲ್ ಇತ್ತ್. ನಾವು ಮೂವತ್ತೈದ್ ಜನ ಇದ್ದೊ. ಬೆಟ್ಟದ ನೆತ್ತಿ ಸಿಕ್ಕಿದ ಮೇಲೆ ಪ್ರಾಣಿಗಳ ಹೆದ್ರಿಕೆ ದೂರ ಆತ್. ನೆತ್ತಿ ಮೇಲೆ ನಡೆದು ತುಂಬಾ ಅಪಾಯದ ಕೆಲಸ. ಕೆಲವು ಕಡೆ ಎರ್ಡೂ ಕಡೆ ಪ್ರಪಾತ. ನಡೆಕಾಕನ ಬ್ಯಾಲೆನ್ಸ್ ಉಳ್ಸಿಕಂಡ್ ಎಚ್ಚರಿಕೆಂದ ಹೆಜ್ಜೆ ಹಾಕೊಕು. ತಲೆ ತಿರ್ಗಿರೆ ಕತೆ ಕೈಲಾಸ. ನಡ್ದ ದೂರ ಎಷ್ಟ್ ಹೊತ್ತೋ? ಕಡಿಮೆಂತೇಳಿರೆ ಐವತ್ತು ಕಿಲೋಮೀಟರ್. ಕಡೆ ಕಡೆಗೆ ನಡ್ದದಲ್ಲ, ಕಾಲ್ ಎಳ್ಕಂಡೇ ಹೋದ್ದ್. ದಾರಿ ಕರ್ಚಿಗೆಂತೇಳಿ ತಕಂಡ್ ಹೋದ ಪುಂಡಿ ಮದ್ಯಾಹ್ನನೇ ಮುಗ್ದ್ ಹೋಗಿ ತಡೆಕೆ ಬೊತ್ತದ ಹಸಿವು. ನಾ ಮಾಡ್ದ ಎಲ್ಲಾ ಚಾರಣ ಈಗ ಸರಿಯಾಗಿ ನೆನ್‌ಪಿಲ್ಲೆ. ಆದರೆ ಇದರ ಮಾತ್ರ ಎಂದೂ ಮರೆವಾಂಗಿಲ್ಲೆ."

"ನಿಮ್ಮ ಚಾರಣಗಳ ಬಗ್ಗೆ ಕೇಳಿಕಾಕನ ನಂಗೂ ಚಾರಣ ಹೋಕುಂತ ಆಸೆ ಆಗ್ತಿತ್ತ್. ನೀವ್ ಕಟ್ಟಿದ ಪುಂಡಿ ಹಾಡ್– "ಬಾರಿ ಸೊಗಸಾದ ಜಾನಪದ ತಿಂಡಿ, ಹತ್ತ್ ತಿಂದರೆ ಎಳಿಬಹುದು ಬಂಡಿ, ಅಕ್ಕಿ ರುಬ್ಬಿ ಮಾಡಬೇಕ ಉಂಡಿ, ಬೇಯ್ಸಿದರಾ ಆಗುತ್ತದಾ ಪುಂಡಿ" ಈಗಳೂ ನೆನಪುಟ್ಟು ಸರ್. 'ತಪಸ್ವಿನಿ ಉಳಿಸಿ ಬೈಸಿಕಲ್ ಜಾತಾ' ಬುಟ್ಟರೆ ನೀವು ಹುಡಿಗಿಯರ್ನ ಎಲ್ಲಿಗೂ ಕರ್ಕಂಡ್ ಹೋತ್ಲೆ. ನಂಗೆ ನಿಮ್ಮೊಟ್ಟಿಗೆ ಬಾಕೆ ಆಸೆಯಾಗಿತ್ತ್. ಕೇಳಿಕೆ ಸಂಕೋಚ. ನೀವು ಪುರುಷ ಪಕ್ಷಪಾತಿಂತ ಒಮ್ಮೊಮ್ಮೆ ಅನ್ನಿಸ್‌ತಿತ್ತ್.

ಮಾಸ್ಟ್ರಿಗೆ ನಗೆ ಬಾತ್.

"ಮನುಷ್ಯನ ಎಲ್ಲಾ ಮುಖಗಳ್ನ ಕಂಡವ ನಾನ್. ಮನುಷ್ಯ ಮೂಲತ ಅತ್ಯಂತ ಸ್ವಾರ್ತಿಯಾದ ಪ್ರಾಣಿ. ತನ್ನ ಬಗ್ಗೆ ಮಾತ್ರ ಯೋಚಿಸುವಂವ. ಕೋಳಿ ಹೇಂಟೆ ಕೇರುದೆಲ್ಲಾ ತನ್ನ ಹೊಟ್ಟೆ ಅಡಿಗೆಂತ ಉಟ್ಟಲ್ಲಾ ಹಾಂಗೆ ಬೇರೆಯವರ ಏಳಿಗೆನ ಕಂಡ್ ಸಂತೋಷ ಪಡುದು, ಬೇರೆಯವರಿಗಾಗಿ ಬದ್ಕುದು ದೊಡ್ಡತನ. ಸುತ್ತುಮುತ್ತಲ ಜನರ ನೀಚತನ, ಜಾತೀಯತೆ, ಅಲ್ಪತನ, ಮತ್ತು ಸ್ವಾರ್ತ ಕಾಂಬಕಾಕನ ನಂಗೆ ಯಾರೂ ದಿಕ್ಕಿಲ್ಲೆಂತ ಅನಿಸಿದೆ. ನನ್ನನ್ನ ನಾನ್ ಬದ್ಕಿಸಿಕಣಕ್ಕಲ್ಲಾ? ಅದಕ್ಕಾಗಿ ಪ್ರಕೃತಿಯೊಟ್ಟಿಗೆ ಒಡನಾಟ ನಡ್ಸುದು. ಗಾಳಿ ಬೀಸುದು, ನೀರ್ ಹರೀದು, ಮರಗಿಡಗಳ

ಉಸಿರಾಟ ಕ್ರಿಯೆ, ಹಕ್ಕಿಗಳ ಸ್ವರ, ಪ್ರಾಣಿಗಳ ಕೂಗು –ಎಲ್ಲಾ ಎಷ್ಟ್ ಸಹಜಾಗಿದ್ದದೆ ಅಲ್ಲಾ? ಸಹಜ ರೀತಿಲಿ ಬೊದ್ಕಿಕೆ ಪ್ರಕೃತಿ ಪ್ರೇರಣೆ ಕೊಟ್ಟದೆ. ಡಿ.ವಿ. ಗುಂಡಪ್ಪನವು ಹೇಳ್ದ್ ನೆನಪುಟ್ಟೋ ನಿಂಗೆ?

ಇಳೆಯೊಳಗೆ ಮೊಳಕೆ ಬರುವಂದು ತಮಟೆಗಳಿಲ್ಲ
ಫಲಮಾಗುವಂದು ತುತ್ತೂರಿ ದನಿಯಿಲ್ಲ
ಬೆಳಕೀವ ಸೂರ್ಯ ಚಂದ್ರರದೊಂದು ಸದ್ದಿಲ್ಲ
ಹೊಲಿ ನಿನ್ನ ತುಟಿಗಳನು ಮಂಕುತಿಮ್ಮ.

ನಾನ್ ನೆಂಟರ ಮನೆಗಳಿಗೆ, ಮೊದುವೆಗಳಿಗೆ ಹೋದು ತೀರಾ ಕಡಿಮೆ. ಇಬ್ಬರ್ ಸೇರಿಕಾಕನ ಮೂರನೆಯವ್ನ ಬೊಯ್ಯದು ಮನುಷ್ಯ ಸ್ವಭಾವ. ಪ್ರಕೃತಿ ಮಾತ್ರ ಸಹಜಾಗಿದ್ದದೆ. ನಮ್ಮ ಬೊದ್ಕಿಲಿ ಜಾತಿ, ಮತ, ಅಂತಸ್ತ್‌ಗಳ ವಿಕೃತಿಂದ ನಮ್ಮ ಸಮಾಜ ಅಡಿಮೇಲಾದೆ. ನಿನ್ನೊಟ್ಟಿಗೆ ನಾನ್ ಬಾಕೆ ಒಪ್ಪಿದ್ದ್ ಅದೇ ನೆವನಕ್ಕೆ. ಪ್ರಕೃತಿಯೊಟ್ಟಿಗೆ ಬೆರ್ತ್ ಪ್ರಕೃತಿ ಸಹಜ ಆಕೆ. ಹುಡುಗರೊಟ್ಟಿಗೆ ಬಾಕನ ಏನಾದ್ರ್ ಆದರೆ ಹೊರಿಕೆ ನಾಲ್ಕ್ ಜನ ಇದ್ದವೆಂತ ದೈರ್ಯ ಇದ್ದದೆ. ಈಗ ನಿನ್ನೊಟ್ಟಿಗೆ ಬಂದ್ ನನ್ನ ಕಡೇ ಆಸೆ ಈಡೇರುದುಲೆಂತ ಅನ್ನಿಸಿದೆ."

"ಏನ್ ಸರ್ ಅದ್, ನಿಮ್ಮ ಅಂತಿಮ ಇಚ್ಚೆ?"

"ನನ್ನ ಶರೀರನ ಮೆಡಿಕಲ್ ಉದ್ದೇಶಕ್ಕೆ 'ವೆಂಕಟಪ್ಪ ಗೌಡ್ರ ದೊಡ್ಡಾಸ್ಪತ್ರೆಗೆ ದಾನ ಮಾಡಿಯೊಳೆ. ಇಂದ್ ಈ ಕಾಡೊಳಗೆ ಎಲ್ಲಿಯಾರ್ ನಾನ್ ಕಡೆ ಉಸುರೆಳ್ದರೆ ಈ ಶರ್‍ರನ ಇಲ್ಲಿಂದ ಅಲ್ಲಿಗೆ ತಕ್ಕಂಡ್ ಹೋಕೆ ನಿನ್ನಿಂದಾಕಿಲ್ಲೆ. ನೀನ್ ನಾಲ್ಕ್ ಜನರ್‍ನ ಕರ್‌ಕಂಡ್ ಬಾಕಾಕನ ಇದ್ ಕೊಳ್ತಿದ್ದದೆ. ಆಗ ಇದ್ ಯಾರಿಗೂ ಬೇಡಾಗಿಬುಟ್ಟದೆ."

"ಸತ್ತ ಮೇಲೆ ಏನಾದರೇನ್ ಸರ್? ಇಲ್ಲೇ ಸತ್ತರೆ ಹುಲಿಗೊ, ಚಿರತೆಗೊ ಆಹಾರ ಆದದೆವೆ. ಹೇಂಗೂ ಪ್ರಕೃತಿಪ್ರಿಯರ್ ನೀವು. ನಿಮ್ಮ ದೇಹ ಹಾಂಗೆ ಸದುಪಯೋಗ ಆಗಲಿ."

ಬೆಟ್ಟ ಹತ್ತ್‌ತಾ ಹತ್ತ್‌ತಾ ಬಂದ್ ಒಂದ್ ಸಮತಟ್ಟ್ ಜಾಗಲಿ ನಿಂತೊ.

"ಓ ಅಲ್ಲಿ ನೋಡು, ಮೇಲೆಂದ ನೀರ್ ಬೀಳುವ ನೋಟ. ನೀರ್ ತುಂಬ ಇಲ್ಲೆ. ಅದ್ ಹರ್‍ದ್ ಅಲ್ಲಿಂದ ಕೆಳಗೆ ಇಳಿಯುತುಟ್ಟು. ಬೇರೆಲ್ಲೂ ನೀರಿಲ್ಲೆ. ಅದೇ ತಪಸ್ವಿನಿನ ಮೂಲ ಇರೋಕು. ಈಗ ನಿನ್ನಾಶೆ ಈಡೇರ್‌ತಲ್ಲ."

ಇಬ್ಬರೂ ಹಳ್ಳದ ಮೂಲಕ್ಕಿಳ್ದ್ ಮೋರೆ ತೊಳ್ದ್‌ಕಂಡ್ ಬೊಗಸೆ ನೀರ್ ಕುಡ್ದೋ.

"ನೀರ್ ತುಂಬಾ ರುಚಿಯಾಗುಟ್ಟು. ಇಲ್ಲಿ ಮನುಷ್ಯರಿರಿಕೆ ಸಾದ್ಯ ಇಲ್ಲೆ. ಅದಕ್ಕೆ ನೀರ್ ಹೀಂಗಿರ್ದು."ಮಾಸ್ಟ್ರ ಬೈನಾಕುಲರ್ಲಿ ಸುತ್ತು ಮುತ್ತ ಇರುವ ಪ್ರಕೃತಿನ ನೋಡುತ್ತಿದ್ದೊ.

"ಹೇಂಗುಟ್ಟು ಸರ್ ನೇಚರ್? ಎನಿ ಸ್ಪೆಷಾಲಿಟಿ?"

"ಓ! ಪನೋರಮಿಕ್ ಬ್ಯೂಟಿ. ನಿಜಕ್ಕೂ ಇದ್ ಸ್ವರ್ಗವೇ. ನದಿ ಮೂಲ ಇಷ್ಟೊಂದು ಲಾಯಕ್ಕಿರುದೂಂತ ನೆನ್ಸಿತ್ಲೆ. ಆಚೆ ಎತ್ತರ ಪ್ರದೇಶ. ಅಲ್ಲೆಲ್ಲಾ ಗುಹೆಗಳಿರೋಕು. ದೂರಲಿರುವಂತದ್ದ್ ಸ್ಪಷ್ಟಾಗಿ ಕಾಂಬೋದಿಲ್ಲೆ."

ಅಮ್ಮಣ್ಣಿ ಗಟ್ಟಿಯಾಗಿ ನಕ್ಕತ್.

"ನೀವಿನ್ನೂ ಇಪ್ಪತ್ತರ ಹೀರೋಂತ ತಿಳ್ಕೊಂಡೊಳರಿನೋ ಸಾರ್? ಇಷ್ಟಾರ್ ಕಾಂಬೋದೇ ಪುಣ್ಯ. ಸಾಕ್ ಸರ್ ನೀವು ನೋಡ್ದ್. ನಾನ್ ಹಂಞ ನೋಡ್ನೆ."

ಮಾಸ್ಟ್ರ ಬೈನಾಕುಲರ್ ಅವಳ ಕೈಗೆ ಕೊಟ್ಟೊ.

ಅಮ್ಮಣ್ಣಿ ಬೈನಾಕುಲರ್ಲಿ ಪ್ರಕೃತಿನ ನೋಡ್ತ್.

"ಅಲ್ಲಿಬ್ಬರ್ ಸನ್ಯಾಸಿಗ ಕಾಣ್‌ತ್ತೊಳ ಸಾರ್. ಓ ದೇವ್ರೆ! ಅದ್ ಅಪ್ಪನೇ ಇರೋಕು. ಇನ್ನೊಂದು ಮುಸ್ಸಂಜೆನ ಮಾಣಿಯೇ!"

"ಏನ್ ಬಡಬಡಿಸುತ್ತಿರುದು ಅಮ್ಮಣ್ಣಿ?"

ಮಾಸ್ಟ್ರ ಅವಳ್‌ಂದ ಬೈನಾಕುಲರ್ ಕಿತ್ತ್ ಕಂಡ್ ನೋಡ್ದೊ. ಅವ್ಕೆ ಏನೂ ಕಂಡತ್ಲೆ.

"ಇಲ್ಯೂಶನ್ ಬರೀ ಬ್ರಮೆ. ನಿಂಗೆ ಪಿತ್ತ ನೆತ್ತಿಗೇರಿರೊಕು. ನಂಗೇನೂ ಕಾಂಬೋದಿಲ್ಲೆ."

"ಬೇಗ ಬೇಗ ಸರ್, ನಾನಲ್ಲಿಗೆ ಹೋಗಿಯೇ ಹೋಕು. ಅಲ್ಲಿ ಒಂದಷ್ಟ್ ಇಳ್ದ್, ಆ ಮೇಲೆ ಹಂಞ ಹತ್ತಿರೆ ಗುಹೆ ಸಿಕ್ಕಿದೆ. ಅವು ಅಲ್ಲೇ ಒಳೊ. ಬನ್ನಿ ಸರ್."

ಜಾರ್ತಾ ಅವು ಕೆಳಗಿಳ್ದೊ. ತೇಗ್‌ತ್ತಾ ಮೇಲೆ ಹತ್ತಿದೊ. ಅಲ್ಲಿ ಮೇಲ್ಗಡೆ ಲೆಕ್ಕಕ್ಕೆ ಸಿಗದಷ್ಟ್ ಗುಹೆಗ ಇದ್ದೊ.ಅವ್ಳ್ ಹೇಳ್ದ ಸನ್ಯಾಸಿಗ ಅಲ್ಲಿ ಇತ್ಲೆ.

"ಓ ಹೋಯ್! ಇಲ್ಲಿ ಯಾರಾದ್ರೂ ಒಳರಿಯೊನೋ?"

ಅಮ್ಮಣ್ಣಿನ ದನಿ ಅನಂತಲಿ ಮತ್ತೆ ಮತ್ತೆ ಕೇಳಿ ಕಡೆಗೆ ಕೇಳದಾತ್.

———*** ———

# ಇರುದರನೆಲ್ಲ ಬುಟ್ಟ್

**"ಇರುದರನೆಲ್ಲ ಬುಟ್ಟ್'** ಡಾ। ಪ್ರಭಾಕರ ಶಿಶಿಲರ ಸಾಹಿತ್ಯ ಜೋಳಿಗೆಂದ ಹೊರಗೆ ಬಂದ ಒಂದ್ ಒಳ್ಳ ಡಾಕ್ಯುಮೆಂಟರಿ ಅಂತ ಹೇಳಕ್. ಯಾಕೆ ಅಂತ್ಹೇಳಿರೆ ಈ ಕಾದಂಬರೀಲಿ ಬರುವ ಪ್ರಕೃತಿ ವರ್ಣನೆ ಇರ್ದು, ಪಾತ್ರಗ ಇರ್ದು, ಒಟ್ಟು ಕಥೆಯ ತಿರ್ಲ್ ಎಲ್ಲಾನೂ ಸುಳ್ಯ ಸುತ್ತ ಮುತ್ತ ಕಾಂಬಕೆ ಸಿಕ್ಕುವ ಸಂಗತಿಗಳೆ. ಅದ್ರಲ್ಲೂ ಗೌಡ ಜನಾಂಗದ ಕಥೆ, ಕುಸಾಲ್, ಗಮ್ಮತ್ತ್, ಕ್ರಮ ನಿಯಮ ಎಲ್ಲಾನು ಇಲ್ಲಿ ಬಂದದೆ. ಹಾಂಗಾಗಿ ಕುಯಿಂತೋಡು ದಾಮೋದರ ಇವು ಇದರ ಅರೆಗನ್ನಡಕ್ಕೆ ಅನುವಾದ ಮಾಡಿಕೆ ಹೊರ್ಟದ್. ಬರ್ದ್, ಹರ್ದ್, ತಿದ್ದಿ ಗುದ್ದಿ ಕಡೆಗೂ ಅರೆಗನ್ನಡಲಿ ಒಂದು ಒಳ್ಳ ಕಾದಂಬರೀನ ನಮ್ಮ ಮುಂದೆ ಇಸ್ರ್ಯೊಳೊ. ಎಲ್ಲ ಜನ ಇದರ ಓದಿ ಬರ್ದವ್ರೆ ಇನ್ನೂ ಬರ್ಯೆಕೆ ಪ್ರೋತ್ಸಾಹ ಕೊಡೊಕು ಅಂತ ನಮ್ಮ ಅರಿಕೆ.

–ಪ್ರಕಾಶಕ

ಅಮ್ಮ ಪ್ರಕಾಶನ

